

ಶ್ರೀಕಾಶೀನಾಥಗ್ರಂಥಮಾಲಾ

ಸಪ್ತಮಪುಷ್ಪ

ತ್ರಿಲೋಚನಶಿವಾಚಾರ್ಯರಿಂದ ವಿರಚಿತವಾದ

# ಸಿದ್ಧಾಂತಸಾರಾವಳಿ

ಈ ಗ್ರಂಥವು

ಪೂರ್ವೋತ್ತರಮೀಮಾಂಸಾಭೂಷಣವಿದ್ಯಾನಿಧಿ

**ದೇವಶಿಖಾಮಣಿ ರಾಮಾನುಜಾಚಾರ್ಯರಿಂದ**

ರಚಿತವಾದ ಕರ್ಣಾಟಕ ಟಿಪ್ಪಣಿಯೊಡನೆ

ಮುದ್ರಿಸಿ ಪ್ರಕಟಿಸಲ್ಪಟ್ಟಿತು

ಮೈಸೂರು :

ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್,

**1930**

ಶ್ರೀ ಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು



# ಪ್ರಸ್ತಾವನೆ.

ಶೈವಸಿದ್ಧಾಂತವನ್ನು ಪ್ರತಿಪಾದಿಸುವ ಸಮಸ್ತಗ್ರಂಥಗಳಿಗೆ ಮಸ್ತಕಮಣಿಯಂತಿರುವ "**ಸಿದ್ಧಾಂತಸಾರಾವಳಿ**" ಎಂಬೀ ಗ್ರಂಥವು ಲೋಕವಿಖ್ಯಾತರಾದ ತ್ರಿಲೋಚನ ಶಿವಾಚಾರ್ಯರೆಂಬ ಮಹನೀಯರಿಂದ ರಚಿಸಲ್ಪಟ್ಟಿರುವುದು. ಈ ಶಿವಾಚಾರ್ಯರು ಶೈವಾಗಮಗ್ರಂಥಗಳಲ್ಲಿ ಸಂಪೂರ್ಣ ಜ್ಞಾನವನ್ನು ಪಡೆಯಬೇಕೆಂಬ ಉತ್ಕಟೇಚ್ಛೆಯಿಂದ ಪರಶಿವನನ್ನು ಕುರಿತು ಅನುಪಮವಾದ ತಪಸ್ಸನ್ನು ಮಾಡಿ ಅವನ ಅನುಗ್ರಹದಿಂದ ಮೂರು ಕಣ್ಣುಗಳನ್ನು ಪಡೆದು ಶೈವಸಿದ್ಧಾಂತದಲ್ಲಿ ಅದ್ವಿತೀಯ ಪಾಂಡಿತ್ಯವನ್ನು ಸಂಪಾದಿಸಿಕೊಂಡುದುದರಿಂದ ಇವರು ಲೋಕದಲ್ಲಿ **ತ್ರಿಲೋಚನಶಿವಾಚಾರ್ಯ**ರೆಂಬ ಪವಿತ್ರಾಭಿಧಾನದಿಂದ ವಿಖ್ಯಾತರಾಗಿ ಮೆರೆದರು. ಶಿವಾನುಗೃಹೀತರಾದ ಈ ಶಿವಾಚಾರ್ಯರು ಶೈವಸಿದ್ಧಾಂತೋಪದೇಶದ್ವಾರಾ ಮಾನವಕೋಟಿಯನ್ನುದ್ಧರಿಸಬೇಕೆಂಬ ಸದುದ್ದೇಶದಿಂದ ಶೈವಾಗಮಗಳಲ್ಲುಕ್ತವಾಗಿರುವ ಸಿದ್ಧಾಂತಗಳ ಸಾರಾಂಶವನ್ನು ಸಾಲಾಗಿ ಈ ಗ್ರಂಥದಲ್ಲಿ ಹೇಳಿರುವದರಿಂದ ಈ ಗ್ರಂಥವು "**ಸಿದ್ಧಾಂತಸಾರಾವಳಿ**" ಎಂಬ ಹೆಸರಿನಿಂದ ಶೋಭಿತವಾಯಿತು.

ಈ ಗ್ರಂಥದಲ್ಲಿ **ಜ್ಞಾನಪಾದ, ಕ್ರಿಯಾಪಾದ, ಯೋಗಪಾದ, ಚರ್ಯಾಪಾದ**ಗಳೆಂದು ಅನುಕ್ರಮವಾಗಿ ನಾಲ್ಕು ಪಾದಗಳು ಉಕ್ತಗಳಾಗಿವೆ. ತತ್ತ್ವವು ಇಂಥದೆಂದು ತಿಳಿದ ಹೊರತು ಮುಮುಕ್ಷುಗಳಿಗೆ ಮೋಕ್ಷಾಭಿರುಚಿಯುಂಟಾಗುವದಿಲ್ಲವಾದುದರಿಂದ ಪತಿ, ಪಶು, ಪಾಶಗಳೆಂಬ ಮೂರು ತತ್ತ್ವಗಳನ್ನು ತೋರಿಸಿಕೊಡುವುದೇ ಮೊದಲನೆಯ **ಜ್ಞಾನಪಾದ**ವೆನಿಸುವುದು.

ತತ್ತ್ವಗಳನ್ನು ಕ್ರಿಯಾವಿಶಿಷ್ಟಗಳನ್ನಾಗಿ ಮಾಡುವ (ಪ್ರೇರಿಸುವ) ಅಧಿದೇವತೆಗಳನ್ನು ತಿಳಿದು ಆ ದೇವತೆಗಳನ್ನು ಅನುಸರಿಸುವುದೇ ಕ್ರಿಯೆಯೆನಿಸಿಕೊಳ್ಳುವುದು. ಈ ಕ್ರಿಯೆಯು ಬಾಹ್ಯ ಹಾಗೂ ಅಭ್ಯಂತರ ಎಂದು ಎರಡು ಪ್ರಕಾರವಾಗಿರುವುದು. ತತ್ತ್ವಜ್ಞಾನಿಗಳಿಂದ ಈ ಎರಡೂ ಕ್ರಿಯೆಗಳು ಪರಶಿವನ ಪೂಜೆಗೋಸುಗ ಮುಖ್ಯವಾಗಿ ಅಭ್ಯಸಿಸಲ್ಪಡಬೇಕಾಗಿರುವುದರಿಂದ, ಈ ಕ್ರಿಯೆಗಳ ಸ್ವರೂಪವನ್ನು ತೋರಿಸುವುದೇ ಎರಡನೆಯ **ಕ್ರಿಯಾಪಾದ**ವೆನಿಸುವುದು.

ತತ್ತ್ವಗಳನ್ನು ಶೋಧಿಸಿ ಅಧ್ವಮೂರ್ತಿಗಳನ್ನು ಪೂಜಿಸುವುದರ ಮೂಲಕ ಶಿವಜ್ಞಾನವನ್ನು ಪಡೆಯಬೇಕಾಗಿರುವುದರಿಂದ, ಕರ್ಮಾಧೀನವಾದ ಮನಸ್ಸು ಇದಕ್ಕೆ ಪ್ರತಿಕೂಲವಾಗದ ರೀತಿಯಲ್ಲಿ ವಾಯುಧಾರಣಾದಿಯೋಗಾಭ್ಯಾಸವನ್ನು ಮಾಡಿ, ಆ ಮನಸ್ಸನ್ನು ಶಿವನೊಡನೆ ಸೇರಿಸುವಿಕೆಯೆಂಬ ಯೋಗದ ಸ್ವರೂಪವನ್ನು ತಿಳು ಹಿಸುವುದೇ ಮೂರನೆಯದಾದ **ಯೋಗಪಾದ**ವೆನಿಸುವುದು.

ಇದರಮೇಲೆ ದುಷ್ಕರ್ಮಪ್ರಾಚುರ್ಯದಿಂದ ತನು, ಕರಣ, ಭುವನ, ಭೋಗ ಗಳಿಗೆ ಹೊಂದಿಕೆಯಿಲ್ಲದೆ ಮನಶ್ಚಾಂಚಲ್ಯವುಳ್ಳವರಾಗಿ ಜ್ಞಾನಸಂಪಾದನೆಗೆ ಅಸ ಮರ್ಥರಾದವರು ಚರ್ಯೆಯಿಂದಲೇ ಅದನ್ನು ಪಡೆಯಬೇಕಾಗಿರುವುದರಿಂದ ಈ ಚರ್ಯಾಸ್ವರೂಪವನ್ನು ಪ್ರತಿಪಾದಿಸುವುದೇ ನಾಲ್ಕನೆಯದಾದ **ಚರ್ಯಾಪಾದ** ವೆನಿಸುವುದು.

ಈ ನಾಲ್ಕು ಪಾದಗಳ ವಿಷಯವೇ ಯಾವತ್ತು ಶೈವಾಗಮಗಳಲ್ಲಿ ವಿಶದ ವಾಗಿ ವರ್ಣಿಸಲ್ಪಡುವುದು. ಕೋಟ್ಯವಧಿ ಶ್ಲೋಕಗಳುಳ್ಳಂಥ ಯಾವತ್ತು ಶೈವಾ ಗಮಗಳ ಸಾರವನ್ನು ಈ ಶಿವಾಚಾರ್ಯರು ಕೇವಲ ಒಂದುನೂರು ಅರವತ್ತುಮೂರು ಶ್ಲೋಕಗಳಲ್ಲಿ ಗರ್ಭೀಕರಿಸಿರುವುದನ್ನು ನೋಡಿದರೆ ಇವರ ಪಾಂಡಿತ್ಯದ ಪ್ರಭಾವ ವನ್ನು ಇಷ್ಟೇ ಎಂದು ವರ್ಣನಮಾಡಲಿಕ್ಕೆ ಸಹಸ್ರಮುಖಗಳುಳ್ಳ ಆದಿಶೇಷನಿಂದ ಲೂ ಸಹ ಸಾಧ್ಯವಿಲ್ಲವೆಂದು ಹೇಳಬಹುದಾಗಿದೆ. ಈ ಗ್ರಂಥವನ್ನು ರಚಿಸಿದ ತ್ರಿಲೋಚನ ಶಿವಾಚಾರ್ಯರು ಬಹು ಪ್ರಾಚೀನರು. ಇವರೀಗ್ರಂಥದ ಪ್ರಮಾಣ ವನ್ನು ಲಿಂಗಾಧಾರಣಚಂದ್ರಿಕಾಕರ್ತರೇ ಮೊದಲಾದ ಅನೇಕಜನ ಪ್ರಕಾಂಡ ಪಂಡಿ ತರು ತಮ್ಮ ತಮ್ಮ ಗ್ರಂಥಗಳಲ್ಲಿ ಉಲ್ಲೇಖಿಸಿರುವರು. ಈ ಗ್ರಂಥಕ್ಕೆ ಪ್ರಾಚೀನಾ ಚಾರ್ಯರು ಸಂಸ್ಕೃತ ಭಾಷೆಯಲ್ಲಿಯೂ, ತಮಿಳು ಭಾಷೆಯಲ್ಲಿಯೂ ಬಹು ವಿಶಾಲವಾದ ವ್ಯಾಖ್ಯಾನಗಳನ್ನು ರಚಿಸಿದ್ದಾರೆ. ಈ ಗ್ರಂಥವು ವ್ಯಾಖ್ಯಾನದ ಸಹಾಯವಿಲ್ಲದೆ ಅರ್ಥವಾಗುವಂತಿಲ್ಲ. ಕರ್ಣಾಟಕದೇಶೀಯರಾದ ಶೈವಬಾಂಧವರಿಗೆ ಈ ಗ್ರಂಥದ ಉಪಯೋಗವು ಯತ್ಕಿಂಚಿತ್ತಾದರೂ ಆಗಲೆಂಬ ಸದುದ್ದೇಶದಿಂದ **ನಾಗನೂರು ಬೃಹನ್ಮಠಾಧ್ಯಕ್ಷರಾದ ವೇ॥ ಪಂ॥ ಶ್ರೀ ಕಾಶೀನಾಥ ಶಾಸ್ತ್ರಿಗಳವರ** ಅಭಿಪ್ರಾಯವನ್ನನುಸರಿಸಿ, ಮೈಸೂರು ರಾಜಧಾನೀ ನಿವಾಸಿ ಗಳಾದ**ಪೂರ್ವೋತ್ತರಮೀಮಾಂಸಾಭೂಷಣ, ವಿದ್ಯಾನಿಧಿ, ವಿದ್ವಾ ದೇವಶಿಖಾಮಣಿ ರಾಮಾನುಜಾಚಾರ್ಯ** ಮಹೋದಯರು ಸಂಕ್ಷಿಪ್ತ ವಾದ ಕನ್ನಡ ಟೀಕೆಯನ್ನು ರಚಿಸಿ ಸಮಸ್ತ ಶೈವರ ಚಿರಕೃತಜ್ಞತೆಗೆ ಪಾತ್ರರಾ

ಗಿದ್ದಾರೆ. ಈ ಮಹೋದಯರು ಶ್ರೀವೈಷ್ಣವಮತೀಯರಾದಾಗ್ಯೂ ಇವರಲ್ಲಿರತಕ್ಕ ಶೈವಗ್ರಂಥಪ್ರೀತಿಯನ್ನು ನೋಡಿದರೆ ಅತ್ಯಾನಂದವೆನಿಸುತ್ತದೆ. ಅಸಾಧಾರಣ ಪಂಡಿತರೂ, ನಿಷ್ಪಕ್ಷಪಾತಿಗಳೂ, ಗುಣಗ್ರಾಹಿಗಳೂ ಆದ ಈ ಮಹೋದಯರಿಗೆ ಶ್ರೀ ಪರಮೇಶ್ವರನು ಆಯುರಾರೋಗ್ಯಭಾಗ್ಯಾದಿಗಳನ್ನು ಕೊಟ್ಟು ರಕ್ಷಿಸಲೆಂದು ಹಾರೈಸುತ್ತೇನೆ. ಲೋಕವಿಖ್ಯಾತವಾದ ಈ ಗ್ರಂಥ ಮುದ್ರಣಕ್ಕೋಸ್ಕರ ವಯೋವೃದ್ಧರೂ, ಜ್ಞಾನವೃದ್ಧರೂ, ಲಿಂಗಪೂಜಾಲೋಲರೂ, ಸಾಧುಸ್ವಭಾವಿಗಳೂ, ವಿದ್ಯಾಭಿಮಾನಿಗಳೂ ಆದ ಜಮುಖಂಡಿ ಸಂಸ್ಥಾನ **ಕುಂದಗೋಳ ಪಂಚಗೃಹ ಬೃಹನ್ಮಠಾಧೀಶ ಶ್ರೀ ಪಟ್ಟಾಧ್ಯಕ್ಷ ಚನ್ನಬಸವಸ್ವಾಮಿಗಳೆಂಬ** ತಪಸ್ವಿಗಳು ಪೂರ್ಣವಾಗಿ ಸಹಾಯಮಾಡಿದ್ದಾರೆ. ಇಂಥ ಮಹನೀಯರು ನಮ್ಮಾಭರತಭೂಮಿಯಲ್ಲಿ ಬಹುಕಾಲ ಬಾಳಿ ಶೈವಸಾಮ್ರಾಜ್ಯವನ್ನು ಉದ್ಧರಿಸಲೆಂದು ಕೋರುವ,

ಶ್ರೀ ಶಾಲಿವಾಹನಶಕ ೧೮೫೩
ಪ್ರಮೋದನಾಮ ಸಂ||
ವೈಶಾಖ ಶುದ್ಧ ೫.

**ಪ್ರಸಿದ್ಧಕರ್ತಾ.**



॥ ಶ್ರೀಃ ॥



ನಾಗನೂರು ಬೃಹನ್ಮಠಾಧ್ಯಕ್ಷರಾದ
ಪಂಡಿತ ಶ್ರೀ ಕಾಶೀನಾಥಶಾಸ್ತ್ರಿಗಳವರು.

॥ ಶ್ರೀಃ ॥



ನಾಗನೂರು ಬೃಹನ್ಮಠಾಧ್ಯಕ್ಷರಾದ
ಪಂಡಿತ ಶ್ರೀ ಕಾಶೀನಾಥಶಾಸ್ತ್ರಿಗಳವರು.



ಶ್ರೀ ಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು.

# ಸಿದ್ಧಾಂತಸಾರಾವಳಿ

**ಸರ್ವಶ್ಶರ್ವಶ್ಶಿವಸ್ಥಾಣುರಿತ್ಯಾದ್ಯೈರ್ದಿವ್ಯನಾಮಭಿಃ ।**
**ಕಥ್ಯತೇ ಯತ್ಪರಂ ಬ್ರಹ್ಮ ನಮಸ್ತಸ್ಮೈಪರಾತ್ಮನೇ ॥**
**ವಿದುಷಾಮಿಹ ಕೇಷಾಂ ಚಿದ್ವಾಂಛಿತಾ ದೇಶಭಾಷಯಾ ।**
**ವ್ಯಾಖ್ಯಾ ಸಿದ್ಧಾಂತಸಾರಾಳೇಃ ಸಂಕ್ಷಿಪ್ತಾ ಕ್ರಿಯತೇ ಮಯಾ ॥**

**ಅವತರಣಿಕೆ**—ಆಮರ್ದಕಮಠದಲ್ಲಿರುವ ಸಕಲಾಗಮಗ್ರಂಥಗಳ ಎಲ್ಲೆಯನ್ನು ಅರಿತಿರುವ ಶ್ರೀ ತ್ರಿಲೋಚನಶಿವಾಚಾರ್ಯರು ತಮಗೆ ಪರಂಪರೆಯಾಗಿ ಬಂದಿರುವ ಕಾಮಿಕಾಗಮಸಿದ್ಧಾಂತವನ್ನೂ, ಅದರ ಒಳಭೇದಗಳಾದ ಮೃಗೇಂದ್ರ ಮೊದಲಾದ ಆಗಮಗಳ ಸಿದ್ಧಾಂತಗಳನ್ನೂ ಚೆನ್ನಾಗಿ ವಿಚಾರಿಸಿ, ಅವುಗಳನ್ನು ಪ್ರಮಾಣಗಳನ್ನಾಗಿಟ್ಟುಕೊಂಡು ಅರ್ಥಸ್ಥಿತಿಯನ್ನು ನಿಶ್ಚಯಿಸಿ, ಮೂರು ಪದಾರ್ಥಗಳನ್ನೂ ನಾಲ್ಕು ಪಾದಗಳನ್ನೂ ಒಳಗೊಂಡಿರುವ **ಸಿದ್ಧಾಂತಸಾರಾವಳಿ** ಯೆಂಬ ಗ್ರಂಥವನ್ನು ಶ್ಲೋಕರೂಪವಾಗಿ ರಚಿಸಲುಪಕ್ರಮಿಸಿ ಅದು ನಿರ್ವಿಘ್ನವಾಗಿ ನೆರವೇರುವುದಕ್ಕೋಸ್ಕರ ನಿಷ್ಕಲಮೂಲಮಂತ್ರದ ಉಚ್ಚಾರಣಭೇದಕ್ರಮದಂತೆ ಪರಶಿವನ ನಮಸ್ಕಾರರೂಪವಾದ ಮಂಗಳವನ್ನು ಪ್ರಥಮಶ್ಲೋಕದಲ್ಲಿ ಮಾಡುತ್ತಾರೆ.

**ಓತಂ ಯೇನ ಜಗಚ್ಚರಾಚರಮಿದಂ ಪ್ರೋತಂ ಚ ಸರ್ವಂ ಸದಾ**
**ಚ್ಯೋತಂತೇ ಪಶವೋಪಿ ಪಾಶನಿಕರಾದ್ಯಸ್ಯ ಪ್ರಸಾದೇನ ತತ್ ।**
**ಓಮಿತ್ಯಾದಿಮನೂಚ್ಚರಧ್ವನಿಗತಂ ಜ್ಯೋತಿಷ್ಕೃತಾಂ ದ್ಯೋತಕಂ**
**ವ್ಯೋಮವ್ಯಾಪಿ ಪರಂ ಶಿವಾಖ್ಯಮಕಲಂ ಜ್ಯೋತಿಃಪ್ರಪದ್ಯೇಧಿಯಾ॥೧॥**

**ಟೀಕೆ**= ಯೇನ—ಪಟಕ್ಕೆ ಕುಲಾಲನಂತೆ, ಪ್ರಪಂಚಕ್ಕೆ ನಿಮಿತ್ತಕಾರಣಮಾತ್ರವೆನಿಸಿಕೊಂಡಿರುವ ನಿಷ್ಕಲಶಿವನೆಂಬ ಯಾವಜ್ಯೋತಿಯಿಂದ, ಚರಾಚರಂ—ಸ್ಥಾವರಜಂಗಮರೂಪವಾಗಿ ಕಾಣಲ್ಪಡುತ್ತಿರುವ, ಇದಂ ಜಗತ್ ಸರ್ವಂ—ಈ

ಪ್ರಪಂಚವೆಲ್ಲವೂ ಸದಾ—ಯಾವಾಗಲೂ, ಓತಂ-ಪ್ರೋತಂಚ—ಒಳಗೂ ಹೊರಗೂ ಕೆಳಗೂ ಮೇಲೂ ಸುತ್ತುಮುತ್ತಲೂ ಪೋಣಿಸಲ್ಪಟ್ಟಿರುವುದೋ (ವ್ಯಾಪಿಸಲ್ಪಟ್ಟಿರುವುದೋ) ಪಶವೋಽಪಿ—ಮೂರು ಬಗೆಯ ಆತ್ಮಗಳು, ಯಸ್ಯ—ಪರಶಿವನೆಂಬ ಯಾವುದೊಂದು ತೇಜಸ್ಸಿನ, ಪ್ರಸಾದೇನ—ಅನುಗ್ರಹದಿಂದ, ಪಾಶನಿಕರಾತ್---ಮಲ, ಮಾಯೆ, ಕರ್ಮ, ಬಿಂದು, ತಿರೋಧಾನಶಕ್ತಿ ಎಂಬ ಐದುಬಗೆಯಾದ ಪಾಶಗಳ ಸಮೂಹದದೆಸೆಯಿಂದ, ಚ್ಯೋತಂತೇ—ದೂರವಾಗುವುವೋ (ಮುಕ್ತಗಳಾಗುವುವೋ) ಓಮಿತ್ಯಾದಿಮನೂಚ್ಚರಧ್ವನಿಗತಂ—ಓಂಕಾರವನ್ನು ಆದಿಭಾಗದಲ್ಲಿ ಪಡೆದಿರುವ ಪ್ರಸಾದಮಂತ್ರದ, ಉಚ್ಚಾರಣೆಯಿಂದ ಉಂಟಾದ ನಾದನಾದಾಂತರೂಪವಾದ ಧ್ವನಿಯಲ್ಲಿ ಇರುವಂಥದಾಗಿಯೂ, ಜ್ಯೋತಿಷ್ಮತಾಂ—ತೇಜೋವಿಶಿಷ್ಟರಾದ ಅನಾಹತ, ಶಿವ, ಸದಾಶಿವ, ಮಹೇಶ್ವರ, ರುದ್ರ, ವಿಷ್ಣು, ಬ್ರಹ್ಮ ಇವರೇ ಮೊದಲಾದವರಿಗೆ, ದ್ಯೋತಕಂ—ಪ್ರಕಾಶಕವಾಗಿಯೂ (ಪ್ರಕಾಶವನ್ನು ಕೊಡುವಂಥದಾಗಿಯೂ), ವ್ಯೋಮವ್ಯಾಪಿಪರಂ—ವ್ಯಾಪಿನಿಗಿಂತಲೂ ನಾಲ್ಕು ಅಂಗುಲ ಮೇಲುಭಾಗದಲ್ಲಿ ಇರುವ ವ್ಯೋಮವೆಂಬ ಸಮನೆಯ ಸ್ಥಾನವನ್ನು ವ್ಯಾಪಿಸಿಕೊಂಡಿರುವ ಅನಾಹತಶಕ್ತಿಗಿಂತಲೂ ಮೇಲಾದುದಾಗಿಯೂ ಇರುವ, ಶಿವಾಖ್ಯಂ—ಶಿವನೆಂದು ಹೆಸರುಳ್ಳ, ಅಕಲಂ—ನಿಷ್ಕಲವಾದ, ಜ್ಯೋತಿಃ—ಪರಿಪೂರ್ಣಪ್ರಕಾಶಸ್ವರೂಪವಾದ ತೇಜಸ್ಸನ್ನು, ಧಿಯಾ—ಸೋಽಹಂಭಾವನಾಬುದ್ಧಿಯಿಂದ, ಪ್ರಪದ್ಯೇ—ಹೊಂದುತ್ತೇನೆ. (ಧ್ಯಾನಿಸುತ್ತೇನೆ)

**ಅವತರಣಿಕೆ**—ಮನೋಮಾತ್ರಾವಶಿಷ್ಟನಾಗಿ ಪರಾಶಕ್ತಿಯನ್ನು ಅತಿಕ್ರಮಿಸುವ ಪರಶಿವನು ಸೃಷ್ಟಿ, ಸ್ಥಿತಿ, ಸಂಹಾರ, ನಿಗ್ರಹ, ಅನುಗ್ರಹಗಳೆಂಬ ಪಂಚಕೃತ್ಯಗಳನ್ನು ನಡೆಯಿಸುವುದಕ್ಕಾಗಿ ಪರಾಶಕ್ತಿಯೊಡನೆ ಕೂಡಿ ಸದಾಶಿವನೇ ಮೊದಲಾದ ಬೇರೆಬೇರೆ ಹೆಸರುಗಳನ್ನು ಪಡೆಯುತ್ತಾನೆಂದು ಎರಡನೆಯ ಶ್ಲೋಕದಲ್ಲಿ ಹೇಳುತ್ತಾರೆ.

**ಶಾಂತಸ್ಸರ್ವಕೃದವ್ಯಯಸ್ಸಕಲವಿತ್ಸ್ವಾನ್ಯಪ್ರಕಾಶೋಽಚಲೋಽ**
**ಮೇಯೋಬ್ರಹ್ಮ ಪರೋಽಹ್ಯನಾದಿರತುಲಃಸೂಕ್ಷ್ಮೋಮಹಾಂಶ್ಚಿದ್ಘನಃ ।**
**ವ್ಯಾಪೀ ಮುಕ್ತಸಖಸ್ಸಶಕ್ತಿರಮಲೋಽಪ್ಯದ್ಯೋಗರ್ವಾ ಬ್ರಹ್ಮಗಃ**
**ಸಾದಾಖ್ಯಸ್ಸಕಲಾಧಿಪೋಽಧ್ವನಿ ಸಿತೇಽನಂತಶ್ಚ ರುದ್ರೋಽಸಿತೇ ॥೨॥**

**ಟೀಕೆ**=ಶಾಂತಃ—ಮಲಮುಂತಾದುವುಗಳಿಲ್ಲವಾದುದರಿಂದ ರಾಗದ್ವೇಷಾದಿಗಳನ್ನು ಬಿಟ್ಟು ಶಾಂತನಾಗಿರುವ, ಸರ್ವಕೃತ್—ಸ್ವತಂತ್ರನಾದುದರಿಂದ

ಸರ್ವಕರ್ತೃವಾಗಿರುವ, ಅವ್ಯಯಃ—ಪರಿಪೂರ್ಣನಾದುದರಿಂದ ಮಹಾಪ್ರಳಯ ಗಳಲ್ಲಿ ಶಕ್ತಿರೂಪವಾಗಿ ಲಯಿಸುವಿಕೆಯೆಂಬ ನಾಶವಿಲ್ಲದವನಾಗಿರುವ, ಸಕಲ ವಿತ್—ಜ್ಞಾನಶಕ್ತಿಯಿಂದ ಸಮಸ್ತವನ್ನು ತಿಳಿದು ಸರ್ವಜ್ಞನೆನಿಸಿಕೊಂಡಿರುವ, ಸ್ವಾನ್ಯಪ್ರಕಾಶಃ-ತನ್ನನ್ನೂ ಹಾಗೂ ಇತರ ವಸ್ತುಗಳನ್ನೂ ಪ್ರಕಾಶಪಡಿಸುತ್ತಿರುವ, ಅಚಲಃ—ಚಲನಕ್ರಿಯಾರಹಿತನಾಗಿರುವ, ಅಮೇಯಃ—ಇಷ್ಟೆಂದು ಪರಿಚ್ಛೇದಿಸ ಲಶಕ್ಯನಾಗಿರುವ, ಬ್ರಹ್ಮಪರಃ—ಚತುರ್ಮುಖಬ್ರಹ್ಮನಿಗಿಂತಲೂ ಶ್ರೇಷ್ಠನಾಗಿರುವ ಅನಾದಿಃ—ಕಾಲಾತೀತನಾಗಿರುವ ಅಥವಾ, ಕಾರಣರಹಿತನಾಗಿರುವ, (ಸ್ವತಃಸಿದ್ಧ ನಾಗಿರುವ) ಅತುಲಃ—ಉಪಮಾನರಹಿತನಾಗಿರುವ, ಸೂಕ್ಷ್ಮಃ—ಸೂಕ್ಷ್ಮವಸ್ತು ವಿಗಿಂತಲೂ ಅತಿಸೂಕ್ಷ್ಮನಾಗಿರುವ, ಮಹಾನ್—ದೊಡ್ಡವಸ್ತುವಿಗಿಂತಲೂ ಬಲು ದೊಡ್ಡವನಾಗಿರುವ, ಚಿದ್ಘನಃ—ಜ್ಞಾನೈಕಸ್ವರೂಪನಾಗಿರುವ, ವ್ಯಾಪೀ—ಸರ್ವ ವ್ಯಾಪಕನಾಗಿರುವ, ಮುಕ್ತಸಖಃ—ಮುಕ್ತಾತ್ಮರಿಗೆ ಪ್ರಿಯನಾಗಿರುವ, ಸಶಕ್ತಿಃ— ಪರಾಶಕ್ತಿಯೊಡನೆ ಕೂಡಿಕೊಂಡಿರುವ ಅಮಲಃ—ಅನಾದಿಮಲಶೂನ್ಯನಾಗಿರುವ, ಉದ್ಯೋಗವಾನ್—ಸೃಷ್ಟಿ-ಸ್ಥಿತಿ-ಸಂಹಾರ-ನಿಗ್ರಹಾನುಗ್ರಹಗಳೆಂಬ ಪಂಚಕೃ ತ್ಯಗಳುಳ್ಳವನಾಗಿರುವ, ಬ್ರಹ್ಮಗಃ—ಮೂರ್ತಿಬ್ರಹ್ಮ, ತತ್ತ್ವಬ್ರಹ್ಮ, ಭೂತ ಬ್ರಹ್ಮ, ಪಿಂಡಬ್ರಹ್ಮ, ಕಲಾಬ್ರಹ್ಮ, ಪದಬ್ರಹ್ಮ ಎಂಬ ಷಡ್ವಿಧಬ್ರಹ್ಮಸ್ವರೂಪ ನಾಗಿರುವ, ಸಾದಾಖ್ಯಃ—ಸದಾಶಿವನೆಂಬ ನಾಮಧೇಯವನ್ನು ಪಡೆದವನು, ಸಿತೇ ಅಧ್ವನಿ—ಶುದ್ಧಾಧ್ವದಲ್ಲಿ, ಸಕಲಾಧಿಪಃ—ಸಕಲರೆನಿಸಿಕೊಂಡ ಅನಂತಾದಿ ಗಳಿಗೆ ಸ್ವತಂತ್ರಕರ್ತೃವಾಗಿರುವನು. ಅನಂತಃ—ಅನಂತನೆಂಬ ನಾಮಧೇಯ ವನ್ನು ಪಡೆದವನೂ, ರುದ್ರಶ್ಚ—ರುದ್ರನೆಂಬ ನಾಮಧೇಯವನ್ನು ಪಡೆದವನೂ, ಚಕಾರದಿಂದ ಶ್ರೀಕಂಠನಾಮಧೇಯವನ್ನು ಪಡೆದವನೂ, ಅಸಿತೇ ಅಧ್ವನಿ— ಅಶುದ್ಧಾಧ್ವದಲ್ಲಿ ಕರ್ತೃಗಳಾಗಿರುವರು. ಶುದ್ಧಾಧ್ವದಲ್ಲಿ ಸದಾಶಿವನೂ, ಅಶು ದ್ಧಾಧ್ವದಲ್ಲಿ ಶ್ರೀಕಂಠರುದ್ರರೂ, ಶುದ್ಧಾಶುದ್ಧಾಧ್ವಗಳಲ್ಲಿ ಅನಂತೇಶ್ವರನೂ ಕರ್ತೃಗಳಾಗಿರುವರೆಂದು ಅಭಿಪ್ರಾಯವು.

**ಅವತರಣಿಕೆ**—ಸದಾಶಿವನೂ ಪರಶಿವನೂ ಧರ್ಮಧರ್ಮಿಸ್ವರೂಪರಾಗಿ ಸೇರಿರುವರೆಂಬ ಭಾವಾಕಾರವನ್ನು ಮೂರನೆಯ ಶ್ಲೋಕದಲ್ಲಿ ಹೇಳುತ್ತಾರೆ.

**ಪರಾನಪೇಕ್ಷಂ ಶಿವಸಂಜ್ಞಮಸ್ಯ**
**ರೂಪಂ ಪರಾಪೇಕ್ಷಮಪಿ ಶ್ರುತಿಜ್ಞಾಃ ।**
**ಶಕ್ತ್ಯಾಖ್ಯಮಾಹುಸ್ತದಭಿನ್ನರೂಪಃ**
**ಸ ಧರ್ಮ್ಯಈಶಃ ಸ ಚ ಧರ್ಮಿರೂಪಃ ॥೩॥**

**ಟೀಕೆ—** ಶ್ರುತಿಜ್ಞಾಃ-ಆಗಮಜ್ಞಾನವುಳ್ಳ ಆಚಾರ್ಯರು, ಪರಾನಪೇಕ್ಷಂ-ಪರಶಿವಾಪೇಕ್ಷೆಯಿಲ್ಲದುದಾಗಿಯೂ, ಪರಾಪೇಕ್ಷಮಪಿ-ಪರಶಿವಾಪೇಕ್ಷೆಯುಳ್ಳುದಾಗಿಯೂ, ಶಿವಸಂಜ್ಞಂ-ಶಿವನೆಂಬ ಹೆಸರುಳ್ಳುದಾಗಿಯೂ ಇರುವ, ಅಸ್ಯರೂಪಂ— ಈ ಸದಾಶಿವನ ಸ್ವರೂಪವನ್ನು, ಶಕ್ತ್ಯೈಕ್ಯಂ—ಪರಾಶಕ್ತಿಯಿಂದ ಉಂಟಾದುದಾದಪ್ರಯುಕ್ತ ಕಾರ್ಯಕಾರಣಗಳಿಗೆ ಅಭೇದವನ್ನು ವಿವಕ್ಷಿಸಿ ಶಕ್ತಿಯೆಂಬ ಹೆಸರುಳ್ಳುದನ್ನಾಗಿ, ಆಹುಃ—ಹೇಳುತ್ತಾರೆ. ತದಭಿನ್ನರೂಪಃ—ಅಂಥ ಪರಶಿವನೊಡನೆ ಅಭಿನ್ನಸ್ವರೂಪನಾದ, ಸ ಈಶಃ—ಆ ಸದಾಶಿವನು, ಧರ್ಮಃ—ಪರಶಿವನಿಗೆ ಧರ್ಮಸ್ವರೂಪನಾಗಿರುವನು. ಸಚ—ಆ ಪರಶಿವನು, ಧರ್ಮಿರೂಪಃ—ಧರ್ಮಿಸ್ವರೂಪನಾಗಿರುವನು.

**ಅವತರಣಿಕೆ—**ಹೀಗೆ ಪರಶಿವಸದಾಶಿವರಿಬ್ಬರೂ ಧರ್ಮಧರ್ಮಿಸ್ವರೂಪರಾಗಿ ಸೇರಿದುದರಿಂದ ಉಂಟಾದಭಾವಾಕಾರವನ್ನು ತೋರಿಸಿ ಅದರಮೇಲೆ ಅಧಿಕಾರಾವಸ್ಥೆಯನ್ನು ಹೊಂದಿರುವ ಸದಾಶಿವನಿಗೆ ಜಗತ್ಸೃಷ್ಟ್ಯಾದಿಕಾರ್ಯವಿಷಯದಲ್ಲಿ ಶಕ್ತಿಯೇ ಕಾರಣವಾಗಿ ನಿಲ್ಲುವುದೆಂದು ನಾಲ್ಕನೆಯ ಶ್ಲೋಕದಲ್ಲಿ ಹೇಳುತ್ತಾರೆ.

**ಶಕ್ತಿಶ್ಚಿತ್ತನುರೀಶ್ವರಸ್ಯ ಕರಣಂ ಜ್ಞೇಯೇಷು ಕಾರ್ಯೇಷು ತತ್**
**ಭೇದೈಸ್ಸೋಪಹಿತಾ ಪ್ರಯಾತಿ ಗುಣತೋ ಭೇದಂ ಕ್ರಿಯಾಜ್ಞಾನತಃ |**
**ನಿತ್ಯಂ ತತ್ಸಕಲಾನ್ಯಕರ್ತೃನಿಹಿತಾ ವರ್ತ್ಮನ್ಯಶುದ್ಧೇ ಸಿತೇ**
**ಕೃತ್ಯಂ ಸೈವ ಕರೋತಿ ಪತ್ಯನುಗತಾ ವಾಮಾದಿಶಕ್ತ್ಯಾತ್ಮಿಕಾ ||೪||**

**ಟೀಕೆ—** ಚಿತ್ತನುಃ—ಜ್ಞಾನಕ್ರಿಯೆಯೇ ಸ್ವರೂಪವಾಗಿ ಉಳ್ಳ, ಶಕ್ತಿಃ-ಪರಾಶಕ್ತಿಯೆಂಬುದು, ಈಶ್ವರಸ್ಯ—ಸದಾಶಿವನಿಗೆ, ಜ್ಞೇಯೇಷು-ತಿಳಿಯಲ್ಪಡಬೇಕಾದ ವಿಷಯಗಳಲ್ಲಿಯೂ, ಕಾರ್ಯೇಷು—ಮಾಡಲ್ಪಡಬೇಕಾದ ವಸ್ತುಗಳಲ್ಲಿಯೂ ಕರಣಂ—ಪ್ರಧಾನವಾದ ಸಾಧನವಾಗಿರುವುದು. ತದ್ಭೇದೈಃ—ಅಂಥ ಜ್ಞೇಯ ಮತ್ತು ಕಾರ್ಯ ಇವುಗಳ ಭೇದಗಳಿಂದ, ಸಾ—ಆ ಶಕ್ತಿಯೆಂಬುದು, ಉಪಹಿತಾ ಸತೀ—ಉಪಾಧಿವಿಶಿಷ್ಟವಾಗಿ ಮಾಡಲ್ಪಟ್ಟುದಾಗಿ, ಗುಣತಃ—ಉಪಸರ್ಜನವಾಗಿರುವ (ಅಪ್ರಧಾನವಿಶೇಷಣವಾಗಿರುವ) ಕ್ರಿಯಾಜ್ಞಾನತಃ—ಕ್ರಿಯಾಶಕ್ತಿ ಜ್ಞಾನಶಕ್ತಿ ಮೊದಲಾದವುಗಳಿಂದ, ಭೇದಂ—ಜ್ಞಾನಶಕ್ತಿ, ಕ್ರಿಯಾಶಕ್ತಿ ನಾಮ ಭೇದವನ್ನು, ಪ್ರಯಾತಿ—ಹೊಂದುತ್ತದೆ. ವಾಮಾದಿಶಕ್ತ್ಯಾತ್ಮಿಕಾ—ವಾಮಾದಿ ನವಶಕ್ತಿರೂಪವಾಗಿಯೂ, ಪತ್ಯನುಗತಾ—ಪತಿಯಾದ ಪರಶಿವನನ್ನು ಬಿಟ್ಟು

ಅಗಲದಂತೆ ಸಮವಾಯಸಂಬಂಧದಿಂದ ಅವನನ್ನೇ ಸೇರಿದುದಾಗಿಯೂ ಇರುವ, ಸೈವ—ಅಂಥ ಪರಾಶಕ್ತಿಯೇ, ಸಿತೇ ವರ್ತ್ಮನಿ—ಶುದ್ಧಾಧ್ವದಲ್ಲಿ, ನಿತ್ಯಂ—ಯಾವಾಗಲೂ, ಕೃತ್ಯಂ—ಸೃಷ್ಟಿಮೊದಲಾದ ಪಂಚಕೃತ್ಯಗಳನ್ನು, ಕರೋತಿ—ಮಾಡುತ್ತದೆ. ಸಕಲಾ (ಸತೀ) ಕರ್ಮಮುಂತಾದ ಷೋಡಶಕಲಾಸ್ವರೂಪಿಣಿಯಾಗಿಯೂ, ಅನ್ಯಕರ್ತೃನಿಹಿತಾ (ಸತೀ)—ಅನಂತೇಶ್ವರ, ಶ್ರೀಕಂಠ, ರುದ್ರ ಇವರೇ ಮೊದಲಾದ ಇತರಕರ್ತೃಗಳಲ್ಲಿ ಸ್ಥಾಪಿತೆಯಾಗಿಯೂ, ಅಶುದ್ಧೇವರ್ತ್ಮನಿ—ಅಶುದ್ಧಾಧ್ವದಲ್ಲಿ, ತತ್—ಆ ಪಂಚಕೃತ್ಯಗಳನ್ನು, ಕರೋತಿ—ಮಾಡುತ್ತದೆ.

**ಅವತರಣಿಕೆ**—ಇಲ್ಲಿಯವರೆಗೆ ಪತಿಪದಾರ್ಥವನ್ನು ಉಪದೇಶಿಸಿ ಇನ್ನು ಮುಂದೆ ಪಶುಪದಾರ್ಥವನ್ನು ಉಪದೇಶಿಸುತ್ತಾರೆ. ಅದರಲ್ಲಿ ಆತ್ಮವಸ್ತುವಿನ ಲಕ್ಷಣವನ್ನೂ ಅಂಥ ಲಕ್ಷಣದೊಡನೆ ಕೂಡಿದ ಆತ್ಮತತ್ತ್ವದ ಮೂರು ಭೇದಗಳನ್ನೂ ಐದನೆಯ ಶ್ಲೋಕದಲ್ಲಿ ಹೇಳಿರುತ್ತಾರೆ.

**ದೇಹಾನ್ಯಃ ಸಮಲಃ ಪಶುಸ್ಸಹಜಚಿನ್ನೈಕಃ ಪ್ರಬೋಧಾಕಲಃ**
**ಸೇಶಶ್ಚ ಪ್ರಳಯಾಕಲಃ ಕೃತಿಮಲೀ ರುಕ್ಕರ್ಮಮಾಯಿಾ ವಿಭುಃ ।**
**ಸೂಕ್ಷ್ಮಾಂಗೀ ಸಕಲೋಽಲ್ಪವಿತ್ಸ್ವಕೃತಭುಕ್ಕರ್ತಾ ಚ ನಿತ್ಯೋಽಪ್ರಭುಃ**
**ದೇಹೀ ಭುಕ್ತಕೃತಿಃ ಕ್ರಮೇಣ ಸುಚಿರಾಚ್ಛರ್ವೇಣ ಮುಕ್ತೋಭವೇತ್**
**॥೫॥**

**ಟೀಕೆ**= ದೇಹಾನ್ಯಃ—ದೇಹ, ಇಂದ್ರಿಯ, ಮನಸ್ಸು, ಪ್ರಾಣ, ಬುದ್ಧಿ ಇವುಗಳಿಗಿಂತಲೂ ಭಿನ್ನನಾಗಿಯೂ, ಸಹಜಚಿತ್—ಸ್ವಾಭಾವಿಕವಾದ ಚೈತನ್ಯವುಳ್ಳವನಾಗಿಯೂ, ಸಮಲಃ—ಹಾಗಿದ್ದರೂ ಅನಾದಿಯಾದ ಮಲಸಂಬಂಧವುಳ್ಳವನಾಗಿಯೂ, ಪಶುಃ—ಆದುದರಿಂದಲೇ ಪಶುವೆಂದು ಹೇಳಿಸಿಕೊಳ್ಳಲು ಅರ್ಹನಾಗಿಯೂ, ನೈಕಃ—ಏಕತ್ವಪ್ರತಿಕೋಟಿಯಾದ ಅನೇಕಸಂಖ್ಯೆಯುಳ್ಳವನಾಗಿಯೂ, ಸೇಶಃ—ಭೋಗಾದಿಪ್ರವೃತ್ತಿಗಳಲ್ಲಿ ಈಶ್ವರಪ್ರೇರಿತನಾಗುವನಾದುದರಿಂದ ಈಶ್ವರಸಹಿತನಾಗಿಯೂ, ವಿಭುಃ—ವ್ಯಾಪಕನಾಗಿಯೂ, ಅಲ್ಪವಿತ್—ಅಲ್ಪಜ್ಞನಾಗಿಯೂ, ಸ್ವಕೃತಭುಕ್—ತಾನು ಮಾಡಿದ ಪುಣ್ಯಪಾಪಗಳ ಫಲವನ್ನು ಅನುಭವಿಸುವವನಾಗಿಯೂ, ಕರ್ತಾ—ಈಶ್ವರಾಧೀನನಾಗಿ ಕರ್ಮಗಳನ್ನು ಮಾಡುವವನಾಗಿಯೂ, ನಿತ್ಯಃ—ಉತ್ಪತ್ತಿವಿನಾಶಗಳಿಲ್ಲದವನಾಗಿಯೂ, ಅಪ್ರಭುಃ—ದೇಹಾದಿಗಳನ್ನು ಪರಿಗ್ರಹಿಸುವುದರಲ್ಲಿಯೂ ಬಿಡುವುದರಲ್ಲಿಯೂ ಸಾಮರ್ಥ್ಯವಿಲ್ಲದವನಾಗಿಯೂ ಇರುವವನೇ ಪಶುಪದಾರ್ಥವಾದ ಆತ್ಮನೆನಿಸಿಕೊಳ್ಳುವನು. ಪ್ರಬೋಧಾ

ಕಲಃ—ಅಂಥ ಆತ್ಮನೇ ಪ್ರಬೋಧವೆಂಬ ವಿಜ್ಞಾನದಿಂದ ಕಟ್ಟಲ್ಪಡುವವನು; ಎಂದರೆ-ಆಣವಮಲಮಾತ್ರವುಳ್ಳ ವಿಜ್ಞಾನಕಲನೆನಿಸಿಕೊಳ್ಳುವನು. ಕ್ಷತಿಮಲೀ—ಆಣವ, ಕರ್ಮ ಎಂಬ ಎರಡು ಮಲಗಳುಳ್ಳವನಾಗಿ, ಸೂಕ್ಷ್ಮಾಂಗೀ—ಅತಿ ಸೂಕ್ಷ್ಮವಾದ ಪುರ್ಯಷ್ಟಕದೇಹವುಳ್ಳವನಾದ, ಪ್ರಳಯಾಕಲಃ—ಪ್ರಳಯಾಕಲನೆನಿಸಿಕೊಳ್ಳುವನು. ಎಂದರೆ ಪ್ರಳಯಕಾಲದೊಳು ಮಾಯಾತತ್ತ್ವದಲ್ಲಿ ಕಟ್ಟಲ್ಪಡುವವನಾದುದರಿಂದ ಪ್ರಳಯಾಕಲನೆನಿಸಿಕೊಳ್ಳುವನು. ರುಕ್ಕರ್ಮಮಾಯೀ—ಆಣವ, ಕರ್ಮ, ಮಾಯೆ ಎಂಬ ಮೂರು ಮಲಗಳುಳ್ಳವನಾಗಿ, ಸಕಲಃ—ಕಲೆ ಮೊದಲಾದುವುಗಳಿಂದ ಸಂಪೂರ್ಣವಾಗಿ ಕಟ್ಟಲ್ಪಡುವವನಾದುದರಿಂದ ಸಕಲನೆನಿಸಿಕೊಳ್ಳುವನು. ದೇಹೀ—ಹೀಗೆ ಉಕ್ತವಾದ ಮೂರು ಭೇದಗಳುಳ್ಳವನಾಗಿ ಕರ್ಮಾನುಸಾರದಿಂದ ಬಂದೊದಗುವ ಸೂಕ್ಷ್ಮಸ್ಥೂಲದೇಹಗಳುಳ್ಳವನಾಗಿ ಭುಕ್ತಕೃತಿಃ—ಜ್ಞಾನಯೋಗ, ಸನ್ಯಾಸ, ಭೋಗ ಇವುಗಳಿಂದ ಅನುಭವಿಸಲ್ಪಟ್ಟ ಕರ್ಮಗಳುಳ್ಳವನಾಗಿ, ಕ್ರಮೇಣ—ಮಲಪರಿಪಾಕಕ್ರಮಕ್ಕೆ ಅನುಸಾರವಾಗಿ ಸುಚಿರಾತ್—ಬಹಳಕಾಲದ ಮೇಲೆ, ಶರ್ವೇಣ—ಪರಶಿವನಿಂದ (ಪರಶಿವನ ಅನುಗ್ರಹದಿಂದ) ಮುಕ್ತೋ ಭವೇತ್—ಮೋಕ್ಷವನ್ನು ಪಡೆದವನಾಗುವನು.

**ಅವತರಣಿಕೆ**—ಹೀಗೆ ಪಶುಪದಾರ್ಥವನ್ನು ಉಪದೇಶಿಸಿದಮೇಲೆ ಮಲಮುಂತಾದ ಪಾಶಪದಾರ್ಥಗಳನ್ನು ಉಪದೇಶಿಸುವುದಾಗಿ ಆರಂಭಿಸಿ ಈ ಆರನೆಯ ಶ್ಲೋಕದಲ್ಲಿ ಆಣವಮಲವೆಂಬ ಪಾಶದ ಸ್ವರೂಪಸ್ವಭಾವಗಳನ್ನೂ, ತಿರೋಧಾನಶಕ್ತಿಯೆಂಬ ಪಾಶವನ್ನೂ ಉಪದೇಶಿಸುತ್ತಾರೆ.

**ನೀಹಾರೋಽನಾದಿರೇಕೋ ಮನುಜಸಹಭವಸ್ತ್ವಾವೃಗಾ ಕಾಳಿಕೇವ**
**ಸ್ವಾಧೀಕಾರಾಂತನಾಶಿ ಪ್ರತಿಪುರುಷದೃಗಾವಾರಿತಾನೇಕಶಕ್ತಿಃ ।**
**ಪಾಶ್ಯಶ್ಯೋಽಧ್ಯಕ್ಷ ಬೋಧ್ಯಸ್ಸತು ಭವತಿ ಯತೋ ಭೋಕ್ತೃತಾ**
**ಪಾರತಂತ್ರ್ಯಂ**
**ಕರ್ಮಾದೇರ್ಯೋಗ ಏತತ್ಕೃತಿಮನುಕಲಿತಾ ರೋಧಯಿತ್ರೀಶಶಕ್ತಿಃ ॥೬॥**

**ಟೀಕೆ**= ನೀಹಾರಃ—ನೀಹಾರವೆಂಬ ಹೆಸರುಳ್ಳ ಆಣವಮಲವೆಂಬುದು, ಅನಾದಿಃ—ಕರ್ಮಮಲ-ಮಾಯಾಮಲಗಳಂತೆ ಸಾದಿಯಲ್ಲ ಅನಾದಿಯಾಗಿರುವುದು; ಏಕಃ—ಅನಿತ್ಯವಾದ ಇತರ ಜಡಪದಾರ್ಥಗಳಂತೆ ಅನೇಕವಲ್ಲ; ನಿತ್ಯವಾದುದರಿಂದ ಏಕವಾಗಿರುವುದು. ಮನುಜಸಹಭವಃ—ಆತ್ಮಗಳಿಗೆ ಸ್ವಭಾವಸಿದ್ಧವಾದ

ಮಲವಾಗಿರುವುದು. ತಾಮ್ರಗಾಕಾಳಿಕೇವ—(ಆದುದರಿಂದಲೇ) ತಾಮ್ರದಲ್ಲಿರುವ ಕೊಳೆಯಂತೆ, (ಸ್ಯಾತ್)—ಆತ್ಮಗಳಿಗೆ ಸ್ವಾಭಾವಿಕವಾಗಿರುವುದು. ಮತ್ತು ಸ್ವಾಧಿಕಾರಾಂತನಾಶಿಪ್ರತಿಪುರುಷದೃಗಾವಾರಿತಾನೇಕಶಕ್ತಿಃ—ತನ್ನ ಅಧಿಕಾರದ ಅವಸಾನದಲ್ಲಿ ನಾಶಹೊಂದುತ್ತಿರುವಂಥದಾಗಿಯೂ ಪ್ರತಿಯೊಂದು ಆತ್ಮನಲ್ಲಿಯೂ ಇರುವ ಜ್ಞಾನಶಕ್ತಿಯನ್ನು ಮರೆಯಿಸುವಂಥದಾಗಿಯೂ ಇರುವ ಹಲವು ಬಗೆಯಾದ ಶಕ್ತಿಗಳುಳ್ಳದಾಗಿರುವುದು. (ಕಿಂಚ)—ಮತ್ತು, ಯತಃ—ಯಾವ ಈ ಆಣವಮಲದಿಂದ ಸಃ—ಆ ಪಶುವೆನಿಸಿಕೊಂಡ ಆತ್ಮನು, ಪಾಶ್ಯಃ—ಪಾಶದಿಂದ ಬಂಧಿಸಲ್ಪಡುವವನಾಗಿಯೂ, ಶೋಧ್ಯಃ—ದೀಕ್ಷೆಯಿಂದ ಶೋಧಿಸಲ್ಪಡತಕ್ಕವನಾಗಿಯೂ, ಬೋಧ್ಯಶ್ಚ—ಸರ್ವಜ್ಞತ್ವಾದಿಗುಣಗಳುಳ್ಳ ಶಿವಸ್ವರೂಪವನ್ನು ಬೋಧಿಸಲ್ಪಡುವವನಾಗಿಯೂ, ಭವತಿ—ಆಗುತ್ತಾನೆಯೋ, ಕರ್ಮಾದೇಃ—ಕರ್ಮ, ಮಾಯೆ ಮೊದಲಾದುದರ, ಯೋಗೇ (ಸತ್ಯಪಿ)—ಸಂಬಂಧಪಡುತ್ತಿದ್ದರೂ, ಭೋಕ್ತೃತಾ—ಪುರುಷನಿಗೆ ಭೋಕ್ತೃತ್ವಸ್ವಭಾವವೂ, ಪಾರತಂತ್ರ್ಯಂ—ಪರಾಧೀನನಾಗಿರುವಿಕೆಯೆಂಬ ಸ್ವಭಾವವೂ, ಯತೋ ಭವತಿ—ಯಾವ ಈ ಮಲದಿಂದಲೇ ಉಂಟಾಗುತ್ತದೆಯೋ ಅಂಥ ಆಣವಮಲವು ಪೂರ್ವೋಕ್ತಗುಣವುಳ್ಳದಾಗುವುದೆಂದು ಅನ್ವಯಿಸಿಕೊಳ್ಳಬೇಕು. ರೋಧಯಿತ್ರೀ—ತಿರೋಧಾನವನ್ನು ಮಾಡುತ್ತಿರುವ, ಈಶಶಕ್ತಿಃ—ಪಂಚಕೃತ್ಯಗಳಲ್ಲಿ ಒಂದಾದ ನಿಗ್ರಹಶಕ್ತಿಯೆಂಬುದು, ಏತತ್ಕೃತಿಂ—ಈ ಆಣವಮಲದ ಬಂಧನಾದಿಕಾರ್ಯವನ್ನು, ಅನುಕಲಿತಾ—ಅನುಸರಿಸಿ (ಈಶನಿಂದ) ನಡೆಯಿಸಲ್ಪಡುತ್ತಿರುವುದು.

**ಅವತರಣಿಕೆ**—ಹೀಗೆ ವಿಜ್ಞಾನಕಲನಾದ ಆತ್ಮನ ವಿಷಯದಲ್ಲಿ ಪ್ರವರ್ತಿಸಿರುವ ಮಲ, ತಿರೋಧಾನಶಕ್ತಿ ಎಂಬ ಎರಡು ಪಾಶಗಳನ್ನು ಉಪದೇಶಿಸಿ, ಈಗ ಪ್ರಳಯಾಕಲನೆಂದು ಹೇಳಿಸಿಕೊಳ್ಳುವ ಆತ್ಮನ ವಿಷಯದಲ್ಲಿ ಪ್ರವರ್ತಿಸುವ ಕರ್ಮವೆಂಬ ಮೂರನೆಯ ಪಾಶದ ಲಕ್ಷಣವನ್ನು ಏಳನೆಯ ಶ್ಲೋಕದಲ್ಲಿ ಹೇಳುತ್ತಾರೆ.

**ದೇಹಾದ್ಯೈರ್ಯೋಗಹೇತುರ್ವಿವಿಧಮಪಿ ಚ ಸುಚಿತ್ರಭೋಗಪ್ರಸೂತಿ ।**
**ನಾಶೋತ್ಪತ್ತ್ಯಾಪ್ಯನಾದಿ ಪ್ರತಿನರನಿಯತಂ ಸೂಕ್ಷ್ಮಭಾವಾದದೃಷ್ಟಂ।**
**ವಾಗ್ಧೀಕಾರ್ಯಾರ್ಥಸಾಧ್ಯಂ ಫಲಜನಕಧರಂ ಕರ್ಮಧರ್ಮಾದಿಭೋಗ್ಯಂ ।**
**ಸ್ವಾಪೇ ಮಾಯಾಽಽಪ್ತಪಾಕಂ ಸ್ಥಿತಿಮತಿಸಹಿತಂ ಭೋಗದಂ ಸ್ಯಾತ್ಕಲಾನ್ತಂ ॥೭॥**

**ಟೀಕೆ**— ದೇಹಾದ್ಯೈಃ—ಸೂಕ್ಷ್ಮಸ್ಥೂಲಶರೀರಗಳು, ಜ್ಞಾನೇಂದ್ರಿಯ ಕರ್ಮೇಂದ್ರಿಯಗಳು, ಶಬ್ದಾದಿ ವಿಷಯಗಳು, ಇವುಗಳೊಡನೆ, ಯೋಗಹೇತುಃ— ಆತ್ಮನಿಗೆ ಸಂಬಂಧವುಂಟಾಗುವುದಕ್ಕೆ ಕಾರಣವಾದುದಾಗಿಯೂ, ವಿವಿಧಂ—ನಾನಾವಿಧವಾಗಿಯೂ, ಅಪಿಚ— ಮತ್ತು, ನುಃ— ಆತ್ಮನಿಗೆ, ಚಿತ್ರಭೋಗಪ್ರಸೂತಿಃ—ಹಲವು ಬಗೆಯಾದ ಸುಖದುಃಖಭೋಗಗಳ ಉತ್ಪತ್ತಿಗೆ ಸ್ಥಾನವಾಗಿಯೂ, ನಾಶೋತ್ಪತ್ತ್ಯಾ (ಸಹಿತಮಪಿ)—ನಶಿಸುವಿಕೆ, ಹುಟ್ಟುವಿಕೆ ಇವುಗಳೊಡನೆ ಕೂಡಿದುದಾದರೂ, ಅನಾದಿ—ಮಲಪಾಶದಂತೆ ಸ್ವಭಾವಸಿದ್ಧವಾದುದಾಗಿಯೂ, ಪ್ರತಿನರನಿಯತಂ—ಪ್ರತಿಯೊಬ್ಬ ಆತ್ಮನಲ್ಲಿಯೂ ಪ್ರತ್ಯೇಕ ಪ್ರತ್ಯೇಕವಾಗಿ ವ್ಯವಸ್ಥಿತವಾದುದಾಗಿಯೂ, ಸೂಕ್ಷ್ಮಭಾವಾತ್—ಆತ್ಮನಲ್ಲಿ ಸಂಸ್ಕಾರರೂಪದಿಂದ ಸೂಕ್ಷ್ಮವಾಗಿರುವಕಾರಣ, ಅದೃಷ್ಟಂ—ಇಂದ್ರಿಯಗಳಿಂದ ಕಾಣಲ್ಪಡುವಂಥದಲ್ಲವಾಗಿಯೂ, ವಾಕ್—ವಾಗಾದೀಂದ್ರಿಯಗಳಿಂದಲೂ, ಧೀ—ಬುದ್ಧಿಯಿಂದಲೂ, ಕಾರ್ಯ—ಶರೀರದಿಂದಲೂ, ಅರ್ಥ—ದ್ರವ್ಯದಿಂದಲೂ, ಸಾಧ್ಯಂ—ಸಂಪಾದಿಸಲ್ಪಡುವುದಕ್ಕೆ ಯೋಗ್ಯವಾದುದಾಗಿಯೂ, ಫಲಜನಕಧರಂ—ಸುಖದುಃಖಗಳೆಂಬ ಫಲಗಳನ್ನು ಉಂಟುಮಾಡುವ ಶರೀರ, ಇಂದ್ರಿಯ, ವಿಷಯ, ಲೋಕ ಇವುಗಳನ್ನುಂಟುಮಾಡಿ ಕ್ಲೃಪ್ತಕಾಲದವರೆಗೂ ಅವುಗಳನ್ನು ಧರಿಸುತ್ತಿರುವಂಥದಾಗಿಯೂ, ಭೋಗ್ಯಂ—ಭೋಗಾರ್ಹವಾಗಿಯೂ, ಧರ್ಮಾದಿ—ಪುಣ್ಯಪಾಪರೂಪವಾಗಿಯೂ ಇರುವ, ಕರ್ಮ—'ಕ್ರಿಯತಇತಿ ಕರ್ಮ' ಎಂಬ ವ್ಯುತ್ಪತ್ತಿಯನ್ನನುಸರಿಸಿ ಮಾಡುವಂಥದಾದುದರಿಂದ ಕರ್ಮವೆಂಬ ಹೆಸರನ್ನು ಪಡೆದಿರುವ ಪಾಶವಿಶೇಷವು ಸ್ವಾಪೇ—ಸರ್ವಭೂತಸಂಹಾರರೂಪವಾದ ಪ್ರಳಯಕಾಲದಲ್ಲಿ, ಮಾಯಾಪ್ತಪಾಕಂ—ಮಾಯೆಯಲ್ಲಿ ಪರಿಪಾಕವನ್ನು ಹೊಂದಿದುದಾಗಿಯೂ, ಸ್ಥಿತಿಮತಿಸಹಿತಂ-ಮಾಯೆಯಲ್ಲಿ ಸಂಸ್ಕಾರರೂಪವಾಗಿ ಇರುತ್ತಿರುವುದೆಂಬ ಬುದ್ಧಿಯಿಂದ ತಿಳಿಯಲ್ಪಡುವುದಕ್ಕೆ ಯೋಗ್ಯವಾದುದಾಗಿಯೂ, ಕಲಾಂತಂ—ಪೃಥಿವೀತತ್ತ್ವಮೊದಲುಗೊಂಡು ಕಲಾತತ್ತ್ವದವರೆಗೂ ಇರುವ ತತ್ತ್ವಗಳಲ್ಲಿ ಅಡಗಿರುವ ಆತ್ಮಗಳಿಗೆ ಭೋಗದಂ—ಸುಖದುಃಖರೂಪವಾದ ಭೋಗವನ್ನು ಕೊಡುವಂಥದಾಗಿಯೂ, ಸ್ಯಾತ್—ಆಗುವುದು.

**ಅವತರಣಿಕೆ**— ಅಶುದ್ಧಮಾರ್ಗಕ್ಕೆ ಕಾರಣವಾಗಿಯೂ, ಸಕಲನೆನಿಸಿಕೊಂಡ ಆತ್ಮನ ವಿಷಯದಲ್ಲಿ ಪ್ರವರ್ತಿಸುವಂಥದಾಗಿಯೂ ಇರುವ ಮಾಯೆ. ಯೆಂಬ ನಾಲ್ಕನೆಯ ಪಾಶದ ಲಕ್ಷಣವನ್ನೂ ಶುದ್ಧಮಾರ್ಗಕ್ಕೆ ಕಾರಣವಾಗಿರುವ

ಬಿಂದುವೆಂಬ ಮಹಾಮಾಯೆಯ ಲಕ್ಷಣವನ್ನೂ ಈ ಎಂಟನೆಯ ಶ್ಲೋಕದಲ್ಲಿ ಹೇಳಿರುತ್ತಾರೆ.

**ಮಾಯಾಖ್ಯಂ ಚಿತ್ರಶಕ್ತ್ಯಾ ಪರಿಗತಮಕಲಂ ಕಷ್ಟವರ್ತ್ಮೈಕಬೀಜಂ**
**ನಿತ್ಯಂಕರ್ಮಾಂತರೋಧಿ ಸ್ವಕೃತಿನಿವಸನಂ ತತ್ಕೃತೇರ್ವ್ಯಾಪಕಂ ಚ ।**
**ಕಾರ್ಯಾಚಿತ್ತ್ವಪ್ರಕಾಶಾದಚಿದಶಿವಕರಂ ಮೋಹಕಂ ಸ್ವಾಪಕಾಲೇ**
**ಸರ್ವಾತ್ಮಾವಾಸಮೇವಂ ಪರಮಪಿಚ ಸಿತಂ ಕಾರಣಂ ಬೋಧಕಂತತ್**
**॥೮॥**

**ಟೀಕೆ**— ಮಾಯಾಖ್ಯಂ—ಮಾಯೆಯೆಂಬ ಹೆಸರುಳ್ಳ ಪಾಶವು, ಚಿತ್ರಶಕ್ತ್ಯಾ—ನಾನಾವಿಧವಾದ ಶಕ್ತಿಗಳೊಡನೆ, ಪರಿಗತಂ—ಕೂಡಿದುದಾಗಿಯೂ, ಅಕಲಂ—ಸೂಕ್ಷ್ಮರೂಪವಾಗಿಯೂ, ಕಷ್ಟವರ್ತ್ಮೈಕಬೀಜಂ—ಅಶುದ್ಧಮಾರ್ಗಕ್ಕೆ ಮುಖ್ಯವಾದ ಉಪಾದಾನಕಾರಣವಾಗಿಯೂ, ನಿತ್ಯಂ—ಆದುದರಿಂದಲೇ ನಿತ್ಯವಾಗಿಯೂ, ಕರ್ಮಾಂತರೋಧಿ—ಕರ್ಮದ ಅಧಿಕಾರವಿರುವವರೆಗೂ ಬಂಧಕವಾಗಿಯೂ, ಸ್ವಕೃತಿನಿವಸನಂ—ತನ್ನ ಕಾರ್ಯವಸ್ತುಗಳಿಗೆ ಆಧಾರವಾಗಿಯೂ, ತತ್ಕೃತೇಃ-ವ್ಯಾಪಕಂಚ—ಆ ಕಾರ್ಯವಸ್ತುವೆಲ್ಲಕ್ಕೂ ವ್ಯಾಪಕವಾಗಿಯೂ, ಕಾರ್ಯಾಚಿತ್ತ್ವಪ್ರಕಾಶಾತ್—ಶರೀರ-ಇಂದ್ರಿಯ-ಲೋಕ ಇವುಗಳೆಂಬ ಕಾರ್ಯವಸ್ತುಗಳಲ್ಲಿ ಅಚೇತನತ್ವವು ಪ್ರಕಾಶಿಸುವುದರಿಂದ, ಅಚಿತ್—ತಾನೂ ಅಚೇತನವಾಗಿಯೂ, ಅಶಿವಕರಂ—ಅಜ್ಞಾನವನ್ನು ಉಂಟುಮಾಡುವಂಥದಾಗಿಯೂ, ಮೋಹಕಂ—ಆದುದರಿಂದಲೇ ಮೋಹಜನಕವಾಗಿಯೂ, ಸ್ವಾಪಕಾಲೇ—ಪ್ರಳಯಕಾಲದಲ್ಲಿ, ಸರ್ವಾತ್ಮಾವಾಸಂ—ಸಕಲರು-ಪ್ರಳಯಾಕಲರು ಎಂಬ ಎಲ್ಲಾ ಆತ್ಮಗಳಿಗೂ ವಾಸಸ್ಥಾನವಾಗಿಯೂ ಇರುವುದು. ಪರಮಪಿಚ—ಇದಕ್ಕೆ ಮೊದಲಾದ ಬಿಂದುವೆಂಬ ಮಹಾಮಾಯೆಯೂ ಕೂಡ, ಏವಂ—ಈಗ ಉಕ್ತವಾದ ಎಲ್ಲಾ ಲಕ್ಷಣಗಳೊಡನೆಯೂ ಕೂಡಿದುದಾಗಿಯೇ ಇರುವುದು. ಅಪಿ (ತು)—ಆದರೆ, ತತ್—ಆ ಮಹಾಮಾಯೆಯೆಂಬುದು, ಸಿತಂ—ಶುದ್ಧಸ್ವರೂಪವಾಗಿಯೂ, ಕಾರಣಂ—ಶುದ್ಧಮಾರ್ಗಕ್ಕೆ ಕಾರಣವಾಗಿಯೂ, ಬೋಧಕಂ—ಸರ್ವವಿಷಯಕವಾದ ಜ್ಞಾನಕ್ಕೆ ಪ್ರಕಾಶಕವಾಗಿಯೂ ಇರುವುದು.

**ಅವತರಣಿಕೆ**— ಹೀಗೆ ಆಣವಮಲಮುಂತಾದ ಪಾಶಗಳ ಸ್ವರೂಪವನ್ನು ಹೇಳಿ, ಇನ್ನು ಮುಂದೆ ವಿಜ್ಞಾನಕಲನೇಮೊದಲಾದ ಆತ್ಮ, ಮಂತ್ರ, ಮಂತ್ರೇ

ಶ್ವರರು ಇವರಿಗೆ ಭೋಗಸಿದ್ಧಿಗಾಗಿಯೂ ಮೋಕ್ಷಸಿದ್ಧಿಗಾಗಿಯೂ ಪರಶಿವನಿಂದ ಸೃಷ್ಟಿಸಲ್ಪಟ್ಟಿರುವ ಶಿವತತ್ತ್ವವೇ ಮೊದಲಾದ ಮೂವತ್ತಾರು ತತ್ತ್ವಗಳನ್ನು ತೋರಿಸುವುದಕ್ಕೆ ಉಪಕ್ರಮಿಸಿ—"ಶಿವತತ್ತ್ವ, ಶಕ್ತಿತತ್ತ್ವ, ಸದಾಶಿವತತ್ತ್ವ, ಈಶ್ವರತತ್ತ್ವ, ಶುದ್ಧವಿದ್ಯಾತತ್ತ್ವ" ಎಂಬ ಐದು ಶುದ್ಧತತ್ತ್ವಗಳನ್ನು ಒಂಬತ್ತನೆಯ ಶ್ಲೋಕದಲ್ಲಿ ಉಪದೇಶಿಸಿರುತ್ತಾರೆ.

**ಉದ್ಯೋಗಾಚ್ಛಕ್ತಿತತ್ತ್ವಂ ಪ್ರಸರತಿ ಚ ವಿಭೋಸ್ತತ್ಕಲಾಢ್ಯಂ ಸಿಸೃಕ್ಷೋಃ**
**ಬಿಂದೋಃಪ್ರಾಗ್ದೃಕ್ಕ್ರಿಯಾಭ್ಯಾಂ ಸದೃಶಮಧಿಕೃತಾದ್ಯತ್ಸದೇಶಾಖ್ಯತತ್ತ್ವಂ ।**
**ಆಧಿಕ್ಯೇನೇಶತತ್ತ್ವಂ ಮನುಪತಿಸಹಿತಂ ತತ್ಕ್ರಿಯಾಶಕ್ತಿಯೋಗಾತ್**
**ಜ್ಞಾನಾಖ್ಯಾಶಕ್ತಿಯೋಗಾನ್ಮನು ನಿವಹಮುಖೈಶ್ಶುದ್ಧವಿದ್ಯಾಖ್ಯತತ್ತ್ವಂ ॥೯॥**

**ಟೀಕೆ**— ಸಿಸೃಕ್ಷೋಃ—ಪ್ರಪಂಚವನ್ನು ಸೃಷ್ಟಿಸಬೇಕೆಂದು ಅಪೇಕ್ಷಿಸುತ್ತಿರುವ, ವಿಭೋಃ—ಸ್ವಾಮಿಯಾದ ಪರಶಿವನ, ಉದ್ಯೋಗಾತ್—ವ್ಯಾಪಾರದಿಂದ ಬಿಂದೋಃ—ಬಿಂದುವೆಂಬ ಶಿವತತ್ತ್ವದದೆಸೆಯಿಂದ, ಪ್ರಾಕ್—ಮೊತ್ತಮೊದಲು ಕಲಾಢ್ಯಂ—ಶಾಂತಿಕಲೆಯಿಂದಲೂ ಭುವನಗಳಿಂದಲೂ ಪೂರ್ಣವಾಗಿರುವ, ತತ್—ಪ್ರಸಿದ್ಧವಾದ, ಶಕ್ತಿತತ್ತ್ವಂ—ಶಕ್ತಿಯೆಂಬ ತತ್ತ್ವವು, ಪ್ರಸರತಿ—ಹೊರಡುತ್ತದೆ. (ಉಂಟಾಗುತ್ತದೆ.) ಅಧಿಕೃತಾತ್—ಸೃಷ್ಟಿಕಾರ್ಯದಲ್ಲಿ ಅಧಿಕಾರವನ್ನು ಪಡೆದಿರುವ, ವಿಭೋಃ—ಪರಮೇಶ್ವರನ ದೆಸೆಯಿಂದ, ದೃಕ್ಕ್ರಿಯಾಭ್ಯಾಂ—ಜ್ಞಾನಕ್ರಿಯೆಗಳೊಡನೆ, ಸದೃಶಂ—ಸಮಾನವಾಗಿರುವ, ಸದೇಶಾಖ್ಯತತ್ತ್ವಂ—ಸದಾಶಿವನೆಂಬ ತತ್ತ್ವವು, ಯತ್—ಯಾವದುಂಟೋ, ತತ್—ಅದು, ಪ್ರಸರತಿ—ಹೊರಡುತ್ತದೆ. (ಉಂಟಾಗುತ್ತದೆ.) ಆಧಿಕ್ಯೇನ—ಆಧಿಕ್ಯದಿಂದ, ಕ್ರಿಯಾಶಕ್ತಿಯೋಗಾತ್—ಕ್ರಿಯಾಶಕ್ತಿಸಂಬಂಧವುಂಟಾಗಿರುವುದರಿಂದ, ಮನುಪತಿಸಹಿತಂ—ಮಂತ್ರೇಶ್ವರರಾದ ಅನಂತಾದಿಗಳೊಡನೆ ಕೂಡಿರುವ, ಈಶತತ್ತ್ವಂ—ಈಶ್ವರತತ್ತ್ವವೆಂಬುದು, ಪ್ರಸರತಿ—ಹೊರಡುತ್ತದೆ. (ಉಂಟಾಗುತ್ತದೆ) ಆಧಿಕ್ಯೇನ—ಹೆಚ್ಚುಗೆಯಿಂದ, ಜ್ಞಾನಾಖ್ಯಾಶಕ್ತಿಯೋಗಾತ್—ಜ್ಞಾನಶಕ್ತಿಸಂಬಂಧವುಂಟಾಗಿರುವುದರಿಂದ, ಮನುನಿವಹಮುಖೈಃಸಹಿತಂ—ಸಪ್ತಕೋಟಿಮಹಾಮಂತ್ರಗಳೇ ಮೊದಲಾದುವುಗಳೊಡನೆ ಕೂಡಿರುವ, ಶುದ್ಧವಿದ್ಯಾಖ್ಯತತ್ತ್ವಂ—ಶುದ್ಧವಿದ್ಯೆಯೆಂಬ ತತ್ತ್ವವು, ಪ್ರಸರತಿ—ಹೊರಡುತ್ತದೆ. (ಉಂಟಾಗುತ್ತದೆ).

**ಅವತರಣಿಕೆ**— ಮಾಯೆ-ಕಲೆ-ಕಾಲ-ನಿಯತಿ-ವಿದ್ಯೆ-ರಾಗ-ಪುರುಷ-ಗುಣ ಬುದ್ಧಿ-ಅಹಂಕಾರ-ಆರು ಜ್ಞಾನೇಂದ್ರಿಯಗಳು-ಐದು ಕರ್ಮೇಂದ್ರಿಯಗಳು-ಪಂಚತನ್ಮಾತ್ರೆಗಳು-ಪಂಚಭೂತಗಳು-ಈ ಮೂವತ್ತೊಂದು ಅಶುದ್ಧತತ್ತ್ವಗಳನ್ನು ಹತ್ತನೆಯ ಶ್ಲೋಕದಲ್ಲಿ ಉಪದೇಶಿಸುತ್ತಾರೆ.

**ಮಾಯಾತೋಽನಂತಯೋಗಾತ್ಪ್ರಸರತಿಚ ಕಲಾ ಕಾಲತತ್ತ್ವಂ ನಿಯತ್ಯಾ**
**ವಿದ್ಯಾರಾಗಃಕಲಾತಃಪ್ರಕೃತಿಸಖುಮಿತೋರುದ್ರಯುುಗೌಣಮಸ್ಮಾತ್ ।**
**ಬುದ್ಧಿಶ್ಚಾತೋಽಪ್ಯಹಂಕೃತ್ತ್ರಿವಿಧಗುಣಯುತಾ ಧೀಂದ್ರಿಯೈರ್ಮನಸಂ ಪ್ರಾಕ್**
**ಕರ್ಮಾಕ್ಷಾಣ್ಯೇವ ಮಾತ್ರಾಃ ಸ್ವಗುಣಗತಭಿದಾಃ ಪಂಚಭೂತಾನಿ ತಾಭ್ಯಃ ॥೧೦॥**

**ಟೀಕೆ**— ಮಾಯಾತಃ—ಅಶುದ್ಧತತ್ತ್ವಗಳಿಗೆ ಉಪಾದಾನಕಾರಣವಾಗಿರುವ ಮಾಯಾತತ್ತ್ವದಿಂದ, ಅನಂತಯೋಗಾತ್—ಅಶುದ್ಧಮಾರ್ಗಕ್ಕೆ ಕರ್ತೃವಾಗಿರುವ ಅನಂತೇಶ್ವರನ ಸಂಕಲ್ಪರೂಪವಾದ ಯೋಗದಿಂದ, ಕಲಾ—ಕಲೆಯೆಂಬ ತತ್ತ್ವವೂ, ಕಾಲತತ್ತ್ವಂಚ—ಕಾಲವೆಂಬ ತತ್ತ್ವವೂ, ನಿಯತ್ಯಾ—ನಿಯತಿಯೆಂಬ ತತ್ತ್ವದೊಡನೆ ಕೂಡಿ, ಪ್ರಸರತಿ—ಹೊರಡುತ್ತದೆ. (ಉಂಟಾಗುತ್ತದೆ) ಕಲಾತಃ—ಕಲಾತತ್ತ್ವದ ದೆಸೆಯಿಂದ, ವಿದ್ಯಾ—ವಿದ್ಯಾತತ್ತ್ವವೂ, ರಾಗಃ—ರಾಗವೆಂಬ ತತ್ತ್ವವೂ, ಪ್ರಸರತಿ—ಹೊರಡುತ್ತದೆ. (ಉಂಟಾಗುತ್ತದೆ) (ತತಃ)—ಅನಂತರದಲ್ಲಿ ಪೂರ್ವೋಕ್ತವಾದ ಮಾಯೆಯಿಂದ, ರುದ್ರಯುಕ್—ಭುವನಾಧ್ವದಲ್ಲಿ ರುದ್ರರಿಗೆ ಆಧಾರವಾಗಿರುವ, ಪ್ರಕೃತಿಸಖಃ—ಪ್ರಕೃತಿತತ್ತ್ವವನ್ನು ಸಹಾಯವಾಗಿ ಪಡೆದಿರುವ ಪುರುಷತತ್ತ್ವವು, ಪ್ರಸರತಿ—ಹೊರಡುತ್ತದೆ. (ಉಂಟಾಗುತ್ತದೆ) ಇತಃ—(ಅನಂತರದಲ್ಲಿ) ಈ ಕಲಾತತ್ತ್ವದಿಂದ, ಪ್ರಕೃತಿಃ—ಪ್ರಕೃತಿತತ್ತ್ವವು, ಪ್ರಸರತಿ—ಹೊರಡುತ್ತದೆ. (ಉಂಟಾಗುತ್ತದೆ) ಅಸ್ಮಾತ್—ಈ ಪ್ರಕೃತಿತತ್ತ್ವದ ದೆಸೆಯಿಂದ, ಗೌಣಂ—ಸತ್ತ್ವ-ರಜಸ್ಸು-ತಮಸ್ಸು ಎಂಬ ಗುಣತತ್ತ್ವವು, ಪ್ರಸರತಿ—ಹೊರಡುತ್ತದೆ. (ಉಂಟಾಗುತ್ತದೆ) (ಕಿಂ) ಚಾತಃ—ಮತ್ತು ಈ ಗುಣತತ್ತ್ವದಿಂದ, ಬುದ್ಧಿಃ—ಬುದ್ಧಿತತ್ತ್ವವು ಎಂದರೆ ಮಹತ್ತತ್ತ್ವವು, ಪ್ರಸರತಿ—ಹೊರಡುತ್ತದೆ. (ಉಂಟಾಗುತ್ತದೆ) ಅತಃ—ಈ ಬುದ್ಧಿತತ್ತ್ವದಿಂದ, ತ್ರಿವಿಧಗುಣಯುತಾ—ಮೂರುಬಗೆಯಾದ ಸತ್ತ್ವರಜಸ್ತಮೋಗುಣಗಳೊಡನೆ ಕೂಡಿರುವ, ಅಹಂಕೃತ್—ಅಹಂಕಾರತತ್ತ್ವವು, ಪ್ರಸರತಿ

—ಹೊರಡುತ್ತದೆ. (ಉಂಟಾಗುತ್ತದೆ) ಅಂತಃ-ಪ್ರಾಕ್—ಸಾತ್ತ್ವಿಕ-ರಾಜಸ-ತಾಮಸ ಎಂದು ಮೂರುವಿಧವಾದ ಈ ಅಹಂಕಾರತತ್ತ್ವದಲ್ಲಿ ಮೊದಲನೆಯದಾದ ಸಾತ್ತ್ವಿಕಾಹಂಕಾರದಿಂದ, ಧೀಂದ್ರಿಯೈಃ—ಮಾನಸಂ—ಚಕ್ಷುಶ್ಶ್ರೋತ್ರಜಿಹ್ವಾ ಘ್ರಾಣತ್ವಕ್ಕುಗಳೆಂಬ ಐದು ಜ್ಞಾನೇಂದ್ರಿಯಗಳೊಡನೆ ಕೂಡಿದ ಮನಇಂದ್ರಿಯವು, ಪ್ರಸರತಿ—ಹೊರಡುತ್ತದೆ. (ಉಂಟಾಗುತ್ತದೆ) ಕರ್ಮಾಕ್ಷಾಣಿ—ಅನಂತರದಲ್ಲಿ ಎರಡನೆಯದಾದ ರಾಜಸಾಹಂಕಾರದಿಂದ ವಾಕ್ಪಾಣಿಪಾದಪಾಯೂಪಸ್ಥಗಳೆಂಬ ಐದು ಕರ್ಮೇಂದ್ರಿಯಗಳು, ಪ್ರಸರಂತಿ—ಹೊರಡುತ್ತವೆ. (ಉಂಟಾಗುತ್ತವೆ) ಮಾತ್ರಾಃ—ಅನಂತರದಲ್ಲಿ ಮೂರನೆಯದಾದ ತಾಮಸಾಹಂಕಾರದಿಂದ ಶಬ್ದ ಸ್ಪರ್ಶರೂಪರಸಗಂಧಗಳೆಂಬ ಐದು ತನ್ಮಾತ್ರೆಗಳು (ಸೂಕ್ಷ್ಮಭೂತಗಳು) ಪ್ರಸರಂತಿ—ಹೊರಡುತ್ತವೆ. (ಉಂಟಾಗುತ್ತವೆ) ಸ್ವಗುಣಗತಭಿದಾಃ—ಮತ್ತು ಈ ತನ್ಮಾತ್ರೆಗಳು ತಮ್ಮ ತಮ್ಮ ಸ್ಥೂಲಾಂಶಗಳಾದ ಶಬ್ದಾದಿ ಗುಣಗಳನ್ನು ಹೊಂದಿರುವ ಭೇದವುಳ್ಳವುಗಳಾಗಿರುವುವು ಎಂದರೆ ಸ್ಥೂಲಶಬ್ದಾದಿಗಳು ಇವುಗಳ ಪ್ರಭೇದಗಳಾಗಿರುವುವು. ತಾಭ್ಯಃ—ಭೂತಸೂಕ್ಷ್ಮಗಳೆನಿಸಿಕೊಂಡ ಆ ತನ್ಮಾತ್ರೆಗಳಿಂದ ಪಂಚಭೂತಾನಿ—ಆಕಾಶ-ವಾಯು-ಅಗ್ನಿ-ಜಲ-ಪೃಥಿವಿಗಳೆಂಬ ಐದು ಮಹಾಭೂತಗಳು, ಪ್ರಸರಂತಿ—ಹೊರಡುತ್ತವೆ. (ಉಂಟಾಗುತ್ತವೆ)

**ಅವತರಣಿಕೆ**—ಹೀಗೆ ಮೂವತ್ತಾರು ತತ್ತ್ವಗಳ ಉತ್ಪತ್ತಿಕ್ರಮವನ್ನು ತೋರಿಸಿ ಆದರಮೇಲೆ ಅವುಗಳಲ್ಲಿರುವ ಅನಂತಾದಿಗಳ ಸ್ವರೂಪವನ್ನು ತೋರಿಸುತ್ತಾರೆ. ಕರ್ಮಬಂಧ ಮಾಯಾಬಂಧಗಳಿಂದ ಬಿಡಲ್ಪಟ್ಟ ವಿಜ್ಞಾನಕಲರಲ್ಲಿ ಕೆಲವರನ್ನು ಮಂತ್ರೇಶ್ವರರನ್ನಾಗಿಯೂ, ಕೆಲವರನ್ನು ಮಂತ್ರರೂಪಿಗಳನ್ನಾಗಿಯೂ, ಇನ್ನು ಕೆಲವರನ್ನು ಗುರುಗಳನ್ನಾಗಿಯೂ ಮಾಡಿ ಸದಾಶಿವನು ಶುದ್ಧಾಧ್ವದಲ್ಲಿ ನಿಲ್ಲಿಸುವನು; ಅನಂತೇಶ್ವರನು ಪ್ರಳಯಾಕಲರನ್ನೂ ನೂರುಹದಿನೆಂಟು ರುದ್ರರನ್ನೂ ಸೃಷ್ಟಿಸಿ ಅಶುದ್ಧಾಧ್ವದಲ್ಲಿ ಸ್ಥಾಪಿಸಿ, ಬ್ರಹ್ಮಾದಿಗಳನ್ನು ಅವರವರ ಕರ್ಮವನ್ನನುಸರಿಸಿ ಭುವನಾಧಿಪತಿಗಳನ್ನಾಗಿ ಸ್ಥಾಪಿಸುವನೆಂಬೀ ಅಂಶಗಳನ್ನು ಹನ್ನೊಂದನೆಯ ಶ್ಲೋಕದಲ್ಲಿ ತೋರಿಸುತ್ತಾರೆ.

**ಜ್ಞಾನಾತ್ ಕೇವಲಿಷು ಸ್ಥಿತೇಷು ಪರತೋಗ್ರಂಥೇಶ್ಚ ಕಾಂಶ್ಚಿತ್ಪತೀನ್**
**ಮಂತ್ರಾಣಾಂ ಮಲಪಾಕಯೋಗಸದೃಶಾನ್ ಮಂತ್ರಾನ್ ಶಿವೋಽನ್ಯಾನ್**
**ಗುರೂನ್ ।**
**ಕೃತ್ವಾ ಶುದ್ಧಪಥೇಽಶುಚೌ ಲಯಕಲಾನ್ ಸೂಕ್ಷ್ಮಾಂಗಕಾನೀಶ್ವರೋ**
**ರುದ್ರಾಂಶ್ಚಾಪಿ ವಿಧಾಯ ದೇಹಪುರಗಾನ್ ಶಿಷ್ಟಾನ್ ವಿಧತ್ತೇ ಭವೇ ॥೧೧॥**

**ಟೀಕೆ**— ಶಿವಃ—ಸದಾಶಿವನು, ಗ್ರಂಥೇಃ ಪರತಃ—ಮಾಯೆಗೆ ಮೇಲೆ, ಸ್ಥಿತೇಷು—ಇರುವಂಥ, ಜ್ಞಾನಾತ್ ಕೇವಲಿಷು—ಕರ್ಮಮಾಯಾಬಂಧಗಳೆರಡರಿಂದಲೂ ಬಿಡಲ್ಪಟ್ಟು ಕೇವಲ ಜ್ಞಾನದಿಂದ ವಿಜ್ಞಾನಕಲರೆನಿಸಿಕೊಂಡಿರುವ ಆತ್ಮರಲ್ಲಿ, ಕಾಂಶ್ಚಿತ್—ಕೆಲವರನ್ನು, ಮಲಪಾಕಯೋಗಸದೃಶಾನ್—ಮಲಪರಿಪಾಕಕ್ಕೆ ಸದೃಶರಾಗುವ, ಮಂತ್ರಾಣಾಂಪತೀನ್—ಮಂತ್ರಾಧಿಪತಿಗಳನ್ನಾಗಿಯೂ, ಅನ್ಯಾನ್—ಇನ್ನುಕೆಲವರನ್ನು, ಮಂತ್ರಾನ್—ಸಪ್ತಕೋಟಿ ಮಹಾಮಂತ್ರಗಳನ್ನಾಗಿಯೂ, ಅನ್ಯಾನ್—ಬೇರೆ ಕೆಲವರನ್ನು (ಮೂರುವರೆಕೋಟಿ ಆತ್ಮರನ್ನು) ಗುರೂನ್—ಗುರುಗಳನ್ನಾಗಿಯೂ, ಕೃತ್ವಾ—ಮಾಡಿ, ಶುದ್ಧಪಥೇ—ಶುದ್ಧಾಧ್ವದಲ್ಲಿ, ವಿಧತ್ತೇ—ವಾಸಮಾಡಿಸುತ್ತಾನೆ. ಈಶ್ವರಃ—ಅನಂತೇಶ್ವರನು, ಅಶುಚೌ—ಅಶುದ್ಧಾಧ್ವದಲ್ಲಿ, ಸೂಕ್ಷ್ಮಾಂಗಕಾನ್—ಕಲೆ ಮೊದಲಾದುವುಗಳಿಂದ ಉಂಟಾಗುವ ಸೂಕ್ಷ್ಮದೇಹವುಳ್ಳ, ಲಯಕಲಾನ್—ಪ್ರಳಯಾಕಲರೆನಿಸಿಕೊಂಡ ಆತ್ಮರನ್ನೂ, ರುದ್ರಾಂಶ್ಚಾಪಿ—ನೂರುಹದಿನೆಂಟು ರುದ್ರರನ್ನೂ, ವಿಧಾಯ—ಸೃಷ್ಟಿಸಿ, ದೇಹಪುರಗಾನ್—ಪುರ್ಯಷ್ಟಕದೇಹವುಳ್ಳ, ಶಿಷ್ಟಾನ್—ಉಳಿದವರನ್ನು, ಭವೇ—ಕರ್ಮಾನುಸಾರವಾಗಿ ಬರುವ ಸಂಸಾರದಲ್ಲಿ, ವಿಧತ್ತೇ—ಭುವನಾಧಿಪತಿಗಳನ್ನಾಗಿ ಮಾಡುತ್ತಾನೆ.

**ಅವತರಣಿಕೆ**— ಶಿವನಲ್ಲಿ ಸಮವಾಯಸಂಬಂಧದಿಂದ ಅಡಗಿರುವ ಕ್ರಿಯಾಶಕ್ತಿಯಿಂದ ಅಧಿಷ್ಠಿತವಾಗಿ ಉಪಾದಾನಕಾರಣವಾಗುವ ಕುಂಡಲಿನೀಶಕ್ತಿಯೆಂಬುದು ತನ್ನಲ್ಲಿ ಉಂಟಾದ ಸಮಸ್ತ ಜಗತ್ತನ್ನು ಧರಿಸುತ್ತಿರುವುದೆಂಬ ಅಂಶವನ್ನೂ, ಕಲಾಶಕ್ತಿಯಾದರೋ—ಮಹಾಂಧಕಾರಮಧ್ಯದಲ್ಲಿರುವ ದೀಪವು ಅಂಧಕಾರವನ್ನು ದೂರಪಡಿಸಿ ಘಟಾದಿಪದಾರ್ಥಗಳನ್ನು ಪ್ರಕಾಶಪಡಿಸುವಂತೆ ಆಣವಮಲದಿಂದ ಆವರಿಸಲ್ಪಟ್ಟಿರುವ ಆತ್ಮಗಳ ಆಣವಮಲವನ್ನು ದೂರಪಡಿಸಿ ಸ್ವಾಭಾವಿಕವಾದ ಕರ್ತೃತ್ವಶಕ್ತಿಯನ್ನು ಪ್ರಕಾಶಪಡಿಸುತ್ತದೆಯೆಂಬ ಅಂಶವನ್ನೂ ಹನ್ನೆರಡನೆಯ ಶ್ಲೋಕದಲ್ಲಿ ತೋರಿಸುತ್ತಾರೆ.

**ಸೂಕ್ಷ್ಮಸ್ಥೂಲನಿನಾದಬಿಂದುಲಿಪಿಗೈಃ ಶಕ್ತ್ಯಾದಿಕಾರ್ಯೈರ್ಜಗ**
**ನ್ಮಾಯೀಯಂ ನಿಜನಾದಗಾ ಚ ಕುಟಿಲಾ ಧತ್ತೇ ಕಲಾಭಿರ್ಜನಾನ್ ।**
**ಕ್ಷಿಪ್ತ್ವಾ ಸಾವೃತಿಚಿದ್ವತಾಂ ಪ್ರಕಟಯತ್ಯೇಕಪ್ರದೇಶೇ ಮಲಂ**
**ಶಂಭೋಸ್ಸಾತು ನಿಯೋಗಶಕ್ತಿಕಲಿತಾ ಪ್ರಾಕ್ಕರ್ತೃಶಕ್ತಿಂ ಕಲಾ ॥೧೨॥**

**ಟೀಕೆ** — ನಿಜನಾದಗಾ — ಸ್ವಭಾವಸಿದ್ಧವಾಗಿರುವ ನಾದಸ್ವರೂಪವಾದ, ಕುಟಿಲಾ — ಕುಂಡಲಿನೀಶಕ್ತಿಯೆಂಬುದು (ಶಿವಸಮೇತವಾಗಿರುವ ಕ್ರಿಯಾಶಕ್ತಿಯಿಂದ ಅಧಿಷ್ಠಿತವಾದುದಾಗಿ) ಸೂಕ್ಷ್ಮಸ್ಥೂಲನಿನಾದಬಿಂದುಲಿಪಿಗೈಃ — ಸೂಕ್ಷ್ಮಗಳಾಗಿಯೂ ಸ್ಥೂಲಗಳಾಗಿಯೂ ಇರುವ, ನಾದ-ಬಿಂದು-ವರ್ಣಸ್ವರೂಪಗಳಾದ, ಶಕ್ತ್ಯಾದಿಕಾರ್ಯೈಃ — ಕುಂಡಲಿನೀಶಕ್ತಿಯ ಪ್ರಥಮಕಾರ್ಯವರ್ಗಗಳೊಡನೆಯೂ, ಕಲಾಭಿಃ — ನಿವೃತ್ತಿ ಮೊದಲಾದ ಪಂಚಕಲೆಗಳೊಡನೆಯೂ, ಮಾಯಿಯೀ — ಮಹಾಮಾಯೆ ಮುಂತಾದ ಮೂರು ಮಾಯೆಗಳ ಸ್ವರೂಪವಾಗಿರುವ, ಜಗತ್ — ಸ್ಥಾವರಜಂಗಮರೂಪವಾದ ಸಮಸ್ತ ಪ್ರಪಂಚವನ್ನೂ, (ತಥಾ) — ಹಾಗೆಯೇ, ಜನಾನ್ — ಅನಂತೇಶ್ವರರೇ ಮೊದಲಾದ ವಿಜ್ಞಾನಕಲರೆಂಬ ಸಮಸ್ತಾತ್ಮವರ್ಗಗಳನ್ನೂ, ಧತ್ತೇ — ಧರಿಸುತ್ತಿರುವುದು. ಸಾ ಕಲಾತು — ಆತ್ಮಗಳ ಕರ್ತೃತ್ವಶಕ್ತಿಯನ್ನು ಪ್ರಕಾಶಪಡಿಸುವ ಆ ಕಲಾತತ್ತ್ವವಾದರೋ, ಶಂಭೋಃ — ಅನಂತೇಶ್ವರನ, ನಿಯೋಗಶಕ್ತಿಕಲಿತಂ — ಇಚ್ಛಾರೂಪವಾದ ತಿರೋಧಾನಶಕ್ತಿಯಿಂದ ಅಧಿಷ್ಠಿತವಾಗಿ, ಸಾವೃತಿಚಿದ್ವತಾಂ — ಮಲಾವರಣಸಹಿತರಾದ ಚೇತನರ, ಮಲಂ — ಅನಾದಿಯಾದ ಆಣವಮಲವನ್ನು, ಏಕಪ್ರದೇಶೇ — ಒಂದು ಪಾರ್ಶ್ವದಲ್ಲಿ, ಕ್ಷಿಪ್ತ್ವಾ — ತಳ್ಳಿ, ಪ್ರಾಕ್ಕರ್ತೃಶಕ್ತಿಂ — ಮೊದಲೇ ಸ್ವಭಾವಸಿದ್ಧವಾಗಿರುವ ಸ್ವತಂತ್ರಜ್ಞಾನಕ್ರಿಯಾರೂಪವಾದ ಕರ್ತೃತ್ವಶಕ್ತಿಯನ್ನು, ಪ್ರಕಟಯತಿ — ಸ್ವಲ್ಪಮಟ್ಟಿಗೆ ಪ್ರಕಾಶಪಡಿಸುತ್ತದೆ.

**ಅವತರಣಿಕೆ** — ಕರ್ತೃತ್ವಾದಿ ಶಕ್ತಿಗಳಿಗೆ ಉಪಾದಾನಕಾರಣವಾದ ಕಲೆಯೆಂಬುದು ವಿಷಯಜ್ಞಾನವನ್ನು ಪ್ರಕಾಶಪಡಿಸುವುದಕ್ಕಾಗಿ ವಿದ್ಯಾತತ್ತ್ವವು ಕಾರಣವೆನಿಸಿಕೊಂಡು ನಿಲ್ಲುವುದು. ವಿದ್ಯಾತತ್ತ್ವದಿಂದ ಪ್ರಕಾಶಗೊಳಿಸಲ್ಪಟ್ಟ ಜ್ಞಾನಶಕ್ತಿಯಿಂದ ವಿಷಯಗಳನ್ನು ತಿಳಿದುಕೊಂಡ ಆತ್ಮನಿಗೆ ಭೋಗ್ಯವಸ್ತುಗಳಲ್ಲಿ ಅಭಿಲಾಷೆಯಿಲ್ಲವಾದರೆ ವೃದ್ಧಿಯಿಲ್ಲವಾದುದರಿಂದ ಅಭಿಲಾಷೆಯನ್ನು ಉಂಟುಮಾಡುವುದಕ್ಕಾಗಿ ರಾಗತತ್ತ್ವವು ಅಪೇಕ್ಷಿತವಾಗಿರುವುದೆಂದು ತೋರಿಸುವುದಕ್ಕಾಗಿ ವಿದ್ಯಾತತ್ತ್ವ ರಾಗತತ್ತ್ವಗಳೆರಡರ ಸ್ವಭಾವಗಳನ್ನು ಹದಿಮೂರನೆಯ ಶ್ಲೋಕದಲ್ಲಿ ಹೇಳುತ್ತಾರೆ.

**ಜ್ಞಾನಂ ಚಾತ್ಮಗತಂ ಪ್ರಕಾಶ್ಯ ಮನುಜಾನ್ ಪ್ರಾಕ್ಕರ್ತೃಶಕ್ತ್ಯನ್ವಿತಾನ್**
**ವಿದ್ಯಾಕ್ಷೇಶಗತಾಕ್ಷಗೋಚರಧಿಯಂ ಸಂಗ್ರಾಹಯತ್ಯಾಂತರೀ ।**

**ಬೌದ್ಧಾದ್ವೈಷಯಿಕಾತ್ಪರಶ್ಚ ಗುಣತೋ ರಾಗಃ ಪ್ರವೃತ್ತೇರ್ನೃಣಾಂ**
**ಭೋಗೇ ವ್ಯಕ್ತದೃಶಾಂ ಸ್ಪೃಹಾಂ ಜನಯತಿ ಜ್ಞಾತಾಖಿಲಾರ್ಥೇ**
**ಷ್ವಿಹ ||೧೩||**

**ಟೀಕೆ**— ವಿದ್ಯಾ—ವಿಷಯವನ್ನು ತಿಳಿಯಪಡಿಸುವಂಥದಾದುದರಿಂದ ವಿದ್ಯೆಯೆಂಬ ಕಾರಣನಾಮಧೇಯವನ್ನು ಪಡೆದಿರುವ ವಿದ್ಯಾತತ್ತ್ವವು, ಪ್ರಾಕ್ಕರ್ತೃಶಕ್ತ್ಯನ್ವಿತಾನ್—ಮೊದಲೇ ಸ್ವಭಾವಸಿದ್ಧವಾಗಿರುವ ಕರ್ತೃತ್ವಶಕ್ತಿಯೊಡನೆ ಕೂಡಿದ, ಮನುಜಾನ್—ಮಲಬದ್ಧರಾದ ಚೇತನರನ್ನು ಕುರಿತು (ಚೇತನರಿಗೆ), ಆತ್ಮಗತಂ ಜ್ಞಾನಂ—ಮಲದಿಂದ ಮುಚ್ಚಲ್ಪಟ್ಟ ಚೇತನದಲ್ಲಿ ಇದ್ದೂ ಇಲ್ಲದಂತೆ ಒಳಗೆ ಅಡಗಿರುವ ವಿಷಯಜ್ಞಾನವನ್ನು, ಪ್ರಕಾಶ್ಯ—ವಿಷಯಗಳನ್ನು ಅರಿಯುವಷ್ಟು ಸಾಮರ್ಥ್ಯವುಳ್ಳುದಾಗುವಂತೆ ಪ್ರಕಾಶಪಡಿಸಿ, ಅಕ್ಷೇಶಗತಾಕ್ಷಗೋಚರಧಿಯಂ—ಮನಸ್ಸಿಗೆ ಗೋಚರಗಳಾಗಿರುವ ಬಾಹ್ಯವಿಷಯ ವಸ್ತುಗಳನ್ನು ಗ್ರಹಿಸಿ ನಿಶ್ಚಯಿಸುವ ಬುದ್ಧಿಯನ್ನು, ಸಂಗ್ರಾಹಯತಿ—ಚನ್ನಾಗಿ ಕೂಡಿಸುವುದು ; (ಅತಃ)—ಆದುದರಿಂದಲೇ, ಆಂತರೀ—ಈ ವಿದ್ಯಾತತ್ತ್ವವು ಚೇತನರಿಗೆ ವಿಷಯಜ್ಞಾನಪ್ರಕಾಶವುಂಟಾಗುವುದರಲ್ಲಿ ಅಂತರಂಗವಾಗಿರುವುದು. ಬೌದ್ಧಾತ್-ಗುಣತಃ—ಬುದ್ಧಿಧರ್ಮವಾದ ಅವೈರಾಗ್ಯಗುಣಕ್ಕಿಂತಲೂ, ವೈಷಯಿಕಾಚ್ಚಗುಣತಃ—ಗಂಧ-ಪುಷ್ಪ-ತಾಂಬೂಲ-ಮುಂತಾದ ವೈಷಯಿಕಗುಣಕ್ಕಿಂತಲೂ, ಪರಃ—ಭಿನ್ನವಾಗಿರುವ (ಮತ್ತೊಂದಾಗಿರುವ), ರಾಗಃ—ರಾಗವೆಂಬ ತತ್ತ್ವವು, ಇಹ—ಇಲ್ಲಿ, ಪ್ರವೃತ್ತೇ ಭೋಗೇ—ಸುಖದುಃಖರೂಪವಾಗಿ ಪ್ರವರ್ತಿಸಿರುವ ಭೋಗದಲ್ಲಿ, ವ್ಯಕ್ತದೃಶಾಂ—ಪ್ರಕಾಶಿತವಾದ ಜ್ಞಾನವುಳ್ಳ, ನೃಣಾಂ—ಬದ್ಧಾತ್ಮರಿಗೆ, ಜ್ಞಾತಾಖಿಲಾರ್ಥೇಷು—ಕಾಣಲ್ಪಟ್ಟ-ಚಂದನ ಕುಸುಮ ತಾಂಬೂಲ ಮುಂತಾದ ಸಮಸ್ತ ಬಾಹ್ಯವಿಷಯಗಳಲ್ಲಿಯೂ, ಸ್ಪೃಹಾಂ—ಆಶೆಯನ್ನು, ಜನಯತಿ—ಉಂಟುಮಾಡುತ್ತದೆ.

**ಅವತರಣಿಕೆ**— ಜಲಬುದ್ಬುದದಂತೆ ಅಸ್ಥಿರವಾದ ಬಾಲ್ಯ-ಕೌಮಾರ-ಯೌವನ-ವಾರ್ಧಕ-ಮೊದಲಾಗಿ ಹಲವುಬಗೆಯಾದ ಅವಸ್ಥೆಗಳನ್ನು ಪಡೆದಿರುವ ಶರೀರದ ಪರಿಣಾಮವು ಕಾಲಕ್ಕೆ ಅಧೀನವಾಗಿ ಉಂಟಾಗುವುದಾದಪ್ರಯುಕ್ತ ಕಲೆ-ವಿದ್ಯೆ-ರಾಗ ಈ ತತ್ತ್ವಗಳಿಗಿಂತಲೂ ಮೊದಲೇ ಕಾಲವೆಂಬ ಒಂದು ತತ್ತ್ವವಿರಬೇಕೆಂದೂ, ಮತ್ತು ಆತ್ಮಗಳಿಗೆ ಪೂರ್ವಕರ್ಮಾನುಸಾರವಾಗಿ ಯಾವ ದೇಶಕಾಲಗಳಲ್ಲಿ ಎಷ್ಟೆಷ್ಟು ಸುಖದುಃಖಗಳನ್ನು ಅನುಭವಿಸಬೇಕಾಗಿರುವುದೋ ಅಂಥ ದೇಶ

ಕಾಲಗಳಲ್ಲಿ ಅಷ್ಟಷ್ಟು ಸುಖದುಃಖಗಳನ್ನು ಹೆಚ್ಚುಕಡಮೆಯಿಲ್ಲದೆ ಅನುಭವಕ್ಕೆ ತಂದೊಡ್ಡುವ ನಿಯತಿಯೆಂಬುದೊಂದು ತತ್ತ್ವವಿರಬೇಕೆಂದೂ-ಹದಿನಾಲ್ಕನೆಯ ಶ್ಲೋಕದಲ್ಲಿ ತೋರಿಸುತ್ತಾರೆ.

**ಕಾಲೋ ಭೂತಭವದ್ವಿಭಾವಿವಿಕೃತೋ ಜಾತಃ ಪುರಾಽತ್ರೇಶಿತುಃ**
**ಶಕ್ತ್ಯಾ ಕ್ಷಿಪ್ರಚಿರಾದಿಬೋಧಕಲನಾತ್ಪುಂಸಃ ಕ್ಷಿಪತ್ಯಾದಿತಃ ।**
**ಭುಕ್ತೌ ಸ್ವಾರ್ಜಿತಕರ್ಮಣಾಂ ನಿಯತಿರಪ್ಯಾಜ್ಞೇವ ರಾಜ್ಞಾಂ ನೃಣಾಂ**
**ಕೃಷ್ಯಾದೇಶ್ಚನಿಯಾಮಕಾಖ್ಯಬಲತಶ್ಶಂಭೋರ್ನಿಯಂತ್ರೀ ಸ್ಥಿತಾ ॥೧೪॥**

**ಟೀಕೆ**— ಅತ್ರ—ಇಲ್ಲಿ, ಪುರಾ—ಈ ಕಲೆ ಮೊದಲಾದ ತತ್ತ್ವಗಳಿಗಿಂತಲೂ ಪೂರ್ವದಲ್ಲಿಯೇ, ಜಾತಃ—ಉಂಟಾಗಿರುವ, ಕಾಲಃ—ಕಾಲವೆಂಬ ಒಂದು ತತ್ತ್ವವು, ಈಶಿತುಃ—ಪರಮೇಶ್ವರನ, ಶಕ್ತ್ಯಾ—ಶಕ್ತಿಯಿಂದ, (ಅಧಿಷ್ಠಿತಃ)—ಆಕ್ರಮಿಸಲ್ಪಟ್ಟುದಾಗಿ, ಭೂತಭವದ್ವಿಭಾವಿವಿಕೃತಃ—ಭೂತಕಾಲ-ವರ್ತಮಾನಕಾಲ-ಭವಿಷ್ಯತ್ಕಾಲಗಳೆಂಬ ಮೂರು ವಿಧವಾದ ಪರಿಣಾಮಗಳನ್ನು ಪಡೆದುದಾಗಿ, ಪುಂಸಃ—ಆತ್ಮನಿಗೆ, ಕ್ಷಿಪ್ರಚಿರಾದಿಬೋಧಕಲನಾತ್—ಶೀಘ್ರ-ವಿಳಂಬ-ಎಂಬಿವೇ ಮೊದಲಾದ ಬೋಧೆಯನ್ನುಂಟುಮಾಡುವುದರಿಂದ, ಕ್ಷಿಪತಿ—ಶರೀರಾದಿಗಳನ್ನು ಪರಿಣಾಮಗೊಳಿಸಿ ನಾಶಪಡಿಸುತ್ತದೆ. ಅಪಿಚ—ಮತ್ತು, ನೃಣಾಂ—ಆತ್ಮರಿಗೆ, ಆದಿತಃ—ಪೂರ್ವಕಾಲದಲ್ಲಿ, ಸ್ವಾರ್ಜಿತಕರ್ಮಣಾಂ—ತಮ್ಮಿಂದ ಗಳಿಸಲ್ಪಟ್ಟದ್ದ ಕರ್ಮಗಳ, ಭುಕ್ತೌ—ಅನುಭವವಿಷಯದಲ್ಲಿ, ಕೃಷ್ಯಾದೇಃ—ಅವರವರು ಮಾಡಿದ ಕೃಷ್ಯಾದಿ ಫಲದ, ಭುಕ್ತೌ—ಅನುಭವವಿಷಯದಲ್ಲಿ, ನಿಯಂತ್ರೀ—ನಿಯಮಪಡಿಸುತ್ತಿರುವ, ರಾಜ್ಞಾಂ-ಆಜ್ಞೇವ—ರಾಜರ ಅಪ್ಪಣೆಯಂತೆ, ನಿಯತಿಃ—ನಿಯತಿಯೆಂಬ ಒಂದು ತತ್ತ್ವವು, ಶಂಭೋಃ—ಪರಮೇಶ್ವರನ, ನಿಯಾಮಕಾಖ್ಯಬಲತಃ—ನಿಯಾಮಕಶಕ್ತಿವಶದಿಂದ, ನಿಯಂತ್ರೀಸತೀ—ನಿಯಮಪಡಿಸುತ್ತಿರುವಂಥದಾಗಿ, ಸ್ಥಿತಾ—ಇರುವುದು.

**ಅವತರಣಿಕೆ**— ಅನಂತೇಶ್ವರನಿಂದ ಕ್ಷೋಭಿಸಲ್ಪಟ್ಟ ಮಾಯೆಯ ದೆಸೆಯಿಂದ ಉತ್ಪನ್ನಗಳಾಗಿರುವ ಕಲೆ-ವಿದ್ಯೆ-ರಾಗ-ಕಾಲ-ನಿಯತಿ ಎಂಬ ಐದು ತತ್ತ್ವಗಳನ್ನು ಕವಚಗಳಂತೆ ಧರಿಸಿರುವ ಆತ್ಮನಿಗೆ ವಿಷಯಭೋಗಸಿದ್ಧಿಗಾಗಿ ಪುಂಸ್ತ್ವವೆಂಬುದೊಂದು ಮಲವು ಬಂದು ಸೇರಿದುದರಿಂದ ಪುರುಷನೆಂಬ ಮತ್ತೊಂದು ತತ್ತ್ವವುಂಟಾಗಿರುವುದು. ಮತ್ತು ಅಂಥ ವಿಷಯೋಪಭೋಗದಲ್ಲಿ ಪ್ರವರ್ತಿಸಿರುವ ಪುರುಷತತ್ತ್ವಕ್ಕೆ ಭೋಗನಿಷ್ಪತ್ತಿಗಾಗಿ ಭೋಗಸಾಧನವಾದ ಗುಣಾದಿತತ್ತ್ವಕ್ಕೆ

ಆಶ್ರಯವಾಗಿರುವ ಪ್ರಕೃತಿಯೆಂಬುದೊಂದು ತತ್ತ್ವವುಂಟಾಗಿರುವುದೆಂದು ಅಭಿಪ್ರಾಯಪಟ್ಟು ಪುರುಷತತ್ತ್ವ-ಪ್ರಕೃತಿತತ್ತ್ವಗಳೆರಡರ ಸ್ವಭಾವಗಳನ್ನು ಹದಿನೈದನೆಯ ಶ್ಲೋಕದಲ್ಲಿ ತೋರಿಸುತ್ತಾರೆ.

**ಆತ್ಮಾ ಪಂಚಭಿರೇಭಿರತ್ರ ಕಲಿತೋ ಭೋಕ್ತೃತ್ವಯುಕ್ತೋ ಯದಾ**
**ತತ್ತ್ವಂ ನೋ ಪುರುಷತ್ವಮೇತಿ ಗಣನಾತ್ಪುಂಸ್ತ್ವಾದ್ವಿಶುದ್ಧ್ಯೈ ಮಲಾತ್**
**ಭೋಕ್ತೃತ್ವಂ ಪ್ರಥಮಂ ಪ್ರವೃತ್ತಿವಿಷಯಂ ಪೂರ್ವೈರ್ಗತಸ್ಯಾತ್ಮನೋ**
**ಭೋಗಾರ್ಥಂ ಪ್ರಕೃತಿರ್ಗುಣಾದಿವಿಕೃತೇಸ್ತತ್ಸಾಧನಸ್ಯಾಶ್ರಯಾ ॥೧೫॥**

**ಟೀಕೆ**— ಅತ್ರ—ಇಲ್ಲಿ, ಆತ್ಮಾ—ಬದ್ಧಜೀವನು, ಏಭಿಃಪಂಚಭಿಃ—ಕಲಿ ಮೊದಲಾದ ಈ ಐದು ತತ್ತ್ವಗಳಿಂದಲೂ, ಕಲಿತಃ—ಕಟ್ಟಲ್ಪಟ್ಟವನಾಗಿ, ಯದಾ—ಯಾವಾಗ, ಭೋಕ್ತೃತ್ವಯುಕ್ತಃ—ಕರ್ಮಫಲಗಳನ್ನು ಅನುಭವಿಸುವ ಸಾಮರ್ಥ್ಯವುಳ್ಳವನಾಗುತ್ತಾನೆಯೋ, (ತದಾ)—ಆ ಕಾಲದಲ್ಲಿ, ಪುರುಷತ್ವಂ— ಪುಂಸ್ತ್ವವೆಂಬ ಪುರುಷತತ್ತ್ವವಾಗಿರುವಿಕೆಯನ್ನು, ಏತಿ—ಹೊಂದುತ್ತಾನೆ. (ಇದಂಚ)—ಈ ಪುರುಷತತ್ತ್ವವೆಂಬುದು, (ದೀಕ್ಷಾಯಾಂ)—ದೀಕ್ಷೆಯನ್ನು ಸ್ವೀಕರಿಸುವ ಕಾಲದಲ್ಲಿ, ಪುಂಸ್ತ್ವಾತ್-ಮಲಾತ್—ಕಲಿ ಮೊದಲಾದ ಐದು ತತ್ತ್ವಗಳೆಂಬ ಕವಚಗಳ ಧಾರಣರೂಪವಾದ ಪುಂಸ್ತ್ವವೆಂಬ ಮಲದದೆಸೆಯಿಂದ, ವಿಶುದ್ಧ್ಯೈ—ಇವನನ್ನು ದೂರಪಡಿಸಿ ಶೋಧಿಸುವುದಕ್ಕಾಗಿ, ಗಣನಾತ್— ಇಪ್ಪತ್ತೈದನೆಯ ತತ್ತ್ವವು ಪುರುಷತತ್ತ್ವವಾಗಿರುವುದೆಂದು ಪರಿಗಣಿಸಿದುದರಿಂದ, ತತ್ತ್ವಂ—ತತ್ತ್ವಪಂಕ್ತಿಯಲ್ಲಿ (ಉಕ್ತವಾದ) ತತ್ತ್ವವಾಗಿರುವುದು. (ವಸ್ತುತಸ್ತು)—ನಿಜಸ್ಥಿತಿಯನ್ನು ವಿಚಾರಿಸಿ ನೋಡಿದರೆ, ನೋತತ್ತ್ವಂ— ಇದು ಪ್ರತ್ಯೇಕತತ್ತ್ವವಲ್ಲ, ಪೂರ್ವೈಃಗತಸ್ಯ—ಪೂರ್ವೋಕ್ತಗಳಾದ ಕಲಿ ಮುಂತಾದ ಐದು ತತ್ತ್ವಗಳೊಡನೆ ಕೂಡಿರುವ, ಆತ್ಮನಃ—ಸಕಲನೆಂಬ ಬದ್ಧಾತ್ಮನಿಗೆ, ಭೋಕ್ತೃತ್ವಂ— ಫಲಾನುಭವಸ್ವಭಾವವು, ಪ್ರಥಮಾ—ಮೊದಲು, ಪ್ರವೃತ್ತಿವಿಷಯಂ—ಪ್ರವರ್ತಿಸಿದುದಾಗಿ (ಆಗುತ್ತದೆ). ತತಶ್ಚ—ಆದುದರಿಂದ, (ಭೋಗಪ್ರವೃತ್ತಸ್ಯತಸ್ಯ)—ಭೋಗದಲ್ಲಿ ಪ್ರವರ್ತಿಸಿರುವ ಆ ಆತ್ಮನಿಗೆ, ಭೋಗಾರ್ಥಂ—ಭೋಗಸಿದ್ಧಿಗಾಗಿ, ತತ್ಸಾಧನಸ್ಯ—ಅಂಥ ಸುಖಾದಿಭೋಗಕ್ಕೆ ಸಾಧನವಾಗಿರುವ, ಗುಣಾದಿವಿಕೃತೇಃ—ಗುಣತತ್ತ್ವ ಮೊದಲಾದ ಕಾರ್ಯವರ್ಗಕ್ಕೆ, ಆಶ್ರಯಾ—ಉಪಾದಾನಕಾರಣವಾಗಿರುವ, ಪ್ರಕೃತಿಃ—ಪ್ರಕೃತಿತತ್ತ್ವವು, (ಜಾಯತೇ)—ಉಂಟಾಗುತ್ತದೆ.

**ಅವತರಣಿಕೆ**— ಪ್ರಕೃತಿತತ್ತ್ವದಿಂದ ಉಂಟಾದ ಗುಣತತ್ತ್ವದ ಮತ್ತು ಬುದ್ಧಿತತ್ತ್ವದ ಕಾರ್ಯವಿಶೇಷಗಳನ್ನು ಹದಿನಾರನೆಯ ಶ್ಲೋಕದಲ್ಲಿ ಹೇಳುತ್ತಾರೆ.

**ಸತ್ತ್ವಾದೇರ್ಲಘುತಾಪ್ರಕಾಶನಮಥೋಪಷ್ಟಂಭಕಂ ವ್ಯಾವೃತಿ**
**ರ್ಗೌರವ್ಯಾ ನಿಯಮಶ್ಚವೃತ್ತಯ ಇದಂ ಗೌಣಂ ವಿಮಿಶ್ರಂ ಪಶೌ ।**
**ಬುದ್ಧಿಸ್ಸಾಪುರುಷಸ್ಯ ಖಾದಿಕರಣೈಸ್ಸಂಗ್ರಾಹಿಕಾ ಭೋಗ್ಯಕಾ**
**ಭಾಸ್ವತ್ಯಾಧ್ಯವಸಾಯಿಕಾ ಚ ವಿಷಯೇ ಸಪ್ರತ್ಯಯಾ ಭಾವಗಾ ॥೧೬॥**

**ಟೀಕೆ**— ಅಥ—ಅನಂತರದಲ್ಲಿ, ಇದಂ—ಈ ಪ್ರಕೃತಿತತ್ತ್ವವು, ಸತ್ತ್ವಾದೇಃ—ಸತ್ತ್ವ-ರಜಸ್ಸು-ತಮಸ್ಸು ಎಂಬ ಗುಣತ್ರಯಕ್ಕೆ, ಲಘುತಾಪ್ರಕಾಶನಂ—ಸೂಕ್ಷ್ಮರೂಪದಿಂದ ಪ್ರಕಾಶವಾಗಿಯೂ, ಉಪಷ್ಟಂಭಕಂಚ—ಅವುಗಳಿಗೆ ಆಧಾರವಾಗಿದ್ದುಕೊಂಡು ಧಾರಕವಾಗಿಯೂ, (ಸ್ಯಾತ್)—ಆಗುವುದು. ವ್ಯಾವೃತಿಃ—ವಿಸ್ಮೃತಿಯಿಲ್ಲದಿರುವಿಕೆಯೂ (ಪ್ರಕಾಶವೂ), ಗೌರವ್ಯಾ—ಗುರುತ್ವವೂ (ಚಲನಾದಿ ವ್ಯಾಪಾರವೂ, ನಿಯಮಃ—ಅಡಗಿರುವಿಕೆಯೂ (ಸೋಮಾರಿತನವೂ), ವೃತ್ತಯಃ—ಕ್ರಮವಾಗಿ ಸತ್ತ್ವರಜಸ್ತಮೋಗುಣಗಳ ಕೆಲಸಗಳಾಗಿರುವುವು. ಇದಂ ಗೌಣಂ—ಇಂಥ ವೃತ್ತಿಗಳುಳ್ಳ ಈ ಗುಣತತ್ತ್ವವು, ಪಶೌ—ಬದ್ಧಾತ್ಮನಲ್ಲಿ (ಸೂಕ್ಷ್ಮಶರೀರದ ಮೂಲಕವಾಗಿ ವ್ಯಾಪಿಸಿ), ವಿಮಿಶ್ರಂ—ಕ್ರಮವಾಗಿ ಸುಖದುಃಖಮೋಹಗಳಿಗೆ ಕಾರಣವೆನಿಸಿಕೊಂಡು ಸಂಮಿಳಿತವಾಗಿರುವುದು. ಸಾ ಬುದ್ಧಿಃ—ಪೂರ್ವೋಕ್ತವಾದ ಆ ಬುದ್ಧಿತತ್ತ್ವವು, ಪುರುಷಸ್ಯ—ಬದ್ಧಾತ್ಮನಿಗೆ, ಖಾದಿಕರಣೈಃ—ಆಕಾಶಾದಿ ಭೂತಗಳೊಡನೆಯೂ ಜ್ಞಾನೇಂದ್ರಿಯ ಕರ್ಮೇಂದ್ರಿಯಗಳೊಡನೆಯೂ, ಸಂಗ್ರಾಹಿಕಾ—ಸಕಲ ವಿಷಯಗಳಿಗೂ ಚನ್ನಾಗಿ ಪ್ರಕಾಶಕವಾಗಿಯೂ, ಭೋಗ್ಯಕಾ—ವಿಷಯಾಕಾರವಾಗಿ ಪರಿಣಮಿಸಿ ಭೋಗ್ಯರೂಪವಾಗಿಯೂ, ವಿಷಯೇ—ದ್ರವ್ಯ ಗುಣ ಮುಂತಾದ ವಿಷಯ ಸ್ವರೂಪದಲ್ಲಿ, ಭಾಸ್ವತ್ಯಾಧ್ಯವಸಾಯಿಕಾ—ಇಂದ್ರಿಯಗಳ ಮೂಲಕ ಚನ್ನಾಗಿ ಪ್ರಕಾಶಿಸುತ್ತಿರುವ, ಅಧ್ಯವಸಾಯವೆಂಬ ನಿಶ್ಚಯಾತ್ಮಕ ಜ್ಞಾನಜನಕವಾಗಿಯೂ, ಭಾವಗಾ—ಧರ್ಮ, ಜ್ಞಾನ, ವೈರಾಗ್ಯ, ಐಶ್ವರ್ಯಗಳೆಂಬ ನಾಲ್ಕು ಸಾತ್ತ್ವಿಕಭಾವಗಳು, ಅಧರ್ಮ, ಅಜ್ಞಾನ, ಅನೈಶ್ವರ್ಯಗಳೆಂಬ ಮೂರು ತಾಮಸಭಾವಗಳು, ಅವೈರಾಗ್ಯವೆಂಬ ಒಂದು ರಾಜಸಭಾವ ಈ ಎಂಟು ಭಾವಗಳನ್ನು ಪಡೆದುದಾಗಿಯೂ (ಅವುಗಳಿಗೆ ಕಾರಣವಾಗಿಯೂ), ಸಪ್ರತ್ಯಯಾಚ—ಧರ್ಮಾದಿಗಳಿಂದ ಉಂಟಾಗುವ ಐವತ್ತು

ಬಗೆಯಾದ ಪ್ರತ್ಯಯದೊಡನೆ (ಜ್ಞಾನವಿಶೇಷದೊಡನೆ) ಕೂಡಿದುದಾಗಿಯೂ, (ಸ್ಯಾತ್)—ಆಗುವುದು.

ಅಷ್ಟಸಿದ್ಧಿಗಳು, ಒಂಬತ್ತು ತುಷ್ಟಿಗಳು, ಇಪ್ಪತ್ತೆಂಟು ಅಶಕ್ತಿಗಳು, ಐದು ಬುದ್ಧಿಭೇದಗಳು ಅಂತು ಈ ಐವತ್ತು ಪ್ರತ್ಯಯಗಳೆನಿಸಿಕೊಳ್ಳುವುವು. ಇವುಗಳ ಹೆಸರು ಲಕ್ಷಣ ಮುಂತಾದವುಗಳನ್ನು ಮತಂಗ ಪಾರಮೇಶ್ವರಾಗಮದಲ್ಲಿ ತಿಳಿಯ ಬಹುದು.

**ಅವತರಣಿಕೆ**— ಅಹಂಕಾರತತ್ತ್ವ ಮನಸ್ತತ್ತ್ವಗಳೆರಡರ ಕಾರ್ಯವಿಶೇಷ ಗಳನ್ನು ಹದಿನೇಳನೆಯ ಶ್ಲೋಕದಲ್ಲಿ ಹೇಳುತ್ತಾರೆ.

**ಚೇಷ್ಟಂತೇ ಮರುತಶ್ಶರೀರನಿಲಯಾಃ ಪುಂಸಾಂ ಯತೋಗ್ರಾಹಕೇ**
**ಸಂರಂಭಾದ್ವ್ಯವಸಾಯಮೇವ ಕುರುತೇ ಸತ್ತ್ವಾದಿಕ್ಯಾಹಂಕೃತಿಃ ।**
**ಅಕ್ಷಾಣಾಂ ವಿಷಯಪ್ರವೃತ್ತಿಕರಣಂ ಸಂಚಾರಿ ಶೀಘ್ರಂ ಸದಾ**
**ಸಂಕಲ್ಪಂ ಕುರುತೇಽವಧಾನಜನಕಂ ತ್ವಿಚ್ಛಾಸ್ವರೂಪಂ ಮನಃ ॥೧೭॥**

**ಟೀಕೆ**— ಪುಂಸಾಂ—ಬದ್ಧಜೀವರ, ಶರೀರನಿಲಯಾಃ—ಶರೀರದ ಒಳ ಭಾಗದಲ್ಲಿರುವ, ಮರುತಃ—ಪ್ರಾಣಾದಿ ಪಂಚವಾಯುಗಳು, ಯತಃ—ಯಾವ ಅಹಂಕಾರತತ್ತ್ವದಿಂದ, ಚೇಷ್ಟಂತೇ—ತಮ್ಮತಮ್ಮ ವ್ಯಾಪಾರಗಳನ್ನು ಪ್ರವತ್ತಿ ಸುತ್ತಿರುವುವೋ (ಸಾ) ಅಹಂಕೃತಿಃ—ಅಂಥ ಅಹಂಕಾರತತ್ತ್ವವು, ಸತ್ತ್ವಾ ದಿಕಾ— ಸತ್ತ್ವಾದಿಗುಣತ್ರಯವುಳ್ಳುದಾಗಿ, ಗ್ರಾಹಕೇ—ಶಬ್ದಾದಿ ವಿಷಯಗ ಳನ್ನು ಗ್ರಹಿಸುತ್ತಿರುವ ಪುರುಷನಲ್ಲಿ, ಸಂರಂಭಾತ್—ಪ್ರಯತ್ನದಿಂದ, ವ್ಯವಸಾ ಯಮೇವ—ವ್ಯಾಪಾರವನ್ನೇ, ಕುರುತೇ—ಮಾಡುತ್ತದೆ. ಅಕ್ಷಾಣಾಂ—'ಭೋ ಕ್ತೃ' ಎನಿಸಿಕೊಂಡ ಆತ್ಮನಿಗೆ ಭೋಗಸಾಧನಗಳಾದ ಜ್ಞಾನೇಂದ್ರಿಯ-ಕರ್ಮೇಂ ದ್ರಿಯಗಳೆಂಬ ಹತ್ತು ಇಂದ್ರಿಯಗಳಿಗೂ, ವಿಷಯಪ್ರವೃತ್ತಿಕರಣಂ—ಶಬ್ದಾದಿ ವಿಷಯಗಳಲ್ಲಿ ಪ್ರವೃತ್ತಿಯನ್ನು ಉಂಟುಮಾಡುವಂಥದಾಗಿಯೂ, ಶೀಘ್ರಂ— ವೇಗವುಳ್ಳುದಾಗಿಯೂ, ಸಂಚಾರಿ—ಬಾಹ್ಯೇಂದ್ರಿಯಗಳ ಮೂಲಕ ವಿಷಯಗಳಲ್ಲಿ ತಾನು ಸಂಚರಿಸುವಂಥದಾಗಿಯೂ, ಇಚ್ಛಾಸ್ವರೂಪಂ—ಇಚ್ಛಾಮಯವಾಗಿ ಯೂ ಇರುವ, ಮನಃ—ಮನ ಇಂದ್ರಿಯವು, ಸದಾ—ಯಾವಾಗಲೂ, ಅವ ಧಾನಜನಕಂ—ಆ ಆ ಇಂದ್ರಿಯಗಳಿಗೆ ಆ ಆ ವಿಷಯಗಳಲ್ಲಿ ಏಕಾಗ್ರತಾರೂಪ ವಾದ ಆಸಕ್ತಿಯನ್ನು ಉಂಟುಮಾಡುವಂಥದಾಗಿ, ಸಂಕಲ್ಪಂ—ವಿಷಯಧ್ಯಾನ ವನ್ನು, ಕುರುತೇ—ಮಾಡುತ್ತದೆ.

**ಅವತರಣಿಕೆ**— ಬಾಹ್ಯೇಂದ್ರಿಯಗಳೆನಿಸಿಕೊಂಡ ಐದು ಜ್ಞಾನೇಂದ್ರಿಯಗಳ ಮತ್ತು ಐದು ಕರ್ಮೇಂದ್ರಿಯಗಳ ವ್ಯಾಪಾರಗಳನ್ನು ಹದಿನೆಂಟನೆಯ ಶ್ಲೋಕದಲ್ಲಿ ತೋರಿಸುತ್ತಾರೆ.

**ಶ್ರೋತ್ರಾದ್ಯಂ ವಿಗ್ರಹಾಂಗಂ ಸ್ವವಿಷಯನಿನದಸ್ಪರ್ಶರೂಪಾದಿಬೋಧಾ-**
**ಚಿತ್ತದ್ವರ್ಗಂ ಕರ್ತೃಭಾವಾನುಸರಣಬಲತಃ ಪಂಚಕಂ ನುಃ ಕರೋತಿ ।**
**ವಾಗಾದ್ಯಂ ದೇಹಸಂಸ್ಥಂ ಸ್ವವಿಷಯವಚನಾದಾನಪೂರ್ವಂ ಸ್ವಕೃತ್ಯಂ**
**ಚಿತ್ತಾಪ್ತಂ ಪೂರ್ವಕರ್ಮವ್ಯತಿಕರವಶತಃ ಪಂಚಕಂ ನುರ್ವಿಧತ್ತೇ ॥೧೮॥**

**ಟೀಕೆ** —ವಿಗ್ರಹಾಂಗಂ, ಶರೀರಕ್ಕೆ ಮುಖ್ಯಾವಯವವಾಗಿರುವ, ಶ್ರೋತ್ರ ಮೊದಲಾದ ಜ್ಞಾನೇಂದ್ರಿಯಗಳೈದರ ವರ್ಗವು, ಚಿತ್ತದ್ವರ್ಗಂ (ಸತ್) ಮನ ಇಂದ್ರಿಯದೊಡನೆ ಕೂಡಿದುದಾಗಿ, ಕರ್ತೃಭಾವಾನುಸರಣಬಲತಃ—ಶಬ್ದಾದಿವಿಷಯಗಳನ್ನು ಗ್ರಹಿಸುವುದರಲ್ಲಿ ಕರ್ತೃವೆನಿಸಿಕೊಂಡಿರುವ ಶ್ರೋತ್ರ ಮೊದಲಾದ ಇಂದ್ರಿಯಗಳ ಸ್ಥಿತಿಯನ್ನು ಅನುಸರಿಸುವವಶದಿಂದ ಸ್ವವಿಷಯ ನಿನದಸ್ಪರ್ಶರೂಪಾದಿಬೋಧಾ—ತನಗೆ ವಿಷಯಗಳಾಗಿರುವ ಶಬ್ದಸ್ಪರ್ಶರೂಪರಸಗಂಧಗಳ ಜ್ಞಾನವನ್ನು, ನುಃ—ಪುರುಷನೆನಿಸಿಕೊಂಡ ಆತ್ಮನಿಗೆ, ಕರೋತಿ—ಉಂಟುಮಾಡುತ್ತದೆ. ದೇಹಸಂಸ್ಥಂ—ಶರೀರದಲ್ಲಿರುವ, ವಾಗಾದ್ಯಂ-ಪಂಚಕಂ—ವಾಕ್ಕು ಮೊದಲಾದ ಕರ್ಮೇಂದ್ರಿಯಗಳೈದರ ವರ್ಗವು, ಚಿತ್ತಾಪ್ತಂ (ಸತ್)—ಮನ ಇಂದ್ರಿಯದೊಡನೆ ಕೂಡಿದುದಾಗಿ, ಪೂರ್ವಕರ್ಮವ್ಯತಿಕರವಶತಃ—ಪೂರ್ವದಲ್ಲಿ ಮಾಡಿದ ಪುಣ್ಯಪಾಪಕರ್ಮಗಳ ಸಂಬಂಧವಶದಿಂದ, ಸ್ವವಿಷಯವಚನಾದಾನಪೂರ್ವಂ—ತನಗೆ ವಿಷಯಗಳಾಗಿರುವ ಹೇಳುವಿಕೆ, ತೆಗೆದುಕೊಳ್ಳುವಿಕೆ, ಹೋಗುವಿಕೆ, ಬಿಡುವಿಕೆ, ಆನಂದಿಸುವಿಕೆ ಎಂಬ, ಸ್ವಕೃತ್ಯಂ ತನ್ನ ಕೆಲಸವನ್ನು, ನುಃ—ಪುರುಷನೆನಿಸಿಕೊಂಡ ಆತ್ಮನಿಗೆ, ವಿಧತ್ತೇ—ಉಂಟುಮಾಡುತ್ತದೆ.

**ಅವತರಣಿಕೆ**— ಆಕಾಶ-ವಾಯು-ಅಗ್ನಿ-ಜಲ-ಪೃಥಿವಿ ಎಂಬ ಪಂಚಭೂತಗಳಿಗೆ ಕಾರಣಗಳಾಗಿಯೂ, ಉತ್ತರೋತ್ತರ ಒಂದೊಂದು ಗುಣವನ್ನು ಹೆಚ್ಚಾಗಿ ಪಡೆದಿರುವಂಥವುಗಳಾಗಿಯೂ ಇರುವ ಶಬ್ದತನ್ಮಾತ್ರೆ-ಸ್ಪರ್ಶತನ್ಮಾತ್ರೆ-ರೂಪತನ್ಮಾತ್ರೆ-ರಸತನ್ಮಾತ್ರೆ-ಗಂಧತನ್ಮಾತ್ರೆಗಳೆಂಬ ಐದು ತನ್ಮಾತ್ರೆಗಳನ್ನೂ, ಅವುಗಳಿಂದ ಉತ್ಪನ್ನಗಳಾದ ಪಂಚಭೂತಗಳನ್ನೂ, ಈ ಪಂಚಭೂತಗಳ ವ್ಯಾಪಾರಗಳನ್ನೂ ಹತ್ತೊಂಬತ್ತನೆಯ ಶ್ಲೋಕದಲ್ಲಿ ಹೇಳುತ್ತಾರೆ.

**ತನ್ಮಾತ್ರಂಹ್ಯವಶಿಷ್ಟಮೇವತು ಗುಣೈಶ್ಶಬ್ದಾದಿಕೈಕಾಧಿಕೈ**
**ರ್ಯುಕ್ತಂ ತದ್ರವಪೂರ್ವನಾಮ ಕಥಿತಂ ಭೂತಾಶ್ರಯಂ ಪಂಚಧಾ।**
**ಭೂತಾನ್ಯತ್ರ ಧರಾತು ಪಂಚಗುಣಯುಕ್ ತೋಯಾದಿ ಚೈಕೈಕಶೋ**
**ಹೀನಂ ತೈರ್ಧರಣಗ್ರಹಾಖ್ಯಪಚನವ್ಯೂಹಾವಕಾಶಾಃ ಕ್ರಿಯಾಃ ॥೧೯॥**

**ಟೀಕೆ**— ತನ್ಮಾತ್ರಂ—ತನ್ಮಾತ್ರೆಯೆಂಬುದು,—ಪಂಚಧಾ— ಶಬ್ದತನ್ಮಾತ್ರೆ, ಸ್ಪರ್ಶತನ್ಮಾತ್ರೆ, ರೂಪತನ್ಮಾತ್ರೆ, ರಸತನ್ಮಾತ್ರೆ, ಗಂಧತನ್ಮಾತ್ರೆ ಎಂದು ಐದು ಬಗೆಯಾದ ತತ್ತ್ವವಾಗಿರುವುದು. ತತ್— ಆ ತನ್ಮಾತ್ರಪಂಚಕವು, ಶಬ್ದಾದಿಕೈಕಾಧಿಕೈಃ—ಶಬ್ದ ಮೊದಲುಗೊಂಡು ಒಂದೊಂದು ಹೆಚ್ಚಿರುವ, ಗುಣೈಃ—ಗುಣಗಳೊಡನೆ, ಯುಕ್ತಂ— ಕೂಡಿ ಇರುವುದು. (ಪರಂತು)—ಆದರೆ, ಅವಶಿಷ್ಟಮೇವ— ಕ್ರಮವಾಗಿ ಒಂದೊಂದರಲ್ಲಿ ಒಂದೊಂದು ಗುಣವು ಹೆಚ್ಚಿದ್ದರೂ ಹೊರಗೆ ಹಾಗೆ ಕಾಣಿಸಿಕೊಳ್ಳದಂತೆ ಅದರ ಸ್ವರೂಪಮಾತ್ರವೇ ಅವಶಿಷ್ಟವಾಗಿರುವುದು. (ಕಿಂಚ) ತತ್—ಮತ್ತು ಅದು, ರವಪೂರ್ವನಾಮ—ಶಬ್ದ-ಸ್ಪರ್ಶ-ರೂಪ-ರಸ-ಗಂಧವೆಂಬ ಹೆಸರುಳ್ಳುದಾಗಿ, ಕಥಿತಂ—ಶಾಸ್ತ್ರಕಾರರಿಂದ ವ್ಯವಹರಿಸಲ್ಪಟ್ಟುದಾಗಿ, ಭೂತಾಶ್ರಯಂ—ಪಂಚಭೂತಗಳಿಗೆ ಆಧಾರವಾಗಿ ಇರುತ್ತದೆ. ಭೂತಾನಿ—ಆಕಾಶಾದಿ ಪಂಚಭೂತಗಳೂ ಇದರಂತೆಯೇ ಐದು ಗುಣಗಳುಳ್ಳವುಗಳಾಗಿರುವುವು. ಅತ್ರ—ಇವುಗಳಲ್ಲಿ, ಧರಾ—ಭೂಮಿಯು, ಪಂಚಗುಣಯುಕ್—ಶಬ್ದ-ಸ್ಪರ್ಶ-ರೂಪ-ರಸ-ಗಂಧಗಳೆಂಬ ಐದು ಗುಣಗಳೊಡನೆ ಕೂಡಿರುವುದು. ತೋಯಾದಿ—ಜಲ ಮೊದಲಾದ ಉಳಿದ ಭೂತವು, ತೈರೇಕೈಕಶೋಹೀನಂ—ಒಂದೊಂದು ಗುಣದಿಂದ ವಿರಹಿತವಾಗಿರುವುದು, ಧರಣಗ್ರಹಾಖ್ಯಪಚನವ್ಯೂಹಾವಕಾಶಾಃ ಕ್ರಿಯಾಃ—ಧರಿಸುವಿಕೆ, ಗ್ರಹಿಸುವಿಕೆ, ಪಾಕಮಾಡುವಿಕೆ, ಸೇರಿಸುವಿಕೆ, ಸ್ಥಳಕೊಡುವಿಕೆ ಇವುಗಳು ಕ್ರಮವಾಗಿ ಆ ಪಂಚಭೂತಗಳ ವ್ಯಾಪಾರಗಳಾಗಿರುವುವು.

**ಅವತರಣಿಕೆ**— ಹೀಗೆ ಶಿವತತ್ತ್ವ ಮೊದಲುಗೊಂಡು ಪೃಥಿವೀತತ್ತ್ವದವರೆಗೆ ಇರುವ ಮೂವತ್ತಾರು ತತ್ತ್ವಗಳ ಲಕ್ಷಣಾದಿಗಳನ್ನು ತೋರಿಸಿದ ಮೇಲೆ ಈ ತತ್ತ್ವಗಳಿಗೆ ಉಂಟಾಗುವ—ಶುದ್ಧತ್ವ-ಅಶುದ್ಧತ್ವ-ಶುದ್ಧಾಶುದ್ಧತ್ವಗಳೆಂಬ ಮೂರು ಬಗೆಯ ಒಳಭೇದಗಳನ್ನು ಇಪ್ಪತ್ತನೆಯ ಶ್ಲೋಕದಲ್ಲಿ ಹೇಳುತ್ತಾರೆ.

**ಊರ್ಧ್ವೋಽಧ್ವಾ ಸಕಲೋಽಪಿಬೋಧಕತಯಾ ಶುದ್ಧೋಽಧರೋ ಗ್ರಂಥಿತೋ**
**ನೋಹಾಧ್ಯಾದಶುಚಿರ್ವಿಪರ್ಯಯಹತೇಃ ಶುದ್ಧೋಽಪಿ ಪುಂಸ್ತ್ವಾತ್ಪರಃ।**

**ತತ್ತ್ವಾನ್ಯೇವ ಸಹಾಯಭೂತಭುವನೇಶಾನ್ಯೈರ್ಯುತಾನ್ಯಾತ್ಮನಾಂ**
**ತಿಷ್ಠಂತ್ಯಾವಿಲಯಾದಮೂನಿ ಚ ಬಹಿರ್ಭೋಗಪ್ರದಾಯೀನ್ಯಲಂ ॥೨೦॥**

**ಟೀಕೆ**— ಊರ್ಧ್ವಃ—ಮಾಯಾತತ್ತ್ವಕ್ಕಿಂತಲೂ ಮೇಲಿನದಾಗಿರುವ, ಅಧ್ವಾ-ಸಕಲೋಽಪಿ—ಶುದ್ಧವಿದ್ಯೆಮೊದಲುಗೊಂಡು ಶಿವತತ್ತ್ವದವರೆಗೆ ಇರುವ ತತ್ತ್ವಸಮೂಹವು ಸಂಪೂರ್ಣವೂ, ಬೋಧಕತಯಾ—ಅಲ್ಲಿರುವ ಚೇತನರಿಗೆ ಸರ್ವಜ್ಞತ್ವ-ಸರ್ವಕರ್ತೃತ್ವಗಳಿಗೆ ಉದ್ಬೋಧಕವಾದುದರಿಂದ, ಶುದ್ಧಃ—ಶುದ್ಧವೆನಿಸಿಕೊಳ್ಳುವುದು. ಗ್ರಂಥಿತಃ— ಮಾಯಾತತ್ತ್ವಕ್ಕಿಂತಲೂ, ಅಧರಃ—ಕೆಳಗಿನದಾದ, ಅಧ್ವಾ—ಕಲೆಮೊದಲುಗೊಂಡು ಪೃಥಿವಿಯವರೆಗೆ ಇರುವ ತತ್ತ್ವಸಮೂಹವು, ಮೋಹಾಢ್ಯಾತ್—ಮೋಹಪೂರ್ಣವಾದುದರಿಂದ (ಭಾವಪ್ರಧಾನನಿರ್ದೇಶ) ಅಶುಚಿಃ—ಅಶುದ್ಧವೆನಿಸಿಕೊಳ್ಳುವುದು. (ತತ್ರ)—ಅದರಲ್ಲಿ, ಪುಂಸ್ತ್ವಾತ್ಪರಃ—ಪುರುಷತತ್ತ್ವಕ್ಕಿಂತಲೂ ಮೇಲಿನದಾಗಿರುವ ರಾಗಮೊದಲುಗೊಂಡು ಕಾಲದವರೆಗೆ ಇರುವ ತತ್ತ್ವಸಮೂಹವು, ವಿಪರ್ಯಯಹತೇಃ—ಮೋಹವು ಸ್ವಲ್ಪಮಟ್ಟಿಗೆ ನೀಗಿರುವುದರಿಂದ, ಶುದ್ಧೋಽಪಿ—ಶುದ್ಧವೂ ಆಗುವುದು; (ಅಪಿಶಬ್ದದಿಂದ) ಅಶುದ್ಧವೂ ಆಗುವುದು. ಆದುದರಿಂದ ಇದು ಶುದ್ಧಾಶುದ್ಧವಾದ ಅಧ್ವವೆನಿಸಿಕೊಳ್ಳುವುದು. ಅಮೂನಿತತ್ತ್ವಾನಿ—ಪೃಥಿವಿಮೊದಲುಗೊಂಡು ಶಿವತತ್ತ್ವದ ವರೆಗೆ ಇರುವ ಈ ತತ್ತ್ವಗಳೆಲ್ಲವೂ, ಸಹಾಯಭೂತಭುವನೇಶಾನ್ಯೈಃ—ಭೋಗಸಾಧನಭೂತರಾದ, ಆ ಆ ಭುವನಾಧಿಪತಿಗಳೊಡನೆ, ಯುತಾನ್ಯೇವ—ಕೂಡಿರುವುವುಗಳಾಗಿಯೇ, ಆತ್ಮನಾಂ—ವಿಜ್ಞಾನಕಲರೇ ಮೊದಲಾದ ಚೇತನರಿಗೆ, ಅಲಂ—ಹೆಚ್ಚಾಗಿ, ಬಹಿರ್ಭೋಗಪ್ರದಾಯೀನಿ—ಬಾಹ್ಯಭೋಗಗಳನ್ನು ಕೊಡುತ್ತಿರುವಂಥವುಗಳಾಗಿ, (ಭವಂತಿ) —ಆಗುತ್ತವೆ. (ಕಿಂಚ) —ಮತ್ತು (ಇವುಗಳು) ಆವಿಲಯಾತ್—ಮಹಾಪ್ರಳಯದವರೆಗೂ, ತಿಷ್ಠಂತಿ—ವಸ್ತುಗಳೆನಿಸಿಕೊಂಡು ನಿಲ್ಲುವುವು.

**ಅವತರಣಿಕೆ**— ತತ್ತ್ವಗಳ ಯೋಜನಪ್ರಮಾಣವನ್ನು ಇಪ್ಪತ್ತೊಂದನೆಯ ಶ್ಲೋಕದಲ್ಲಿ ತೋರಿಸುತ್ತಾರೆ. ಹೇಗೆಂದರೆ—ಪೃಥಿವೀತತ್ತ್ವವು ನೂರು ಕೋಟಿಯೋಜನ ಪರಿಮಾಣವುಳ್ಳುದಾಗಿರುವುದು. ಅಲ್ಲಿಂದ ಮುಂದಕ್ಕೆ ಜಲತತ್ತ್ವ, ಅಗ್ನಿತತ್ತ್ವ, ವಾಯುತತ್ತ್ವ, ಆಕಾಶತತ್ತ್ವ, ಅಹಂಕಾರತತ್ತ್ವ, ಬುದ್ಧಿತತ್ತ್ವ, ಗುಣತತ್ತ್ವ ಈ ಏಳು ತತ್ತ್ವಗಳೂ ಉತ್ತರೋತ್ತರವಾಗಿ ದಶಗುಣಿತವಾದ ಪರಿಮಾಣವುಳ್ಳವುಗಳಾಗಿರುವುವು. ಎಂದರೆ ಪೃಥಿವೀತತ್ತ್ವದ ಪರಿಮಾಣವಾದ ನೂರುಕೋಟಿಯೋಜನವನ್ನು ಹತ್ತರಿಂದ ಗುಣಿಸಿದರೆ ಲಬ್ಧವಾಗುವ ಸಾವಿರಕೋಟಿ

ಯೋಜನವು ಜಲತತ್ತ್ವದ ಪರಿಮಾಣವಾಗುವುದು. ಅದು ಪೃಥಿವೀತತ್ತ್ವದ ಪರಿಮಾಣಕ್ಕೆ ದಶಕಸ್ಥಾನವಾಗಿರುವುದು. ಅದನ್ನು ಹತ್ತರಿಂದ ಗುಣಿಸಿದರೆ ಲಬ್ಧವಾಗುವ ಹತ್ತುಸಾವಿರಕೋಟಿ ಯೋಜನವು ಅಗ್ನಿತತ್ತ್ವದ ಪರಿಮಾಣವಾಗುವುದು. ಅದು ಶತಕಸ್ಥಾನವಾಗಿರುವುದು. ಅದನ್ನು ಹತ್ತರಿಂದ ಗುಣಿಸಿದರೆ ಲಬ್ಧವಾಗುವ ನೂರುಸಾವಿರಕೋಟಿ ಯೋಜನವು ಅಥವಾ ಲಕ್ಷಕೋಟಿ ಯೋಜನವು ವಾಯುತತ್ತ್ವದ ಪರಿಮಾಣವಾಗುವುದು. ಅದು ಸಹಸ್ರಸ್ಥಾನವಾಗಿರುವುದು. ಅದನ್ನು ಹತ್ತರಿಂದ ಗುಣಿಸಿದರೆ ಲಬ್ಧವಾಗುವ ಹತ್ತುನೂರುಸಾವಿರಕೋಟಿ ಯೋಜನವು ಅಥವಾ ಹತ್ತುಲಕ್ಷಕೋಟಿ ಯೋಜನವು ಆಕಾಶತತ್ತ್ವದ ಪರಿಮಾಣವಾಗುವುದು. ಅದು ದಶಸಹಸ್ರಸ್ಥಾನವಾಗಿರುವುದು. ಅದನ್ನು ಹತ್ತರಿಂದ ಗುಣಿಸಿದರೆ ಲಬ್ಧವಾಗುವ ಕೋಟಿ ಕೋಟಿ ಯೋಜನವು ಅಹಂಕಾರತತ್ತ್ವದ ಪರಿಮಾಣವಾಗುವುದು. ಅದು ಲಕ್ಷಸ್ಥಾನವಾಗಿರುವುದು. ಅದನ್ನು ಹತ್ತರಿಂದ ಗುಣಿಸಿದರೆ ಲಬ್ಧವಾಗುವ ಹತ್ತುಕೋಟಿಕೋಟಿ ಯೋಜನವು ಬುದ್ಧಿತತ್ತ್ವದ ಪರಿಮಾಣವಾಗುವುದು. ಅದು ದಶಲಕ್ಷಸ್ಥಾನವಾಗಿರುವುದು. ಅದನ್ನು ಹತ್ತರಿಂದ ಗುಣಿಸಿದರೆ ಲಬ್ಧವಾಗುವ ನೂರುಕೋಟಿಕೋಟಿ ಯೋಜನವು ಗುಣತತ್ತ್ವದ ಪರಿಮಾಣವಾಗುವುದು. ಅದು ಕೋಟಿಸ್ಥಾನವಾಗಿರುವುದು. ಹೀಗೆ ಪೃಥಿವೀತತ್ತ್ವಮೊದಲುಗೊಂಡು ಗುಣತತ್ತ್ವದವರೆಗೆ ಆಗುವ ಎಂಟು ತತ್ತ್ವಗಳೊಳಗೆ ಪೃಥಿವೀತತ್ತ್ವದ ಪರಿಮಾಣವಾದ ನೂರುಕೋಟಿಯೋಜನವನ್ನು ಏಕಸ್ಥಾನದಲ್ಲಿ ಇಟ್ಟು ಉತ್ತರೋತ್ತರವಾಗಿ ದಶಗುಣಿತಮಾಡುತ್ತ ಹೋದರೆ ಲಬ್ಧಗಳಾಗುವ ಆ ಆ ಸಂಖ್ಯಾವಿಶೇಷಗಳೇ ಆ ಆ ತತ್ತ್ವಗಳ ಪರಿಮಾಣಗಳಾಗಿರುವುವೆಂದು ತಿಳಿಯಬೇಕು. ಗುಣತತ್ತ್ವಕ್ಕಿಂತಲೂ ನೂರರಷ್ಟು ಹೆಚ್ಚಾದ ಪರಿಮಾಣವು ಪ್ರಕೃತಿತತ್ತ್ವದ ಪರಿಮಾಣವಾಗುವುದು. ಅದಕ್ಕಿಂತಲೂ ಶತಗುಣಿತವಾದ ಪರಿಮಾಣವು ರಾಗತತ್ತ್ವದ ಪರಿಮಾಣವಾಗುವುದು. ಅದಕ್ಕಿಂತಲೂ ಶತಗುಣಿತವಾದ ಪರಿಮಾಣವು ನಿಯತಿತತ್ತ್ವದ ಪರಿಮಾಣವಾಗುವುದು. ಅದಕ್ಕಿಂತಲೂ ಶತಗುಣಿತವಾದ ಪರಿಮಾಣವು ವಿದ್ಯಾತತ್ತ್ವದ ಪರಿಮಾಣವಾಗುವುದು. ಅದಕ್ಕಿಂತಲೂ ಶತಗುಣಿತವಾದ ಪರಿಮಾಣವು ಕಲಾತತ್ತ್ವದ ಪರಿಮಾಣವಾಗುವುದು. ಅದಕ್ಕಿಂತಲೂ ಶತಗುಣಿತವಾದ ಪರಿಮಾಣವು ಕಾಲತತ್ತ್ವದ ಪರಿಮಾಣವಾಗುವುದು. ಅದಕ್ಕಿಂತಲೂ ಶತಗುಣಿತವಾದ ಪರಿಮಾಣವು ಮಾಯಾತತ್ತ್ವದ ಪರಿಮಾಣವಾಗುವುದು. ಅನಂತರದಲ್ಲಿ ಮಾಯಾತತ್ತ್ವದ ಪರಿಮಾಣಕ್ಕಿಂತಲೂ ಸಹಸ್ರಗು

ಣಿತವಾದ ಪರಿಮಾಣವು ಶುದ್ಧವಿದ್ಯಾತತ್ತ್ವದ ಪರಿಮಾಣವಾಗುವುದು. ಅದಕ್ಕಿಂತಲೂ ಸಹಸ್ರಗುಣಿತವಾದ ಪರಿಮಾಣವು ಈಶ್ವರತತ್ತ್ವದ ಪರಿಮಾಣವಾಗುವುದು. ಅದಕ್ಕಿಂತಲೂ ಸಹಸ್ರಗುಣಿತವಾದ ಪರಿಮಾಣವು ಸದಾಶಿವತತ್ತ್ವದ ಪರಿಮಾಣವಾಗುವುದು. ಸದಾಶಿವತತ್ತ್ವದ ಪರಿಮಾಣಕ್ಕಿಂತಲೂ ಲಕ್ಷಗುಣಿತವಾದ ಪರಿಮಾಣವು ಶಕ್ತಿತತ್ತ್ವದ ಪರಿಮಾಣವಾಗುವುದು. ಪರಶಿವತತ್ತ್ವವು ಎಲ್ಲೆಯಿಲ್ಲದ ಪರಿಮಾಣವುಳ್ಳದಾಗಿರುವುದು.

**ಕ್ಷ್ಮಾತತ್ತ್ವಂ ಶತಕೋಟಿಯೋಜನಮಪಃಪ್ರಾರಭ್ಯಗೌಣಾಂತಕಂ**
**ಪಂಕ್ತ್ಯಾ ತದ್ಗುಣನಾತ್ತಥಾ ಪ್ರಕೃತಿತೋ ಮಾಯಾವಸಾನಂ ಶತಾತ್।**
**ಸಾಹಸ್ರಾಚ್ಚ ಸದಾಶಿವಾವಧಿ ತತಶ್ಶಕ್ತ್ಯಂತಕಂ ಲಕ್ಷತಃ**
**ಸ್ಯಾದೂರ್ಧ್ವಂ ಸ ಶಿವೋಽಪ್ಯಮೇಯವಿಭವೋ ಬಿಂದೋರಧಿಷ್ಠಾಯಕಃ ॥೨೧॥**

**ಟೀಕೆ**== ಕ್ಷ್ಮಾತತ್ತ್ವಂ—ಪೃಥಿವೀತತ್ತ್ವವು, ಶತಕೋಟಿಯೋಜನಂ—ವಿಸ್ತಾರದಲ್ಲಿ ನೂರುಕೋಟಿ ಯೋಜನವುಳ್ಳದಾಗಿ ಸ್ಯಾತ್—ಆಗುವುದು. ಅಪಃ-ಪ್ರಾರಭ್ಯ-ಅದರಮೇಲೆ ಜಲತತ್ತ್ವವನ್ನು ಮೊದಲು ಮಾಡಿಕೊಂಡು, ಗೌಣಾಂತಕಂ—ಗುಣತತ್ತ್ವದವರೆಗೆ, ಪಂಕ್ತ್ಯಾ-ತದ್ಗುಣನಾತ್—ಆಪರಿಮಾಣವನ್ನು ದಶಗುಣಿತಮಾಡುವುದರಿಂದ ಲಬ್ಧವಾಗುವ ಪರಿಮಾಣವು, (ತತ್ತತ್ಪ್ರಮಾಣಂಭವತಿ) ಆ ಆ ತತ್ತ್ವಗಳ ಪ್ರಮಾಣವಾಗುವುದು. ತಥಾ—ಹಾಗೆಯೇ, ಪ್ರಕೃತಿತಃ—ಅದರಮೇಲೆ ಪ್ರಕೃತಿತತ್ತ್ವವನ್ನು ಮೊದಲುಮಾಡಿಕೊಂಡು, ಮಾಯಾವಸಾನಂ—ಮಾಯಾತತ್ತ್ವದವರೆಗೆ, ಶತಾತ್—ಆ ಪರಿಮಾಣವನ್ನು ಶತಗುಣಿತಮಾಡುವುದರಿಂದ ಲಬ್ಧವಾಗುವ ಪರಿಮಾಣವು, (ತತ್ತತ್ಪ್ರಮಾಣಂಸ್ಯಾತ್)—ಆ ಆ ತತ್ತ್ವಗಳ ಪ್ರಮಾಣವಾಗುವುದು. ತತಃ—ಆ ಮಾಯಾತತ್ತ್ವಕ್ಕೆ ಮೇಲೆ, ಸದಾಶಿವಾವಧಿ—ಸದಾಶಿವತತ್ತ್ವದವರೆಗೆ, ಸಾಹಸ್ರಾತ್—ಆ ಪರಿಮಾಣವನ್ನು ಸಹಸ್ರಗುಣಿತಮಾಡುವುದರಿಂದ ಲಬ್ಧವಾಗುವ ಪರಿಮಾಣವು, (ತತ್ತತ್ಪ್ರಮಾಣಂ) ಸ್ಯಾತ್—ಆ ಆ ತತ್ತ್ವಗಳ ಪರಿಮಾಣವಾಗುವುದು. ತತಃ—ಅನಂತರದಲ್ಲಿ ಸದಾಶಿವತತ್ತ್ವಕ್ಕಿಂತಲೂ ಮೇಲೆ, ಶಕ್ತ್ಯಂತಕಂ—ಶಕ್ತಿತತ್ತ್ವದವರೆಗೆ, ಲಕ್ಷತಃ ಸದಾಶಿವ ಪರಿಮಾಣವನ್ನು ಲಕ್ಷಗುಣಿತಮಾಡುವುದರಿಂದ ಲಬ್ಧವಾಗುವ ಪರಿಮಾಣವು, (ತತ್ತತ್ಪ್ರಮಾಣಂಸ್ಯಾತ್)—ಆ ಆ

ತತ್ತ್ವಗಳ ಪರಿಮಾಣವಾಗುವುದು. ಊರ್ಧ್ವಂ—ಶಕ್ತಿತತ್ತ್ವಕ್ಕಿಂತಲೂ ಮೇಲೆ, ಬಿಂದೋಃ—ಬಿಂದುಶಕ್ತಿಗೂ, ಅಧಿಷ್ಠಾಯಕಃ—ಅಧಿಷ್ಠಾನಭೂತನಾದ, ಸ ಶಿವಃ—ಪ್ರಸಿದ್ಧನಾದ ಆ ಪರಶಿವನು, ಅಮೇಯವಿಭವಃ—ಎಲ್ಲೆಯನ್ನಿಟ್ಟು ನಿರ್ದೇಶಿಸಲು ಶಕ್ಯವಲ್ಲದ ಐಶ್ವರ್ಯವುಳ್ಳವನಾಗಿ, ಸ್ಯಾತ್—ಆಗುವನು.

**ಅವತರಣಿಕೆ**— ಹೀಗೆ ಪರಶಿವನು ಪ್ರತಿಯೊಬ್ಬ ಆತ್ಮನಿಗೂ ಪೂರ್ವೋಕ್ತತತ್ತ್ವಗಳಿಂದ ಸೂಕ್ಷ್ಮಸ್ಥೂಲಶರೀರಗಳನ್ನು ಮಾಯಾಬಲದಿಂದ ಉಂಟು ಮಾಡಿ ಸುಖದುಃಖಾನುಭವರೂಪವಾದ ಕರ್ಮಫಲಭೋಗದಲ್ಲಿ ಆತ್ಮತತ್ತ್ವವನ್ನು ಪ್ರೇರಿಸುವನೆಂದು ಇಪ್ಪತ್ತೆರಡನೆಯ ಶ್ಲೋಕದಲ್ಲಿ ಹೇಳುತ್ತಾರೆ.

**ಸ್ರೋತಾಂಸಿ ಪ್ರತಿಪುಂಸಿ ಸೂಕ್ಷ್ಮತನುಗೈಸ್ತತ್ತ್ವೈರ್ಯದಾಽನೇಕಧಾ**
**ಮಾಯಾಜಾನ್ಯಖಿಲಾತ್ಮಭೋಗ್ಯ ಭುವನಾದ್ಯಾಧಾರತತ್ತ್ವೈಸ್ತದಾ ।**
**ಸ್ಥಿತ್ಯೈತಾಂಶ್ಚ ನರಾನ್ನಿಯೋಜಯತಿ ತೈರ್ನೋಽಲಕ್ಷಿತೋಽಧಿಷ್ಠಿತೈಃ**
**ಸ್ವಾರ್ಥಾಪ್ತ್ಯೈ ತನುದೇವಭಾವಭುವನೈರ್ಭೋಗೇ ಶಿವಸ್ಸಾಧನೈಃ ॥೨೨॥**

**ಟೀಕೆ** —ಪ್ರತಿಪುಂಸಿ—ಪ್ರತಿಯೊಬ್ಬ ಚೇತನನಲ್ಲಿಯೂ ಸೂಕ್ಷ್ಮತನುಗೈಃ—ಸೂಕ್ಷ್ಮದೇಹವನ್ನು ಆಶ್ರಯಿಸಿಕೊಂಡಿರುವ ಕಲೆ ಮೊದಲುಗೊಂಡು ಪೃಥಿವಿಯ ವರೆಗೆ ಇರುವ ಸೂಕ್ಷ್ಮತತ್ತ್ವಗಳಿಂದಲೂ, ಅಖಿಲಾತ್ಮ ಭೋಗ್ಯ ಭುವನಾದ್ಯಾಧಾರ ತತ್ತ್ವೈಃ—ಸಮಸ್ತ ಚೇತನರಿಗೂ, ಭೋಗ್ಯಗಳಾಗಿರುವ ಲೋಕಗಳಿಗೂ, ಲೋಕದಲ್ಲಿ ಉಂಟಾಗಿರುವ ಶರೀರಗಳಿಗೂ ಆಧಾರಗಳಾಗಿರುವ ಕಲೆ ಮೊದಲುಗೊಂಡು ಪೃಥಿವಿಯ ವರೆಗೆ ಇರುವ ಸ್ಥೂಲತತ್ತ್ವಗಳಿಂದಲೂ, ಯದಾ—ಯಾವಾಗ, ಅನೇಕಧಾ—ಅನೇಕ ಪ್ರಕಾರವಾಗಿ ಸ್ರೋತಾಂಸಿ—ಚೇತನರ ಗಮನಗಳಿಗೆ ಸಾಧನಗಳಾದ ಸೂಕ್ಷ್ಮಸ್ಥೂಲ ಶರೀರಗಳು ಭುವನಾದಿ ವಾಸಸ್ಥಾನಗಳು ಮಾಯಾಜಾನಿ—ಮಾಯೆಯಿಂದ ಉಂಟುಮಾಡಲ್ಪಡುವುವೋ, ತದಾ—ಆವಾಗಲೇ, ಶಿವಃ—ಪರಶಿವನು ಸ್ಥಿತ್ಯೈ—ಸ್ಥಿತಿಯೆಂಬ ರಕ್ಷಣಕಾರ್ಯವನ್ನು ನಡೆಯಿಸುವುದಕ್ಕೋಸ್ಕರ, ಅಧಿಷ್ಠಿತೈಃ—ತನ್ನಿಂದ ಆವರಿಸಲ್ಪಟ್ಟ, ತೈಃ—ಆ ಚೇತನರಿಂದ ನೋಽಲಕ್ಷಿತಸ್ಸನ್—ಕಾಣಲ್ಪಡದೆ ಇರುವವನಾಗಿ, ತಾನ್ ನರಾನ್—ಮಲಬದ್ಧರಾದ ಆ ಚೇತನರನ್ನು, ಸ್ವಾರ್ಥಾಪ್ತ್ಯೈ—ಸ್ವಪ್ರಯೋಜನವಾದ ಕರ್ಮಫಲವು ಅವರಿಗೆ ಸಿದ್ಧಿಸುವುದಕ್ಕೋಸ್ಕರ, ಸಾಧನೈಃ—ಭೋಗಸ್ಥಾನಗಳಾದ ತನು-ದೇವ-ಭಾವ-ಭುವನೈಃ—ಶರೀರಗಳೇನು, ಇಂದ್ರಿಯಗಳೇನು, ಧರ್ಮ ಮೊದಲಾದ ಭಾವಗಳೇನು,

ಕಾಲಾಗ್ನ್ಯಾದಿ ಭುವನಗಳೇನು ಇವುಗಳಿಂದ (ಇವುಗಳ ಮೂಲಕ) ಭೋಗೇ— ಸುಖದುಃಖಾನುಭವ ರೂಪವಾದ ಭೋಗದಲ್ಲಿ, ನಿಯೋಜಯತಿ—ಪ್ರೇರಿಸುತ್ತಾನೆ.

**ಅವತರಣಿಕೆ—** ಇದರ ಮೇಲೆ ಪರಶಿವನ ಸ್ಥಿತಿವ್ಯಾಪಾರವನ್ನೂ ಸಂಹಾರವ್ಯಾಪಾರವನ್ನೂ ಇಪ್ಪತ್ತುಮೂರನೆಯ ಶ್ಲೋಕದಲ್ಲಿ ತೋರಿಸುತ್ತಾರೆ.

**ಪಾಶಾನುಗ್ರಹಣಾದ್ಯಥಾನುಗುಣತೋ ಭೋಗ್ಯಸ್ಯ ಸಂಭೋಜನಂ**
**ಪುಂಸಾಂ ತದ್ಬಲದಾನತೋ ಭಗವತಃ ಕೃತ್ಯಂ ಚ ಸಂರಕ್ಷಣಂ ।**
**ಲೀಯಂತೇ ಪರಿಣಾಮತಸ್ತು ಸಮಯೇ ತತ್ತ್ವಾನಿ ವೈಲೋಮ್ಯತೋ**
**ಮಾಯಾಯಾಂ ಪರತೋಽಪಿ ತಾನಿ ಚ ಮಹಾಮಾಯಾತ್ಮನೀಶಾ**
**ಜ್ಞಯಾ ॥೨೩॥**

**ಟೀಕೆ—** ಪಾಶಾನುಗ್ರಹಣಾತ್—ಮಲಮುಂತಾದ ಪಾಶಗಳನ್ನು ಆ ಆ ಚೇತನರಿಗೆ ಪ್ರತ್ಯೇಕವಾಗಿ ಸೇರಿಸಿ ಅನುಗ್ರಹಿಸೋಣದರಿಂದ, ಯಥಾನುಗುಣತಃ- ಆ ಆ ಪಾಶಗಳಿಗೆ ಅನುಸಾರವಾಗಿ, ಪುಂಸಾಂ—ಚೇತನರಿಗೆ, ತದ್ಬಲದಾನತಃ— ಆ ಭೋಗದಲ್ಲಿ ಬಲವನ್ನು ಕೊಡುವುದರಿಂದ, ಭೋಗ್ಯಸ್ಯ—ಭುಜಿಸಲ್ಪಡಬೇಕಾದ ವಸ್ತುವಿನ, ಸಂಭೋಜನಂ—ಚನ್ನಾಗಿ ಅನುಭವಪಡಿಸುವಿಕೆಯೆಂಬ, ಭಗವತಃ—ಶಿವನ, ಕೃತ್ಯಂ—ವ್ಯಾಪಾರವು, ಸಂರಕ್ಷಣಂ—ರಕ್ಷಿಸುವಿಕೆಯಾಗುವುದು. (ಸ್ಥಿತಿವ್ಯಾಪಾರವಾಗುವುದು) ಸಮಯೇ—ಅವಾಂತರಸಂಹಾರ, ಮಹಾಸಂಹಾರ ಎಂಬ ಎರಡು ಬಗೆಯಾದ ಸಂಹಾರಕಾಲದಲ್ಲಿ, ತತ್ತ್ವಾನಿ—ಕಲೆಮೊದಲಾದ ತತ್ತ್ವಗಳು, ವೈಲೋಮ್ಯತಃ—ಸೃಷ್ಟಿಕ್ರಮಕ್ಕೆ ವಿಪರೀತವಾದ ಕ್ರಮದಿಂದ (ಪೃಥಿವ್ಯಾದಿಕ್ರಮದಿಂದ) ಪರಿಣಾಮತಃ—ತಮ್ಮ ತಮ್ಮ ಉಪಾದಾನ ಕಾರಣ ರೂಪವಾಗಿ ಪರಿಣಮಿಸುವುದರಿಂದ ಮಾಯಾಯಾಂ—ಮಾಯಾತತ್ತ್ವದಲ್ಲಿ ಲೀಯಂತೇ—ಲಯಿಸುತ್ತವೆ. ಪರತೋಽಪಿ—ಮಾಯೆಗಿಂತಲೂ ಮೇಲೆಯೂ ತಾನಿಚ—ಶುದ್ಧವಿದ್ಯೆ ಮೊದಲಾದ ಶುದ್ಧತತ್ತ್ವಗಳೂ ಮಹಾಮಾಯಾತ್ಮನಿ— ಕ್ರಮವಾಗಿ ಪರಮೋಪಾದಾನವಾದ ಬಿಂದುತತ್ತ್ವದಲ್ಲಿ ಈಶಾಜ್ಞಯಾ—ಶಿವನ ಸಂಕಲ್ಪರೂಪವಾದ ಅಪ್ಪಣೆಯಿಂದ ಲೀಯಂತೇ—ಲಯಿಸುತ್ತವೆ (ಇದು ಸಂಹಾರವ್ಯಾಪಾರವಾಗುವುದು.).

**ಅವತರಣಿಕೆ—** ಪ್ರಕೃತಿತತ್ತ್ವದ ವರೆಗೂ ಅವಾಂತರಸಂಹಾರಕಾಲದ ಪರಿಮಾಣವನ್ನೂ, ಮಾಯಾತತ್ತ್ವದವರೆಗೂ ಮಹಾಸಂಹಾರದ ಕಾಲಪರಿಮಾಣವನ್ನೂ ಇಪ್ಪತ್ತುನಾಲ್ಕನೆಯ ಶ್ಲೋಕದಲ್ಲಿ ನಿಷ್ಕರ್ಷಿಸಿ ತೋರಿಸುತ್ತಾರೆ.

**ದೈವೇಷ್ವರ್ಕಸಹಸ್ರವರ್ಷಕಯುಗಾಬ್ಧೀನಾಂ ಸಹಸ್ರೇಷ್ವಧೋ
ಯಾತೇಷ್ವೇವ ಲಯಸ್ತ್ರಿಲೋಕವಿಷಯಸ್ತಸ್ಯೈವ ಸರ್ಗೇಷ್ವಪಿ ।
ಪ್ರಾಪ್ತೇಷ್ವತ್ರ ಪರಾರ್ಧತಾಂ ಚ ವಿಲಯೋಽವ್ಯಕ್ತಾಂತಮಸ್ಮಾತ್ಪುನಃ
ಸರ್ಗೇಷ್ವಸ್ಯ ಗುಣಾದಿಕಸ್ಯಚ ತಥಾ ಗ್ರಂಥೌ ಚ ಬಿಂದೌ ಲಯಃ ॥೨೪॥**

**ಟೀಕೆ**— ದೈವೇಷು—ದೇವಮಾನದಲ್ಲಿ ಏರ್ಪಡುವ, ಅರ್ಕಸಹಸ್ರವರ್ಷಕಯುಗಾಬ್ಧೀನಾಂ—ಹನ್ನೆರಡುಸಾವಿರವರ್ಷ ಪ್ರಮಾಣವುಳ್ಳ ಒಂದು ದೇವಯುಗವೆನಿಸಿಕೊಳ್ಳುವ ಕೃತ, ತ್ರೇತಾ, ದ್ವಾಪರ, ಕಲಿಗಳೆಂಬ ನಾಲ್ಕು ಯುಗಗಳ, ಸಹಸ್ರೇಷು—ಸಾವಿರಗಳು, ಅಧೋಯಾತೇಷು ಸತ್ಸು—ಸುತ್ತಿ ಸುತ್ತಿ ಕಳೆದುಹೋಗಲು ತ್ರಿಲೋಕವಿಷಯಃ—ಮೂರುಲೋಕಗಳ ವಿಷಯವಾದ, ಲಯಃ (ಭವೇತ್)—ಸಂಹಾರವುಂಟಾಗುವುದು. (ಇದು ದೈನಂದಿನಪ್ರಳಯವೆನಿಸಿಕೊಳ್ಳುವುದು) ತಸ್ಯ—ಆ ಲೋಕತ್ರಯದ, ಸರ್ಗೇಷ್ವಪಿ—ಪುನಸ್ಸೃಷ್ಟಿವಿಷಯದಲ್ಲಿಯೂ, ಏವಮೇವಸ್ಯಾತ್—ಈ ಕಾಲಪರಿಮಾಣವೇ ಇರುವುದು. (ಇದು ಚತುರ್ಮುಖಬ್ರಹ್ಮನಿಗೆ ಒಂದು ದಿನಪರಿಮಾಣವಾಗಿರುವುದು.) ಅತ್ರ—ಇಂಥ ದಿನಗಳು ಮುನ್ನೂರುಅರವತ್ತು ಕೂಡಿದುದರಿಂದ ಏರ್ಪಡುವ ವರ್ಷಗಳು, ಪರಾರ್ಧತಾಂ—ಪರಾರ್ಧವೆಂಬ ಸಂಖ್ಯಾವಿಶೇಷವನ್ನು, ಪ್ರಾಪ್ತೇಷು ಸತ್ಸು—ಹೊಂದುತ್ತಿರಲು, ಅವ್ಯಕ್ತಾಂತಂ—ಆಗ ಪ್ರಕೃತಿತತ್ತ್ವದವರೆಗೆ, ವಿಲಯಃ (ಸ್ಯಾತ್)—ಸಂಹಾರವು ಆಗುವುದು. (ಇದು ಅವಾಂತರಪ್ರಳಯವೆಂದೂ ಪ್ರಾಕೃತಪ್ರಳಯವೆಂದೂ ವ್ಯವಹರಿಸಲ್ಪಡುವುದು) ಅಸ್ಮಾತ್—ಉಪಾದಾನಕಾರಣವೆನಿಸಿಕೊಂಡಿರುವ ಈ ಪ್ರಕೃತಿಯ ದೆಸೆಯಿಂದ, ಪುನಃ—ತಿರುಗಿಯೂ, ಅಸ್ಯ ಗುಣಾದಿಕಸ್ಯ—ಈ ಗುಣಾದಿತತ್ತ್ವಸಮೂಹದ, ಸರ್ಗೇಷು ಚ—ಸೃಷ್ಟಿವಿಷಯದಲ್ಲಿಯೂ, ತಥಾ ಸ್ಯಾತ್—ಹಾಗೆಯೇ ಆಗುವುದು. (ಪರಾರ್ಧಕಾಲಪರಿಮಾಣವಾಗುವುದು) (ತಥಾ ಚೈವ)—ಹೀಗೆ ಪ್ರಕೃತ್ಯಾದಿತತ್ತ್ವಗಳ ಸೃಷ್ಟಿಸಂಹಾರಕಾಲಪರಿಮಾಣವಾದ ಎರಡು ಪರಾರ್ಧಕಾಲವೂ ಒಂದು ಪರಾರ್ಧಪರ್ಯಂತವಾದಮೇಲೆ, ಗ್ರಂಥೌ—ಮಾಯಾತತ್ತ್ವದಲ್ಲಿಯೂ, ಬಿಂದೌ ಚ—ಸರ್ವೋಪಾದಾನಕಾರಣವಾಗಿರುವ ಮಹಾಮಾಯೆಯಲ್ಲಿಯೂ, ಲಯಃ (ಸ್ಯಾತ್)—ಸಕಲತತ್ತ್ವಗಳಿಗೂ ಸಂಹಾರವುಂಟಾಗುವುದು. (ಇದು ಮಹಾಸಂಹಾರವೆನಿಸಿಕೊಳ್ಳುವುದು.)

**ಅವತರಣಿಕೆ**— ಇದಕ್ಕಾಗಿ ಪರಾರ್ಧವೆಂಬ ಸಂಖ್ಯಾವಿಶೇಷವನ್ನು ತಿಳಿಯಪಡಿಸುವುದಕ್ಕೋಸ್ಕರ ಏಕಸ್ಥಾನ ಮೊದಲುಗೊಂಡು ಉತ್ತರೋತ್ತರ ದಶ

ಗುಣಿತವಾಗಿರುವ ಸಂಖ್ಯಾಸ್ಥಾನವಿಶೇಷಗಳನ್ನು ಇಪ್ಪತ್ತೈದನೆಯ ಶ್ಲೋಕದಲ್ಲಿ ನಿರ್ದೇಶಮಾಡುತ್ತಾರೆ.—

**ಏಕಂ ಪಂಕ್ತಿಶತಂ ಸಹಸ್ರಮಯುತಂ ಲಕ್ಷಂ ಪ್ರಪೂರ್ವಾಯುತಂ**
**ಕೋಟಿಶ್ಚಾರ್ಬುದಕಂ ಚ ಪದ್ಮಕಮಥೋ ಖರ್ವಂ ನಿಖರ್ವಂ ತಥಾ ।**
**ಬೃಂದಂ ಚೈವ ಮಹಾಸರೋಜಮಪರಶ್ಶಂಖಸ್ಸಮುದ್ರೋಽಂತಿಮೋ**
**ಮಧ್ಯಂ ಚೈವ ಪರಾರ್ಧಸಂಜ್ಞಿಕಮಿಮಾಂ ಸಂಖ್ಯಾಂ ವಿದುಃ**
**ಪಂಡಿತಾಃ ॥೨೫॥**

**ಟೀಕೆ**— ಏಕಂ—೧ನೆಯದು ಏಕಸ್ಥಾನವು ೧ ಪಂಕ್ತಿ—೨ನೆಯದು ದಶಕಸ್ಥಾನವು ೧೦, ಶತಂ—೩ನೆಯದು ಶತಕಸ್ಥಾನವು ೧೦೦, ಸಹಸ್ರಂ—೪ನೆಯದು ಸಹಸ್ರಸ್ಥಾನವು ೧೦೦೦, ಅಯುತಂ—೫ನೆಯದು ದಶಸಹಸ್ರಸ್ಥಾನವು ೧೦೦೦೦, ಲಕ್ಷಂ—೬ನೆಯದು ಲಕ್ಷಸ್ಥಾನವು ೧೦೦೦೦೦, ಪ್ರಪೂರ್ವಾಯುತಂ (ಪ್ರಯುತಂ) ೭ನೆಯದು ದಶಲಕ್ಷಸ್ಥಾನವು ೧೦೦೦೦೦೦, ಕೋಟಿಃ—೮ನೆಯದು ಕೋಟಿಸ್ಥಾನವು ೧೦೦೦೦೦೦೦, ಅರ್ಬುದಕಂ (ಅರ್ಬುದಂ) ೯ನೆಯದು ದಶಕೋಟಿಸ್ಥಾನವು ೧೦೦೦೦೦೦೦೦, ಪದ್ಮಕಂ (ಪದ್ಮಂ) ೧೦ನೆಯದು ಶತಕೋಟಿಸ್ಥಾನವು ೧೦೦೦೦೦೦೦೦೦, ಅಥೋ ಖರ್ವಂ_೧೧ ನೆಯದು ಖರ್ವಸ್ಥಾನವು ೧೦೦೦೦೦೦೦೦೦೦ ತಥಾ ನಿಖರ್ವಂ—೧೨ನೆಯದು ನಿಖರ್ವಸ್ಥಾನವು ೧೦೦೦೦೦೦೦೦೦೦೦, ಬೃಂದಂ—೧೩ನೆಯದು ಬೃಂದಸ್ಥಾನವು ೧೦೦೦೦೦೦೦೦೦೦೦೦, ಮಹಾಸರೋಜಂ—೧೪ನೆಯದು ಮಹಾಪದ್ಮಸ್ಥಾನವು ೧೦೦೦೦೦೦೦೦೦೦೦೦೦, ಶಂಖಂ—೧೫ನೆಯದು ಶಂಖಸ್ಥಾನವು ೧೦೦೦೦೦೦೦೦೦೦೦೦೦೦, ಅಪರಃ ಶಂಖಃ (ಮಹಾಶಂಖಃ) ೧೬ನೆಯದು ಮಹಾಶಂಖಸ್ಥಾನವು ೧೦೦೦೦೦೦೦೦೦೦೦೦೦೦೦, ಸಮುದ್ರಃ—೧೭ ನೆಯದು ಸಮುದ್ರಸ್ಥಾನವು ೧೦೦೦೦೦೦೦೦೦೦೦೦೦೦೦೦, ಅಂತಿಮಸ್ಸಮುದ್ರಃ (ಮಹಾಸಮುದ್ರಃ)—೧೮ ನೆಯದು ಮಹಾಸಮುದ್ರಸ್ಥಾನವು ೧೦೦೦೦೦೦೦೦೦೦೦೦೦೦೦೦೦, ಮಧ್ಯಂ—೧೯ ನೆಯದು ಮಧ್ಯಸ್ಥಾನವು ೧೦೦೦೦೦೦೦೦೦೦೦೦೦೦೦೦೦೦, ಪರಾರ್ಧಸಂಜ್ಞಿಕಂ—೨೦ನೆಯದು ಪರಾರ್ಧಸ್ಥಾನವು ೧೦೦೦೦೦೦೦೦೦೦೦೦೦೦೦೦೦೦೦, ಇಮಾಂ—ಹೀಗೆ ಹೇಳಿ ತೋರಿಸಿದುದನ್ನು ಪಂಡಿತಾಃ—ಶೈವಶಾಸ್ತ್ರಾಭಿಜ್ಞರು, ಸಂಖ್ಯಾಂ—ಇಪ್ಪತ್ತುಸ್ಥಾನಗಳನ್ನೊಳಕೊಂಡಿರುವ ಸಂಖ್ಯೆಯನ್ನಾಗಿ, ವಿದುಃ—ತಿಳಿಯುತ್ತಾರೆ.

**ಅವತರಣಿಕೆ**— ಪ್ರಕೃತಿಪರ್ಯಂತವಾದ ಅವಾಂತರಪ್ರಳಯ, ಮಾಯಾಪರ್ಯಂತವಾದ ಮಹಾಪ್ರಳಯ ಎಂದು ಎರಡು ಬಗೆಯಾದ ಪ್ರಳಯಕಾಲದಲ್ಲಿಯೂ

ಕಾಲಾಗ್ನಿರುದ್ರಶತರುದ್ರರೇ ಮೊದಲಾದ ಭುವನಾಧಿಪತಿಗಳು ನಿಲ್ಲುವ ಕ್ರಮ ವನ್ನು ಹೇಳುವುದರ ಮೂಲಕ ಪರಶಿವನ ಅನುಗ್ರಹಕೃತ್ಯವನ್ನು ಇಪ್ಪತ್ತಾರನೆಯ ಶ್ಲೋಕದಲ್ಲಿ ಉಪದೇಶಿಸುತ್ತಾರೆ.—

**ಸಂಹಾರೇ ಭುವನೇಶ್ವರಾ ಹರಿರಥೋ ಬ್ರಹ್ಮಾ ಚ ತತ್ಪ್ರಾಪಿಣೋ**
**ವಿಜ್ಞಾನಾಕಲತಾಂ ಪ್ರಯಾಂತಿ ಪುರತಃ ಕಾಲೇ ತದಾತ್ವೇಽಪಿ ಯೇ ।**
**ರುಕ್ಪಾಕೇ ಸ್ವಪದೇಚ್ಛಯಾ ವಿರಹಿತಾಶ್ಶರ್ವಸ್ಯ ತೇಽನುಗ್ರಹಾ**
**ನ್ಮುಕ್ತಾಃ ಸ್ಯುಃ ಸ್ವಪದಂ ದಧತ್ಯಪಿ ಪರೇ ತತ್ತತ್ಪರಂ ತೇ ಪರೇ ॥೨೬॥**

**ಟೀಕೆ**— ಸಂಹಾರೇ—ಎರಡು ಬಗೆಯಾದ ಸಂಹಾರಕಾಲದಲ್ಲಿ, ತತ್ಪ್ರಾಪಿಣಃ—ಆ ಸಂಹಾರವನ್ನು ಹೊಂದಿದ, ಭುವನೇಶ್ವರಾಃ—ಶತರುದ್ರನೇ ಮೊದಲಾದ ಭುವನಾಧಿಪತಿಗಳೂ, ಹರಿಃ—ವಿಷ್ಣುವು, ಬ್ರಹ್ಮಾ ಚ—ಚತುರ್ಮುಖಬ್ರಹ್ಮನೂ, ವಿಜ್ಞಾನಾಕಲತಾಂ—ವಿಜ್ಞಾನಕಲನಾಗಿರುವಿಕೆಯನ್ನು, ಪ್ರಯಾಂತಿ—ಹೊಂದುತ್ತಾರೆ. ಪುರತಃ—ಈ ಸಂಹಾರಕ್ಕೆ ಪೂರ್ವದಲ್ಲಿಯೂ, ತದಾತ್ವೇ ಕಾಲೇಽಪಿ—ತತ್ಕಾಲದಲ್ಲಿಯೂ, ಯೇ—ಯಾವ ಭುವನಾಧಿಪತಿಗಳು, ರುಕ್ಪಾಕೇ—ಮಲಪರಿಪಾಕದಲ್ಲಿ, ಸ್ವಪದೇಚ್ಛಯಾ ವಿರಹಿತಾಃ—ತಮ್ಮ ತಮ್ಮ ಪದದ ಪ್ರಾಪ್ತಿಯಲ್ಲಿ ಇಚ್ಛೆಯಿಲ್ಲದವರಾಗಿರುವರೋ, ತೇ—ಅವರು, ಶರ್ವಸ್ಯ—ಪರಮೇಶ್ವರನ, ಅನುಗ್ರಹಾತ್—ಪರಮಮುಕ್ತಿಪ್ರದಾನವೆಂಬ ಅನುಗ್ರಹದಿಂದ, ಮುಕ್ತಾಃ ಸ್ಯುಃ—ಮೋಕ್ಷವನ್ನು ಹೊಂದಿದವರಾಗುವರು. ಪರೇ ತು—ತಮ್ಮ ತಮ್ಮ ಪದದ ಪ್ರಾಪ್ತಿಯಲ್ಲಿ ಇಚ್ಛೆಯುಳ್ಳ ಇತರರು, ಸ್ವಪದಂ—ಮಾಯೆಯಲ್ಲಿ ಶಕ್ತಿರೂಪವಾಗಿರುವ ತಮ್ಮ ಸ್ಥಾನವನ್ನು, ದಧತಿ—ಪಾಲಿಸಿಕೊಂಡಿರುವರು. ಪರೇ ತೇ—ಉಳಿದ ಅನಂತನೇ ಮೊದಲಾದ ಶುದ್ಧಾಧ್ವಾಧಿಕಾರಿಗಳು, ತತ್ಪರಂ—ತತ್ತ್ವಗಳೆಲ್ಲಕ್ಕಿಂತಲೂ ಮೇಲಾಗಿರುವ, ತತ್—ಪ್ರಮಾಣಪ್ರಸಿದ್ಧವಾದ ಶಿವಪದವನ್ನು, ದಧತಿ—ಧರಿಸುತ್ತಾರೆ. (ಹೊಂದುತ್ತಾರೆ)

**ಅವತರಣಿಕೆ**— ಪರಶಿವನು ನಡೆಯಿಸುವ ಮಹಾಸಂಹಾರಕೃತ್ಯಕ್ಕೆ ಪ್ರಯೋಜನವನ್ನೂ, ಮಹಾಸಂಹಾರದಲ್ಲಿ ಅವಶಿಷ್ಟವಾಗಿ ನಿಲ್ಲುವ ವಸ್ತುಗಳನ್ನೂ, ತಿರುಗಿ ಸೃಷ್ಟ್ಯಾದಿ ಕಾರ್ಯಗಳನ್ನು ನಡೆಯಿಸುವುದಕ್ಕೆ ಪ್ರಯೋಜನವನ್ನೂ ತೋರಿಸುವುದರ ಮೂಲಕ ಪರಶಿವನ ಪಂಚಕೃತ್ಯಗಳು ಚೇತನರ ಪ್ರಯೋಜನಕ್ಕಾಗಿಯೇ ಇರುವುವೆಂಬ ಅಂಶವನ್ನು ಇಪ್ಪತ್ತೇಳನೆಯ ಶ್ಲೋಕದಲ್ಲಿ ಸ್ಪಷ್ಟಪಡಿಸಿ ಜ್ಞಾನಪಾದವನ್ನು ಪೂರ್ತಿಗೊಳಿಸುತ್ತಾರೆ.—

**ವಿಶ್ರಾಂತ್ಯೈ ಭವಿನಾಂ ಚ ಖಿನ್ನಮನಸಾಂ ಪಾಕಾಯ ಕರ್ಮಾವಳೇಃ**
**ಮಾಯಾವಾಗ್ಬಲಸಂಭವಾಯ ಕುರುತೇ ಶಂಭುರ್ಮಹಾಸಂಹೃತಿಂ ।**
**ಶಿಷ್ಯಂತೇ ಪಶವಸ್ಸಶಕ್ತಿರಮಲಶ್ಶಂಭುಶ್ಚ ಮಾಯಾದ್ವಯಂ**
**ಸೃಷ್ಟ್ಯಾದ್ಯಂ ದಯಯಾ ತತಶ್ಚ ಕುರುತೇ ಭೋಗಾಯ ಪುಂಸಾಂ**
**ಪುನಃ ॥೨೭॥**

**ಟೀಕೆ**— ಭವಿನಾಂ—ಸಂಸಾರಸಂಬಂಧವುಳ್ಳವರಾದ, ಖಿನ್ನಮನಸಾಂ— ಆದುದರಿಂದಲೇ ಖೇದವನ್ನು ಹೊಂದಿರುವ ಮನಸ್ಸುಳ್ಳ, (ಆತ್ಮನಾಂ)—ಚೇತನ ರಿಗೆ, ವಿಶ್ರಾಂತ್ಯೈ—ಶ್ರಮಪರಿಹಾರಕ್ಕೋಸ್ಕರವೂ, ಕರ್ಮಾವಳೇಃ—ಅನೇಕ ಜನ್ಮಗಳಲ್ಲಿ ಸಂಚಿತವಾಗಿರುವ ಕರ್ಮಪರಂಪರೆಯ, ಪಾಕಾಯ—ಪರಿಪಕ್ವತೆಗೋ ಸ್ಕರವೂ, ಮಾಯಾವಾಗ್ಬಲಸಂಭವಾಯ ಚ—ವಾಗಾದೀಂದ್ರಿಯಗಳನ್ನೂ ಇಂದ್ರಿ ಯಾಶ್ರಯಗಳಾದ ಶರೀರಗಳನ್ನೂ ಉಂಟುಮಾಡುವ ವಿಷಯದಲ್ಲಿ ಸಾಮರ್ಥ್ಯವುಂ ಟಾಗುವುದಕ್ಕೋಸ್ಕರವೂ, ಶಂಭುಃ—ಪರಮಶಿವನು, ಮಹಾಸಂಹೃತಿಂ—ಮಹಾ ಪ್ರಳಯವನ್ನು, ಕುರುತೇ—ಮಾಡುತ್ತಾನೆ. (ತದಾ)—ಆ ಕಾಲದಲ್ಲಿ, ಪಶವಃ—ಮಲಬದ್ಧರಾದ ಚೇತನರೂ, ಸಶಕ್ತಿಃ—ಜ್ಞಾನಕ್ರಿಯಾಶಕ್ತಿಗಳೊಡನೆ ಕೂಡಿರುವ, ಅಮಲಃ—ಇತರಮಲರಹಿತನಾಗಿದ್ದರೂ ಆಣವಮಲದೊಡನೆ ಕೂಡಿರುವ, ಶಂಭುಃ—ಪರಮೇಶ್ವರನೂ, (ಮುಕ್ತಚೇತನರೂ), ಮಾಯಾ ದ್ವಯಂ ಚ—ಶುದ್ಧಾಶುದ್ಧಗಳಾದ ಭುವನಗಳಿಗೆ ಉಪಾದಾನಕಾರಣಗಳಾಗಿರುವ ಶುದ್ಧಾಶುದ್ಧರೂಪವಾದ ಎರಡು ಮಾಯೆಗಳೂ ಇವುಗಳೆಲ್ಲವೂ, ಶಿಷ್ಯಂತೇ—ಉಳಿ ಯುವುವು. ತತಶ್ಚ—ಅಂಥ ಮಹಾಸಂಹಾರವು ಮುಗಿದ ಅನಂತರದಲ್ಲಿಯೂ, ಪುಂಸಾಂ—ಬದ್ಧಚೇತನರಿಗೆ, ಭೋಗಾಯ—ಉಳಿದಿರುವ ಹಿಂದಿನ ಕರ್ಮಗಳ ಫಲಾನುಭವಕ್ಕೋಸ್ಕರ, ದಯಯಾ—ಕೃಪೆಯಿಂದ, ಪುನಃ—ತಿರುಗಿಯೂ, ಸೃಷ್ಟ್ಯಾದ್ಯಂ—ಸೃಷ್ಟಿ ಮೊದಲಾದ ವ್ಯಾಪಾರಕಲಾಪವನ್ನು, ಕುರುತೇ— ಮಾಡುತ್ತಾನೆ.

**ಇತಿ ಶ್ರೀಮದ್ವಾಧೂಲಧನ್ವಿಕುಲಾವತಂಸಭೂತೇನ ಪೂರ್ವೋತ್ತರ**
**ಮೀಮಾಂಸಾಭೂಷಣೇನ ವಿದ್ಯಾನಿಧಿನಾ ದೇವಶಿಖಾ**
**ಮಣಿರಾಮಾನುಜಾಚಾರ್ಯೇಣ ವಿರಚಿತಾಯಾಂ**
**ಸಿದ್ಧಾಂತಸಾರಾವಳ್ಯಾಃ ಕರ್ಣಾಟಭಾಷಾ**
**ಮಯಸಂಕ್ಷಿಪ್ತಪದವಿವೃತೌ ಜ್ಞಾನ**
**ಪಾದಃ ಪ್ರಥಮಃ ಸಮಾಪ್ತಃ ॥**

# ಅಥ ಕ್ರಿಯಾಪಾದಃ



**ಅವತರಣಿಕೆ**— ಈಗ ಈ ಗ್ರಂಥಕಾರರು ಕ್ರಿಯಾಪಾದವನ್ನು ಉಪದೇಶಿಸಲು ಉದ್ಯುಕ್ತರಾಗಿ ಮೊದಲು ಕ್ರಿಯೆಯೆಂಬ ದೀಕ್ಷೆಯ ಸ್ವರೂಪವನ್ನು ತೋರಿಸುವುದಕ್ಕಾಗಿ—ಆ ದೀಕ್ಷೆಯೆಂಬುದು ಮಲಪರಿಪಾಕಕ್ಕೆ ಅನುಗುಣವಾದ ಶಕ್ತಿಪಾತವನ್ನು ಮುಂದಿಟ್ಟುಕೊಂಡೇ ಇರುವಂಥದಾದಕಾರಣ ಶಕ್ತಿಪಾತಾನುಸಾರವಾಗಿ ದೀಕ್ಷೆಯನ್ನು ಸ್ವೀಕರಿಸಿ ಸಮಯಾಚಾರಗಳನ್ನು ಬಿಡದಂತೆ ಅನುಷ್ಠಿಸುತ್ತಿರಬೇಕೆಂದು ಇಪ್ಪತ್ತೆಂಟನೆಯ ಶ್ಲೋಕದಲ್ಲಿ ಉಪದೇಶಿಸುತ್ತಾರೆ.—

**ಮೂಲೇ ಕಾಲೇನ ಪಕ್ವೇ ಪತತಿ ನರವರೇ ಶಕ್ತಿರಾದ್ಯಾ ಭವೇಽಸ್ಮಿನ್**
**ದ್ವೇಷೋ ನಿಶ್ಶ್ರೇಯಸೇಚ್ಛಾ ಗುರುವರಭಜನಂ ತದ್ಗತೇಶೋಽಸ್ಯ ಹೌತ್ರ್ಯಾ ।**
**ಪಾಶಾನ್ ಸಂಭಿದ್ಯ ಶಕ್ತ್ಯಾ ನಯತಿ ಶಿವಪದಂ ವ್ಯಂಜಯಂಸ್ತಚ್ಛಿವತ್ವಂ**
**ದೀಕ್ಷಾಪೂತೋಽಂಗಸಾಕ್ಷ್ಯಕರಸಮಯಾಚಾರಮೇಷೋಽನುತಿಷ್ಠೇತ್ ॥೨೮॥**

**ಟೀಕೆ**— ಮೂಲೇ—ಅನಾದಿಯಾದುದರಿಂದ ಸಂಸಾರಕ್ಕೆ ಮೂಲಭೂತವೆನಿಸಿಕೊಂಡಿರುವ ಆಣವಮಲವು, ಕಾಲೇನ—ಪರಿಪಾಕಕಾಲದಿಂದ, ಪಕ್ವೇ (ಸತಿ)—ಪರಿಪಕ್ವವಾಗುತ್ತಿರಲು, ಆದ್ಯಾ ಶಕ್ತಿಃ—ಆದಿಭೂತವಾದ ತಿರೋಧಾನ ಶಕ್ತಿಯು, ನರವರೇ—ಅಂಥ ಪುರುಷಶ್ರೇಷ್ಠನಲ್ಲಿ, ಪತತಿ—ಬೀಳುತ್ತದೆ (ಕುಗ್ಗಿ ಹೋಗುತ್ತದೆ) ತದಾ (ಅಸ್ಯ)—ಆ ಕಾಲದಲ್ಲಿ ಈ ಪುರುಷನಿಗೆ, ಅಸ್ಮಿನ್ ಭವೇ—ಈ ಸಂಸಾರದಲ್ಲಿ, ದ್ವೇಷಃ—ದ್ವೇಷವೂ (ಜಿಹಾಸೆಯೂ), ನಿಶ್ಶ್ರೇಯಸೇಚ್ಛಾ—ಮೋಕ್ಷದಲ್ಲಿ ಅಪೇಕ್ಷೆಯೂ, ಗುರುವರಭಜನಂ—ಶ್ರೇಷ್ಠನಾದ ಗುರುವಿನ ಸೇವೆಯೂ, ಭವತಿ—ಉಂಟಾಗುತ್ತದೆ. (ಅಥ)—ಇಂಥ ಗುರುವಿನಿಂದ ಶಕ್ತಿಪಾತವನ್ನು ಅರಿತಮೇಲೆ, ತದ್ಗತೇಶಃ—ಆ ಸದ್ಗುರುವನ್ನು ಅಧಿಷ್ಠಿಸಿರುವ ಪರಶಿವನು, ಅಸ್ಯ—ಆತ್ಮಸ್ವರೂಪಜ್ಞಾನಕ್ಕಾಗಿ ಸದ್ಗುರುಸವಿಾಪವನ್ನು ಹೊಂದಿರುವ ಈ ಶಿಷ್ಯನ, ಪಾಶಾನ್—ಮಲ-ಮಾಯೆ-ಕರ್ಮ-ಎಂಬ ಮೂರುಬಗೆಯ ಪಾಶಗಳನ್ನು, ಹೌತ್ರ್ಯಾ—ಕುಂಡಮಂಡಲಾದಿಗಳನ್ನು ಮುಂದಿಟ್ಟುಕೊಂಡು ಮಾಡುವ ಮಾಂತ್ರಿಕದೀಕ್ಷೆಯಿಂದ (ಇವನನ್ನು ಸಂಸ್ಕರಿಸಿ), ಶಕ್ತ್ಯಾ—ಪಾಶಸೂತ್ರಗಳನ್ನು ಛೇದಿಸಬಲ್ಲುದಾದ ಜ್ಞಾನಶಕ್ತಿಯೆಂಬ ಖಡ್ಗದಿಂದ, ಸಂಭಿದ್ಯ—ಚನ್ನಾಗಿ ಕತ್ತರಿಸಿ, ತತ್ ಶಿವತ್ವಂ—ಪ್ರಸಿದ್ಧವಾದ ಶಿವಸ್ವರೂಪವನ್ನು, ವ್ಯಂಜಯನ್

ರ್ಸ—ಇವನಿಗೆ ಪ್ರಕಾಶಪಡಿಸುತ್ತಿರುವವನಾಗಿ, ಶಿವಪದಂ—(ಇವನನ್ನು) ಶಿವ ಪದವನ್ನು, ನಯತಿ—ಹೊಂದಿಸುತ್ತಾನೆ. ದೀಕ್ಷಾಪೂತಃ—ಹೀಗೆ ದೀಕ್ಷೆಯಿಂದ ಶುದ್ಧಿಗೊಳಿಸಲ್ಪಟ್ಟ, ಏಷಃ—ಈ ಶಿಷ್ಯನು, (ಅನಂತರಂ)—ದೀಕ್ಷಾನಂತರದಲ್ಲಿ, ಯಾವಜ್ಜೀವವೂ, ಅಂಗಪಾಶಕ್ಷಯಕರಸಮಯಾಚಾರಂ—ಮಲಾದಿಪಾಶಗಳನ್ನು ಹೋಗಲಾಡಿಸಬಲ್ಲುದಾದ ಶೈವಾಗಮಗಳಲ್ಲಿ ವಿಹಿತವಾಗಿರುವ ನಿತ್ಯನೈಮಿತ್ತಿಕಕರ್ಮಾಂಗವಾದ ಆಚಾರವನ್ನು, ಅನುತಿಷ್ಠೇತ್—ಅನುಷ್ಠಿಸಬೇಕು. ||೨೮||

**ಅವತರಣಿಕೆ**= ಹೀಗೆ ಶಾಸ್ತ್ರವಿಧಿಯನ್ನು ಅನುಸರಿಸಿ ಶೈವದೀಕ್ಷೆಯನ್ನು ಪಡೆದು ಸಮಯಾಚಾರಗಳನ್ನು ಉಲ್ಲಂಘಿಸದೆ ನಡೆದುಕೊಳ್ಳುವವನು ಶರೀರಾವಸಾನದಲ್ಲಿ ಶಿವಪದವನ್ನು ಸೇರುವನೆಂದು ಇಪ್ಪತ್ತೊಂಬತ್ತನೆಯ ಶ್ಲೋಕದಲ್ಲಿ ಹೇಳುತ್ತಾರೆ.—

**ಸ್ವಾಮ್ನಾಯಜ್ಞಾನಸಿದ್ಧಾಚರಣಮವಿಕಲಂ ಚಾಚರನ್ ವಿಪ್ಲುತೌ ತ**
**ನ್ನಿಷ್ಕೃತ್ಯಾಢ್ಯೋ ಮೃತೋಽಂತೇ ಶಿವನಿಹಿತಮನಾಸ್ತ್ವಂತ್ಯಯಾಗಾ**
**ಚ್ಛಿವತ್ವಂ ।**
**ಲಬ್ಧ್ವಾ ವ್ಯಾಪ್ತ್ಯಾಪ್ತವಿಶ್ವಃ ಪರಮಶಿವಸಮೋಽನೀಶಿತಾ ತೇನ ಶಕ್ತ್ಯೋ**
**ನ್ನೈಜಾಹ್ಲಾದೈಕಪೂರ್ಣೋ ನಿಖಿಲಪರಿವೃತಶ್ಶಂಕರಪ್ರೀತಿರಾಸ್ತೇ ||೨೯||**

**ಟೀಕೆ**= (ಏವಂ)—ಈ ಪ್ರಕಾರವಾಗಿ, ಸ್ವಾಮ್ನಾಯಜ್ಞಾನಸಿದ್ಧಾಚರಣಂ—ತನ್ನ ಸಿದ್ಧಾಂತವನ್ನು ತೋರಿಸುವ ಶಾಸ್ತ್ರವೆನಿಸಿಕೊಂಡಿರುವ ಕಾಮಿಕಾದಿತಂತ್ರಗಳ ಪರಿಜ್ಞಾನದಿಂದ ಇದೇ ಯುಕ್ತವೆಂದು ನಿಶ್ಚಯಿಸಲ್ಪಟ್ಟಿರುವ ಸಮಯಾಚಾರವನ್ನು, ಅವಿಕಲಂ (ಯಥಾತಥಾ)—ಲೋಪವುಂಟಾಗದಂತೆ, ಆಚರನ್ ರ್ಸ—ಮಾಡುತ್ತಿರುವವನಾಗಿ, ವಿಪ್ಲುತೌ ಸತ್ಯಾಂ—ಜ್ಞಾನವಶದಿಂದಲಾಗಲಿ, ಅಜ್ಞಾನವಶದಿಂದಲಾಗಲಿ ಸಮಯಾಚಾರಕ್ಕೆ ಲೋಪವುಂಟಾದರೆ, ತನ್ನಿಷ್ಕೃತ್ಯಾಢ್ಯಃ—ಅದಕ್ಕೆ ಶಾಸ್ತ್ರದಲ್ಲಿ ವಿಹಿತವಾಗಿರುವ ಪ್ರಾಯಶ್ಚಿತ್ತದ ಅನುಷ್ಠಾನದಿಂದ ಸಂಪನ್ನನಾಗಿ, ಅಂತೇ—ಪ್ರಾಣಾಂತಕಾಲದಲ್ಲಿ, ಶಿವನಿಹಿತಮನಾಃ—ಪರಶಿವನಲ್ಲಿ ಸ್ಥಾಪಿಸಲ್ಪಟ್ಟ ಮನಸ್ಸುಳ್ಳವನಾಗಿ, ಮೃತಃ—ಮರಣವನ್ನು ಹೊಂದಿದ ದೀಕ್ಷಿತನಾದವನು, ಅಂತ್ಯಯಾಗಾತ್—ಮರಣಾನಂತರದಲ್ಲಿ ಶರೀರಕ್ಕೆ ವಿಧಿಸಿರುವ ಸಂಸ್ಕಾರರೂಪವಾದ ಅಂತ್ಯೇಷ್ಟಿಯಿಂದ, ಶಿವತ್ವಂ ಲಬ್ಧ್ವಾ—ಶಿವಸ್ವರೂಪವನ್ನು ಹೊಂದಿ, ವ್ಯಾಪ್ತ್ಯಾ—ವ್ಯಾಪಕತ್ವಸ್ವಭಾವದಿಂದ, ಆಪ್ತವಿಶ್ವಃ—ಆಕ್ರಮಿಸಲ್ಪಟ್ಟ ಸಮಸ್ತವಸ್ತುವುಳ್ಳವನಾಗಿ (ಸರ್ವಜ್ಞತ್ವಾದಿಗುಣಗಳುಳ್ಳವನಾಗಿ), ಪರಮಶಿವಸಮಃ—ಪರಶಿವನೊಡನೆ ಸಮಾನವಾದ

ರೂಪವುಳ್ಳವನಾಗಿ, ತೇನ—ಆ ಪರಮಶಿವನ ಅನುಗ್ರಹದಿಂದ, ಶಕ್ತೋಽಪಿ— ಸೃಷ್ಟ್ಯಾದಿಪಂಚಕೃತ್ಯಗಳನ್ನು ನಡೆಯಿಸಲು ಸಮರ್ಥನಾಗಿದ್ದರೂ, ಅನೀಶಿತಾ ಸ್ವ—ತಾನು ಈಶ್ವರನಲ್ಲದವನಾಗಿ, ನೈಜಾಹ್ಲಾದೈಕಪೂರ್ಣಃ—ಸ್ವಾಭಾವಿಕ ವಾದ ಆನಂದವೊಂದರಿಂದಲೇ ಪರಿಪೂರ್ಣನಾದವನಾಗಿ, ನಿಖಿಲಪರಿವೃತಃ— ಮುಕ್ತರಾದವರೆಲ್ಲರಿಂದಲೂ ಸುತ್ತಲ್ಪಟ್ಟವನಾಗಿ, ಶಂಕರಪ್ರೀತಿಃ—ಪರಶಿವನಿಗೆ ಸಮಾನವಾದ ಆನಂದವುಳ್ಳವನಾಗಿ, ಆಸ್ತೇ—ಇರುತ್ತಾನೆ. ||೨೯||

**ಅವತರಣಿಕೆ**— ತೀವ್ರವಾದ ಮಲಪರಿಪಾಕದಿಂದ ತೀವ್ರವಾದ ಶಕ್ತಿ ಪಾತವು ಬರುವುದಾದಕಾರಣ ಸಕಲರೆಂಬ ಚೇತನರಿಗೆ ಸಾವಕಾಶನಿರ್ವಾಣ ದೀಕ್ಷೆಯನ್ನೂ ಸಾವಕಾಶಶಿವತ್ವಪ್ರಾಪ್ತಿಯನ್ನೂ ಹಿಂದಿನ ಶ್ಲೋಕದಲ್ಲಿ ತೋರಿಸಿ, ಈಗ ವಿಜ್ಞಾನಕಲರಿಗೂ ಪ್ರಳಯಾಕಲರಿಗೂ ತೀವ್ರತರವಾದ ಮಲ ಪರಿಪಾಕದಿಂದ ತೀವ್ರತರವಾದ ಶಕ್ತಿಪಾತವು ಬರುವುದಾದಕಾರಣ ಸದ್ಯೋ ನಿರ್ವಾಣದೀಕ್ಷೆಯನ್ನೂ ಸದ್ಯೋಮುಕ್ತಿಯನ್ನೂ ಮೂವತ್ತನೆಯ ಶ್ಲೋಕದಲ್ಲಿ ತೋರಿಸುತ್ತಾರೆ.—

**ಅತ್ಯಂತಂ ತೀವ್ರಪಾಕೇ ರುಜಿ ಚ ಭವಮಹಾಕ್ಲೇಶದೈನ್ಯಾರ್ದಿತಸ್ಸನ್**
**ಶಂಭೋರ್ಮುಕ್ತಿಃ ಕದೇತಿ ಸ್ವತನುವಿಧರಣೇ ನಿಸ್ಪೃಹೋಽನ್ಯೋ ವಿಚಿನ್ವನ್ ।**
**ಮಾಂ ಕೋಽಸ್ಮಾದತ್ರ ಶಕ್ತಶ್ಶಿವಪದಮತುಲಂ ಯೋಕ್ತುಮಿತ್ಯಾಕಲಯ್ಯ**
**ಪ್ರಾಪ್ಯೈನಂ ಛಿನ್ನಪಾಶಃ ಸ್ವತನುವಿರಹತೋ ಯಾತಿ ಸದ್ಯಶ್ಶಿವತ್ವಂ ||೩೦||**

**ಟೀಕೆ**— (ಕಿಂಚ) ಮತ್ತು, ರುಜಿ—ಆಣವಮಲವು, ಅತ್ಯಂತಂ ತೀವ್ರಪಾ ಕೇ ಸತಿ—ಅತಿತೀವ್ರವಾದ ಪರಿಪಾಕವುಳ್ಳುದಾಗುತ್ತಿರಲು, ಅನ್ಯಃ—ಮೂರು ಬಗೆಯಾದ ಆತ್ಮವರ್ಗದಲ್ಲಿ ಒಬ್ಬನು, ಭವಮಹಾಕ್ಲೇಶದೈನ್ಯಾರ್ದಿತಸ್ಸನ್— ಸಂಸಾರಸಂಬಂಧದಿಂದ ಉಂಟಾಗಿರುವ ಎಲ್ಲೆಯಿಲ್ಲದ ಮಹಾದುಃಖದಿಂದ ಬಂದಿ ರುವ ದೀನತೆಯಿಂದ ಪೀಡಿಸಲ್ಪಟ್ಟವನಾಗಿ, ಶಂಭೋಃ—ಶಿವನ (ಅನುಗ್ರಹ ದಿಂದ) ಮುಕ್ತಿಃ—ಮೋಕ್ಷವು, ಕದಾ ಸ್ಯಾತ್—ಯಾವಾಗ ದೊರಕೀತು ? ಇತಿ ವಿಚಿನ್ವನ್—ಹೀಗೆ ವಿಚಾರಮಾಡುತ್ತಿರುವವನಾಗಿ, ಸ್ವತನುವಿಧರಣೇ—ತನ್ನ ಶರೀರದ ಧಾರಣೆಯಲ್ಲಿಯೂ, ನಿಸ್ಪೃಹಸ್ಸನ್—ಆಶೆಯುಲ್ಲದವನಾಗಿ, ಅತ್ರ—ಇಲ್ಲಿ, ಅಸ್ಮಾತ್—ಈ ಸಂಸಾರದಿಂದ, ಮಾಂ—ನನ್ನನ್ನು, ಅತುಲಂ ಶಿವಪದಂ— ಉಪಮಾನರಹಿತವಾದ ಶಿವಪದವನ್ನು, ಯೋಕ್ತುಂ—ಹೊಂದಿಸುವುದಕ್ಕೆ, ಶಕ್ತಃ ಕಃ—ಯಾವನು ಸಮರ್ಥನಾದವನು ? ಇತಿ ಆಕಲಯ್ಯ—ಹೀಗೆ ಆಲೋಚಿಸಿ,

ಏನಂ ಪ್ರಾಪ್ಯ—ಈ ಶಿವನನ್ನು ಹೊಂದಿ, ಛಿನ್ನಪಾಶಃ—ಛೇದಿಸಲ್ಪಟ್ಟ ಪಾಶವುಳ್ಳವನಾಗಿ, ಸ್ವತನುವಿರಹತಃ—ತನ್ನ ಶರೀರವನ್ನು ಬಿಟ್ಟಮೇಲೆ, ಸದ್ಯಃ—ತತ್ಕ್ಷಣದಲ್ಲಿಯೇ, ಶಿವತ್ವಂ—ಶಿವಸಾರೂಪ್ಯಪ್ರಾಪ್ತಿಯೆಂಬ ಮೋಕ್ಷವನ್ನು, ಯಾತಿ—ಹೊಂದುತ್ತಾನೆ. ||೩೦||

**ಅವತರಣಿಕೆ**— ಶಕ್ತಿಪಾತಭೇದಗಳನ್ನು ಕಂಡುಹಿಡಿಯುವ ಚಿಹ್ನಗಳಾವುವೆಂದರೆ—ತೀವ್ರತರಶಕ್ತಿಪಾತವಿದ್ದರೆ ದೀಕ್ಷೆಯಾದ ಉತ್ತರಕ್ಷಣದಲ್ಲಿಯೇ ಶರೀರವು ಬಿದ್ದುಹೋಗುವುದು; ತೀವ್ರಶಕ್ತಿಪಾತವಿದ್ದರೆ ದೀಕ್ಷೆಯಾದ ಉತ್ತರಕ್ಷಣದಲ್ಲಿ ಮೂರ್ಛೆಯಾಗುವುದು; ಮಂದವಾದ ಶಕ್ತಿಪಾತವಿದ್ದರೆ ದೀಕ್ಷೆಯಾದ ಉತ್ತರಕ್ಷಣದಲ್ಲಿ ಶರೀರವು ನಡುಗುವುದು; ಮಂದತರವಾದ ಶಕ್ತಿಪಾತವಿದ್ದರೆ ದೀಕ್ಷೆಯಾದ ಉತ್ತರಕ್ಷಣದಲ್ಲಿ ರೋಮಾಂಚವುಂಟಾಗುವುದು.

ಇಂಥ ಚಿಹ್ನಗಳಿಂದ ಶಕ್ತಿಪಾತಭೇದಗಳನ್ನು ಕಂಡುಹಿಡಿದು ಅದಕ್ಕೆ ಅನುಸಾರವಾಗಿ ಸ್ವೀಕರಿಸಬೇಕಾಗಿರುವ ದೀಕ್ಷೆ—ನಾಲ್ಕುಬಗೆಯಾಗುವುದು; ಹೇಗೆಂದರೆ—೧ ಮಂದತರವಾದ ಶಕ್ತಿಪಾತದಲ್ಲಿ ಸಮಯದೀಕ್ಷೆಯನ್ನೂ, ೨ ಮಂದವಾದ ಶಕ್ತಿಪಾತದಲ್ಲಿ ವಿಶೇಷ ದೀಕ್ಷೆಯನ್ನೂ, ೩ ತೀವ್ರಶಕ್ತಿಪಾತದಲ್ಲಿ ವಿಳಂಬಿತನಿರ್ವಾಣದೀಕ್ಷೆಯನ್ನೂ, ೪ ತೀವ್ರತರಶಕ್ತಿಪಾತದಲ್ಲಿ ಸದ್ಯೋನಿರ್ವಾಣ ದೀಕ್ಷೆಯನ್ನೂ ಸ್ವೀಕರಿಸಬೇಕು.

ದೀಕ್ಷೆಯ ಅನಂತರಕಾಲದಲ್ಲಿ ತಿಳಿಯಲ್ಪಡಬಹುದಾದ ಶರೀರಪಾತ ಮೊದಲಾದ ಚಿಹ್ನಗಳಿಂದ ದೀಕ್ಷೆಗೆ ಪೂರ್ವದಲ್ಲಿರುವ ಶಕ್ತಿಪಾತದ ವ್ಯತ್ಯಾಸಗಳನ್ನು ಹೇಗೆ ತಿಳಿಯಲಾದೀತು? ಎಂದು ಆಶಂಕಿಸಬೇಕಾದುದಿಲ್ಲ; ಏತಕ್ಕೆಂದರೆ—ಗುರುವೆನಿಸಿಕೊಂಡವನು ತನ್ನ ಜ್ಞಾನಸಾಮರ್ಥ್ಯದಿಂದಲೂ ಶಿಷ್ಯನ ಬಾಹ್ಯ ವ್ಯಾಪಾರಗಳಿಂದಲೂ ಶಕ್ತಿಪಾತದ ವ್ಯತ್ಯಾಸಗಳನ್ನು ಕಂಡುಹಿಡಿಯಬೇಕು. ಹಾಗೆ ಕಂಡುಹಿಡಿಯದಿದ್ದರೆ ಗುರುಶಿಷ್ಯರಿಬ್ಬರಿಗೂ ದೋಷವುಂಟು. ಆದುದರಿಂದ ಗುರುವಾದವನು ಶಿಷ್ಯನ ಉಚ್ಚನೀಚಪರಿಪಾಕಗಳನ್ನು ಪರೀಕ್ಷಿಸಿ ಅದಕ್ಕೆ ಅನುಸಾರವಾಗಿ ದೀಕ್ಷೆಯನ್ನು ಕೊಡಬೇಕು. ಸೆಳೆದರೂ ತಳ್ಳಿದರೂ ಹೊಡೆದರೂ ಬೈದರೂ ಮನೋವಿಕಾರವಿಲ್ಲದವರು ಶುದ್ಧರು; ದೀಕ್ಷೆಗೆ ಅವರೇ ಅರ್ಹರೆಂದು ತಿಳಿಯಬೇಕು.

ಸಮಯದೀಕ್ಷೆಯಲ್ಲಿಯೂ ವಿಶೇಷದೀಕ್ಷೆಯಲ್ಲಿಯೂ ಶಿಖಾಚ್ಛೇದವಿಲ್ಲ. ಸಮಯದೀಕ್ಷೆಯುಳ್ಳವರಿಗೆ ರುದ್ರಪದಪ್ರಾಪ್ತಿಯೂ, ವಿಶೇಷದೀಕ್ಷೆಯುಳ್ಳವರಿಗೆ

ಈಶ್ವರಪದಪ್ರಾಪ್ತಿಯೂ ಉಂಟಾಗುವುವು. ಅಲ್ಲಿ ನಾನಾವಿಧವಾದ ಭೋಗವನ್ನು ದೀರ್ಘಕಾಲದವರೆಗೆ ಅನುಭವಿಸಿ ಪುನಃ ಅಲ್ಲಿ ಭುವನೇಶ್ವರರಿಂದ ವಿಳಂಬಿತ ನಿರ್ವಾಣದೀಕ್ಷೆಯನ್ನಾಗಲಿ ಸದ್ಯೋನಿರ್ವಾಣದೀಕ್ಷೆಯನ್ನಾಗಲಿ ಶಕ್ತಿಪಾತಕ್ಕೆ ಅನುಸಾರವಾಗಿ ಪಡೆದು ಕೊನೆಯಲ್ಲಿ ಶಿವಪದವನ್ನು ಸೇರುವರು. ಈ ಅಭಿಪ್ರಾಯ ವನ್ನು ಮೂವತ್ತೊಂದನೆಯ ಶ್ಲೋಕದಲ್ಲಿ ಹೇಳುತ್ತಾರೆ.—

**ಮಂದಾದ್ಯೈಃ ಕೇಽಪಿ ಪಕ್ವೇ ತಮಸಿ ಚ ಸಮಯಾಂ ಸಂಸ್ಕೃತಿಂ ತದ್ವಿಶಿಷ್ಟಾಂ**
**ಲಬ್ಧ್ವಾ ಲಿಂಗಾರ್ಚನಾದ್ಯೈರ್ನಿಪತಿತತನವೋ ರೌದ್ರಮೈಶಂ ಪದಂ ಚ ।**
**ಲೌಕಿಕ್ಯಾ ಯೋಜಿತಾ ಯೇ ಪತಿಸುಯಜನತಃ ಪ್ರೇತ್ಯ ಭುಕ್ತ್ವೈವ ಲೋಕೇ**
**ವೈರಾಗ್ಯಾದ್ದೀಕ್ಷಿತಾಸ್ತೇ ಭುವನಜಗುರುಭಿರ್ಯಾಂತಿ ಸಾಕ್ಷಾಚ್ಛಿವತ್ವಂ॥೩೧॥**

ಟೀಕೆ— ತಮಸಿ—ಆಣವಮಲವು, ಮಂದಾದ್ಯೈಃ—ಮಂದತರ ಮಂದ ಮೊದಲಾದ, (ಪಾಕೈಃ)—ಪರಿಪಾಕಗಳಿಂದ, ಪಕ್ವೇ ಸತಿ—ಪಕ್ವವಾಗುತ್ತಿರಲು, ಕೇಽಪಿ—ಸಕಲರೆನಿಸಿಕೊಂಡ ಚೇತನರಲ್ಲಿ ಮಂದತರಪಾಕವುಳ್ಳ ಕೆಲವರೂ ಮತ್ತು ಮಂದಪಾಕವುಳ್ಳ ಕೆಲವರೂ, (ಕ್ರಮಾತ್)—ಕ್ರಮವಾಗಿ, (ಗುರೋಃ)—ಸದ್ಗುರುವಿನಿಂದ, ಸಮಯಾಂ ಸಂಸ್ಕೃತಿಂ—ಮಂದತರಪಾಕಾನುಗುಣವಾದ ಮಂದತರಶಕ್ತಿಪಾತವನ್ನನುಸರಿಸಿ ಸಮಯದೀಕ್ಷೆಯನ್ನೂ, ತದ್ವಿಶಿಷ್ಟಾಂ ಚ ಸಂಸ್ಕೃತಿಂ— ಮಂದಪಾಕಾನುಗುಣವಾದ ಮಂದಶಕ್ತಿಪಾತವನ್ನನುಸರಿಸಿ ಸಮ ಯದೀಕ್ಷೆಗಿಂತಲೂ ಸ್ವಲ್ಪ ಹೆಚ್ಚಿದ ಅತಿಶಯವುಳ್ಳ ವಿಶೇಷದೀಕ್ಷೆಯನ್ನೂ, ಲಬ್ಧ್ವಾ—ಹೊಂದಿ (ಸ್ವೀಕರಿಸಿ), ಲಿಂಗಾರ್ಚನಾದ್ಯೈಃ—(ಇವರು) ನಿತ್ಯಕರ್ಮ ಮಾತ್ರಾಧಿಕಾರಿಗಳಾದುದರಿಂದ ನಿತ್ಯಕರ್ಮದಲ್ಲಿ ವಿಹಿತವಾಗಿರುವ ಸ್ನಾನ, ಸಂಧ್ಯಾ ವಂದನ, ಶಿವಪೂಜೆ, ನಿತ್ಯಾಗ್ನಿಕಾರ್ಯ ಮೊದಲಾದ ಆಚಾರಗಳಿಂದ, (ಕಾಲಂ ಯಾಪಯಿತ್ವಾ)—ಕಾಲವನ್ನು ಕಳೆದು, (ಅಂತೇ)—ಕೊನೆಯಲ್ಲಿ, ನಿಪತಿತ ತನವಃ—ಬಿದ್ದುಹೋದ ಶರೀರವುಳ್ಳವರಾಗಿ (ಮೃತರಾಗಿ), ರೌದ್ರಂ ಪದಂ— ಸಮಯದೀಕ್ಷೆಯುಳ್ಳವರು ರುದ್ರಪದವನ್ನೂ, ಐಶಂ ಚ ಪದಂ_ವಿಶೇಷದೀಕ್ಷೆಯು ಳ್ಳವರು ಈಶ್ವರಪದವನ್ನೂ, ಯಾಂತಿ —ಕ್ರಮವಾಗಿ ಹೊಂದುತ್ತಾರೆ. ಯೇ— ಹೀಗೆ ಸಮಯದೀಕ್ಷೆಯನ್ನಾಗಲಿ ವಿಶೇಷದೀಕ್ಷೆಯನ್ನಾಗಲಿ ಸ್ವೀಕರಿಸಿದ ಮೇಲೆ ತೀವ್ರಪಾಕಾನುಗುಣವಾದ ತೀವ್ರಶಕ್ತಿಪಾತವುಳ್ಳ ಯಾವ ಸಕಲರೆಂಬ ಚೇತನರು, ಲೌಕಿಕ್ಯಾ ಸಂಸ್ಕೃತ್ಯಾ—ಲೋಕಧರ್ಮಿಣಿಯಾದ ನಿರ್ವಾಣದೀಕ್ಷೆಯೊಡನೆ, ಯೋ

 

ಜಿತಾಃ—ಸೇರಿಸಲ್ಪಟ್ಟವರಾಗುವರೋ (ಸಂಸ್ಕರಿಸಲ್ಪಡುವರೋ), ತೇ—ಅವರು, ಪತಿಸುಯಜನತಃ—ಪರಶಿವನ ಪೂಜೆಯಿಂದಲೇ, (ಕಾಲಂ ಯಾಪಯಿತ್ವಾ)—ಕಾಲವನ್ನು ಕಳೆದು, ಪ್ರೇತ್ಯ—ಮರಣಾನಂತರದಲ್ಲಿ, ಲೋಕೇ—ಶುದ್ಧಭುವನದಲ್ಲಿ, ಭೋಗಾನ್—ಭೋಗಗಳನ್ನು, ಭುಕ್ತ್ವಾ—ಅನುಭವಿಸಿ, ಅನಂತರಂ—ಅನಂತರದಲ್ಲಿ, ವೈರಾಗ್ಯಾತ್—ಭೋಗದಲ್ಲಿ ಆಸೆ ತೊಲಗಿದುದರಿಂದ, ಭುವನಜ ಗುರುಭಿಃ—ಭುವನೇಶ್ವರರುಗಳಿಂದ, ದೀಕ್ಷಿತಾಃ—ತೀವ್ರತರಪಾಕಾನುಗುಣವಾದ ವೈರಾಗ್ಯದೀಕ್ಷೆಯಿಂದ ಸಂಸ್ಕರಿಸಲ್ಪಟ್ಟವರಾಗಿ, ಸಾಕ್ಷಾತ್—ಪ್ರತ್ಯಕ್ಷವಾಗಿ, ಶಿವತ್ವಂ—ಪರಶಿವಸಾಮ್ಯಾಪತ್ತಿರೂಪವಾದ ಶಿವತ್ವವೆಂಬ ಮೋಕ್ಷವನ್ನು, ಯಾಂತಿ—ಹೊಂದುತ್ತಾರೆ. ||೩೧||

ಅವತರಣಿಕೆ— ಚೆನ್ನಾಗಿ ದೀಕ್ಷೆಯನ್ನು ಪಡೆದು ಸಮಯಾಚಾರಗಳನ್ನು ಉಲ್ಲಂಘಿಸದೆ ನಡೆದುಕೊಳ್ಳುವವನು ಶಿವಪದವನ್ನು ಹೊಂದುವನೆಂದೂ, ದೀಕ್ಷಿತನಾಗಿದ್ದರೂ ಸಮಯಾಚಾರಗಳಿಗೆ ಲೋಪವುಂಟಾದರೆ ಪ್ರಾಯಶ್ಚಿತ್ತಗಳನ್ನು ನಡೆಯಿಸಿಕೊಳ್ಳದಿದ್ದ ಪಕ್ಷದಲ್ಲಿ ನೂರುವರ್ಷಗಳವರೆಗೂ ಪಿಶಾಚಜನ್ಮವನ್ನು ಅನುಭವಿಸಿ ಅನಂತರದಲ್ಲಿ ಶಿವಪದವನ್ನು ಹೊಂದುವನೆಂದೂ, ದೀಕ್ಷೆಯಲ್ಲಿ ಲೋಪವನ್ನು ಪಡೆದಿರುವವನು ಯಾವಾಗಲೂ ಶಿವಪದವನ್ನು ಹೊಂದಲಾರನೆಂದೂ ಮೂವತ್ತೆರಡನೆಯ ಶ್ಲೋಕದಲ್ಲಿ ಉಪದೇಶಿಸುತ್ತಾರೆ.—

**ನಾನಾವೈಕಲ್ಯಹೀನಾಂ ಶಿವಪದವಿಷಯಾಂ ಪ್ರಾಪ್ಯ ದೀಕ್ಷಾಂ ತದೂರ್ಧ್ವಂ**
**ಚರ್ಯಾಮೀಶಸ್ಯ ಭಕ್ತ್ಯಾ ಭುವಿ ಚರತಿ ಚ ಯೋ ಯಾತಿ ತದ್ವಿಪ್ಲುತಿ**
**ಶ್ಚೇತ್ ।**
**ಅಂತೇ ಕ್ರವ್ಯಾದತಾಪ್ತ್ಯಾ ಶತವಿತತಸಮೋ ಭುಕ್ತಿತೋಽಂತೇ ಶಿವತ್ವಂ**
**ದೀಕ್ಷಾವೈಕಲ್ಯಯುಕ್ತಾಸ್ಸಮಯನಿಪತಿತಾಸ್ಸಂದಿಹಾನಾ ನ ಯಾಂತಿ||೩೨||**

ಟೀಕೆ— ಯಃ—ಯಾವ ಚೇತನನು, ಭುವಿ—ಈ ಭೂಲೋಕದಲ್ಲಿ, ನಾನಾವೈಕಲ್ಯಹೀನಾಂ—ಯಾವುದೊಂದು ನ್ಯೂನತೆಯೂ ಇಲ್ಲದುದಾದ, ಶಿವಪದವಿಷಯಾಂ—ಶಿವಪದಪ್ರಾಪ್ತಿಗಾಗಿ ಏರ್ಪಟ್ಟಿರುವ, ದೀಕ್ಷಾಂ—ದೀಕ್ಷೆಯನ್ನು, ಪ್ರಾಪ್ಯ—ಹೊಂದಿ, ತದೂರ್ಧ್ವಂ—ಅದರ ಮೇಲೆ, ಈಶಸ್ಯ ಚರ್ಯಾಂ—ಪರಶಿವನ ಸೇವಾರೂಪವಾದ ಸಮಯಾಚಾರವನ್ನು, ಭಕ್ತ್ಯಾ—ಅತ್ಯಂತಪ್ರೀತಿಯಿಂದ, ಚರತಿ—ಅನುಷ್ಠಿಸುತ್ತಿರುವನೋ, ಸಃ—ಅವನು, ಶಿವತ್ವಂ—ಶಿವಪದವಿಯನ್ನು, ಯಾತಿ—ಹೊಂದುತ್ತಾನೆ. ತದ್ವಿಪ್ಲುತಿಶ್ಚೇತ್—ಆ ಸಮಯಾಚಾರದಲ್ಲಿ ಲೋಪವುಂಟಾದರೆ, ಅಂತೇ—ಅವಸಾನಕಾಲದಲ್ಲಿ,

ಕ್ರವ್ಯಾದತಾಪ್ತ್ಯಾ—ಪಿಶಾಚಜನ್ಮಪ್ರಾಪ್ತಿಯಿಂದ, ಭುಕ್ತ್ವಾತಃ—ಪಿಶಾಚಜನ್ಮ ಫಲಭೋಗದಿಂದ, ಶತವಿತತಸಮಾಃ—ನೂರುವರ್ಷಗಳ ಕಾಲವನ್ನು ಕಳೆದವನಾಗಿ, ಅಂತೇ—ಆ ಭೋಗದ ಸಮಾಪ್ತಿಯಲ್ಲಿ, ಶಿವತ್ವಂ—ಶಿವಪದವಿಯನ್ನು, ಯಾತಿ— ಹೊಂದುತ್ತಾನೆ. ದೀಕ್ಷಾನ್ಯೈಕಲ್ಯಯುಕ್ತಾಃ—ದೀಕ್ಷೆಯಲ್ಲಿ ನ್ಯೂನತೆಯುಳ್ಳವರಾಗಿಯೂ, ಸಮಯನಿಪತಿತಾಃ—ಸಮಯಾಚಾರವನ್ನು ತಪ್ಪಿದವರಾಗಿಯೂ, ಸಂದಿಹಾನಾಃ—ಕರ್ಮಾನುಷ್ಠಾನದ ಫಲವಿಷಯದಲ್ಲಿ ಸಂದೇಹವುಳ್ಳವರಾಗಿಯೂ ಇರುವವರು, ಶಿವಪದಂ—ಶಿವಪದವಿಯನ್ನು, ನ ಯಾಂತಿ—(ಯಾವಾಗಲೂ) ಹೊಂದುವುದಿಲ್ಲ. ||೩೨||

**ಅವತರಣಿಕೆ**— ಶಿವದೀಕ್ಷೆಯನ್ನು ಪಡೆದವರಿಗೆ ಅತ್ಯಂತಪ್ರಧಾನಾನುಷ್ಠೇಯವಾಗಿರುವ ಪ್ರಾಸಾದಮಂತ್ರದ ಲಕ್ಷಣವನ್ನು ಉಪದೇಶಿಸುತ್ತಾರೆ.

ಇಲ್ಲಿ—"ಪ್ರಾಸಾದ" ಎಂಬ ಪದದ ಅರ್ಥವೇನಂದರೆ—ಪ್ರಾ= ಶಿವಜ್ಞಾನವು; ಸಾ= ಗತಿ; ದ= ಕೊಡುವಂಥದು; ಈ ಮಂತ್ರವು ಶಿವಜ್ಞಾನಗತಿಯೆಂಬ ಮುಕ್ತಿಯನ್ನು ಕೊಡುವಂಥದಾದುದರಿಂದ ಪ್ರಾಸಾದಮಂತ್ರವೆಂದು ವ್ಯವಹರಿಸಲ್ಪಡುವುದು.

ಇಂಥ ಪ್ರಾಸಾದಮಂತ್ರವು—೫—೬—೮—೯—೧೦—೧೨—೧೬—೨೦—ಕಲೆಗಳುಳ್ಳುದಾದುದರಿಂದ ಎಂಟುಬಗೆಯಾಗಿ ಆಗಮಗಳಲ್ಲಿ ಉಕ್ತವಾಗಿರುವುದು. ಅದರಲ್ಲಿ—೯—೧೨—೧೬—ಕಲೆಗಳುಳ್ಳ ಮೂರು ಬಗೆಯ ಪ್ರಾಸಾದ ಮಂತ್ರಗಳೇ ಪ್ರಧಾನಗಳಾದುದರಿಂದ ಈ ಗ್ರಂಥಕಾರರು ಆ ಮೂರನ್ನೇ ತೋರಿಸಲು ಉಪಕ್ರಮಿಸಿ ಈ ಮೂವತ್ತಮೂರನೆಯ ಶ್ಲೋಕದಲ್ಲಿ ಒಂಬತ್ತು ಕಲೆಗಳುಳ್ಳ ಪ್ರಾಸಾದಮಂತ್ರದ ಸ್ವರೂಪವನ್ನು ತೋರಿಸಿರುತ್ತಾರೆ. ಅನೇಕ ವರ್ಣಗಳು ಸೇರಿ ಒಂದು ಮಂತ್ರವಾಗಿರುವುದರಿಂದ ಆ ಒಂದೊಂದು ವರ್ಣವು ಒಂದೊಂದು ಕಲೆಯೆನಿಸಿಕೊಳ್ಳುವುದೆಂಬುದು ಆಗಮಶಾಸ್ತ್ರದ ಸಂಕೇತವು. ಮಂತ್ರವನ್ನು ಸ್ಪಷ್ಟವಾಗಿ ಪ್ರಕಾಶಪಡಿಸದೆ ಗೋಪನಮಾಡಬೇಕೆಂದು ಶಾಸ್ತ್ರನಿಯಮವಿರುವುದರಿಂದ ಇಲ್ಲಿ ಸಾಂಕೇತಿಕಪದಗಳಿಂದಲೇ ಮಂತ್ರಸ್ವರೂಪವನ್ನು ತೋರಿಸಿರುತ್ತಾರೆ. ಶ್ರೀಕಂಠೇಶ್ವರನು ಸ್ಕಂದಗುರುವಿಗೆ ಈ ಮಂತ್ರವನ್ನು ಉಪದೇಶಿಸಿದನೆಂದು ಹೇಳಿದುದರಿಂದ, ಗುರುವೆನಿಸಿಕೊಂಡವನಿಗೇ ಈ ಮಂತ್ರವು ಕಾರ್ಯಕಾರಿಯಾಗುವುದೆಂದು ಸೂಚಿತವಾಗುವುದು.

**ಶ್ರೀಮತ್ಸ್ಕಂದಗುರೋಃ ಶಿವೇನ ಕಥಿತಃ ಪ್ರಾಸಾದಮಂತ್ರೋ ಯಥಾ**
**ಪ್ರಾಣೋ ಮೇಧಾ ಕ್ಷಮಾಖ್ಯಸ್ತದುಪರಿ ಗರಳಂ ಚೇತನಾರ್ಧಾಬ್ಜ**
**ಮೂರ್ಧ್ವಂ ।**
**ದಂಡಸ್ತತ್ಪರತಸ್ತು ಶಕ್ತಿರಪರಾ ಜ್ಞೇಯೋನ್ಮನಾಂತೇ ಶಿವೋ**
**ವಾಚ್ಯಶ್ಶಕ್ತಿಕಲಸ್ತಥಾ ಶಶಿಕಲೋಽಪ್ಯೇವಂ ವಿವಸ್ವತ್ಕಲಃ ॥೩೩॥**

ಟೀಕೆ— ಶ್ರೀಮತ್ಸ್ಕಂದಗುರೋಃ—ಭಾಗ್ಯಶಾಲಿಯಾದ ಸುಬ್ರಹ್ಮಣ್ಯ ಸ್ವಾಮಿಗೆ, ಶಿವೇನ—ಶ್ರೀಕಂಠಪರಮೇಶ್ವರನಿಂದ, ಕಥಿತಃ—ಉಪದೇಶಿಸಲ್ಪಟ್ಟ, ಪ್ರಾಸಾದಮಂತ್ರಃ—ಪ್ರಾಸಾದಮಂತ್ರಸ್ವರೂಪವು, ಯಥಾ—ಹೇಗೆಂದರೆ, ಪ್ರಾಣಃ-ಹಕಾರವು—೧ನೆಯ ಕಲೆಯಾಗಿರುವುದು. ಮೇಧಾ—ಔಕಾರವು ೨ನೆಯ ಕಲೆಯಾಗಿರುವುದು. ಕ್ಷಮಾ—ಊಕಾರವು ೩ನೆಯ ಕಲೆಯಾಗಿರುವುದು. ತದುಪರಿ ಗರಳಂ—ಆದರಮೇಲೆ ಮಕಾರವು ೪ನೆಯ ಕಲೆಯಾಗಿರುವುದು. ಚೇತನಾ—ಬಿಂದು ೫ನೆಯ ಕಲೆಯಾಗಿರುವುದು. ಅರ್ಧಾಬ್ಜಂ—ಅರ್ಧಚಂದ್ರವು ೬ನೆಯ ಕಲೆಯಾಗಿರುವುದು. ಊರ್ಧ್ವಂದಂಡಃ—ಆದರಮೇಲೆ ನಾದವು ೭ನೆಯ ಕಲೆಯಾಗಿರುವುದು. ತತ್ಪರತಸ್ತು—ಆದರಮೇಲೆ, ಶಕ್ತಿಃ—ಇಂದುವೃತ್ತದೊಡನೆ ಕೂಡಿರುವ ನೇಗಲಿನ ಸ್ವರೂಪವುಳ್ಳ ಶಕ್ತಿಯು ಎಂಟನೆಯ ಕಲೆಯಾಗಿರುವುದು. ಉನ್ಮನಾ—ಉನ್ಮನಿಯು, ಅಪರಾ(ಸತೀ)—ಕೊನೆಯ ಕಲೆಯಾಗಿ (೯ನೆಯ ಕಲೆಯಾಗಿ), ಜ್ಞೇಯಾ—ತಿಳಿಯಲ್ಪಡತಕ್ಕದು. ಅಂತೇ—ಈ ಉನ್ಮನಿಗೆ ಅನಂತರದಲ್ಲಿ, ವಾಚ್ಯಃ—ಈ ಪ್ರಾಸಾದಮಂತ್ರಕ್ಕೆ ವಾಚ್ಯನಾಗಿರುವ, ಶಿವಃ—ಪರಶಿವನು, ಏವಂ—ಈ ರೀತಿಯಾಗಿ, ಶಕ್ತಿಕಲಃ—ಒಂಬತ್ತು ಕಲೆಗಳುಳ್ಳವನಾಗಿ, (ವಿಭಾತಿ)—ಪ್ರಕಾಶಿಸುತ್ತಾನೆ. ತಥಾ—ಹಾಗೆಯೇ, ಶಶಿಕಲಃ—ಹದಿನಾರು ಕಲೆಗಳುಳ್ಳವನಾಗಿಯೂ, ವಿವಸ್ವತ್ಕಲಃ—ಹನ್ನೆರಡು ಕಲೆಗಳುಳ್ಳವನಾಗಿಯೂ, (ವಿಭಾತಿ)—ಪ್ರಕಾಶಿಸುತ್ತಾನೆ. ॥೩೩॥

**ಅವತರಣಿಕೆ**—ದ್ವಾದಶಕಲಾಪ್ರಾಸಾದಮಂತ್ರ, ಷೋಡಶಕಲಾಪ್ರಾಸಾದಮಂತ್ರ ಇವೆರಡರ ಸ್ವರೂಪವನ್ನು ಮೂವತ್ತುನಾಲ್ಕನೆಯ ಶ್ಲೋಕದಲ್ಲಿ ತೋರಿಸುತ್ತಾರೆ :—

**ಶೂನ್ಯೇ ಚಂಡಾಂಶುಕೋಣೇ ಪಶುರಪಿ ಚ ತತೋ ಲಂಬನಾರ್ಧಾಬ್ಜ**
**ರೋಧಿ**
**ರ್ದಂಡೋ ದಂಡಾಂತಶಕ್ತಿಸ್ತದುಪರಿ ಸಮನಾ ಸೋನ್ಮನಾ ವ್ಯಾಪಿಕಾನ್ಯಾ ।**

**ಅರ್ಕಾಂಶೇ ವ್ಯಾಪಿಕಾಂತೇ ವಿಯದಪಿಚ ಘನಾನಂತಸಂಜ್ಞಾಪ್ಯನಾಥಾ ಮಧ್ಯೇ ಚಾನಾಶ್ರಿತಾ ಪ್ರಾಗಿವ ಚ ಸಸಮನಾ ಷೋಡಶಾಂಶೇ ತಥಾಽನ್ಯಾ ||೩೪||**

**ಟೀಕೆ**— ಅರ್ಕಾಂಶೇ—ಹನ್ನೆರಡು ಕಲೆಗಳುಳ್ಳ ಪ್ರಾಸಾದಮಂತ್ರದಲ್ಲಿ ಕಲೆಗಳ ಕ್ರಮವೆಂತೆಂದರೆ—ಶೂನ್ಯೇ (ಸತಿ)—ಮೊತ್ತಮೊದಲು ಹಕಾರವಾದ ಮೇಲೆ, ಚಂಡಾಂಶುಕೋಣೇ—ಅಕಾರ-ಉಕಾರಗಳು ೧ನೆಯ ೨ನೆಯ ಕಲೆಗಳಾಗುವುವು. ಪಶುಃ—ಮಕಾರವು ೩ನೆಯ ಕಲೆಯಾಗುವುದು. ತತಃ ಲಂಬನಾ—ಅನಂತರದಲ್ಲಿ ಬಿಂದುವು ೪ನೆಯ ಕಲೆಯಾಗುವುದು. ಅರ್ಧಾಬ್ಜರೋಧಿಃ—ಅರ್ಧಚಂದ್ರ ೫ ನೆಯ ಕಲೆಯಾಗುವುದು, ನಿರೋಧಿನಿ ೬ ನೆಯ ಕಲೆಯಾಗುವುದು, ದಂಡಃ—ನಾದವು ೭ನೆಯ ಕಲೆಯಾಗುವುದು, ದಂಡಾಂತಃ—ನಾದಾಂತವು ೮ನೆಯ ಕಲೆಯಾಗುವುದು, ಶಕ್ತಿಃ—ಎಡಭಾಗದಲ್ಲಿ ಬಿಂದುವಿನೊಡನೆ ಕೂಡಿದ ನೇಗಲಿನ ಆಕಾರವುಳ್ಳ ಶಕ್ತಿಯು ೯ನೆಯ ಕಲೆಯಾಗುವುದು. ತದುಪರಿ—ಅದರ ಮೇಲೆ, ವ್ಯಾಪಿಕಾ—ವ್ಯಾಪಿನಿ ೧೦ನೆಯ ಕಲೆಯಾಗುವುದು, ಅನ್ಯಾ ಸಮನಾ—ಅದರ ಮೇಲಿರುವ ಸಮನೆ ೧೧ನೆಯ ಕಲೆಯಾಗುವುದು, ಉನ್ಮನಾ—ಕೊನೆಯಲ್ಲಿ ಉನ್ಮನಿಯು ೧೨ನೆಯ ಕಲೆಯಾಗುವುದು. ಹೀಗೆ ತೋರಿಸಿದ ಕ್ರಮದಲ್ಲಿ ಕಲೆಗಳು ೧೨ ಆಗಿರುವುವು. ಷೋಡಶಾಂಶೇ—೧೬ ಕಲೆಗಳುಳ್ಳ ಪ್ರಾಸಾದ ಮಂತ್ರದಲ್ಲಿ ಕಲೆಗಳ ಕ್ರಮವೆಂತೆಂದರೆ—ಪ್ರಾಗಿವ—ಮೊದಲು ಹೇಳಿದಂತೆಯೇ ಅಕಾರ ಮೊದಲುಗೊಂಡು ವ್ಯಾಪಿನಿಯವರೆಗೆ ೧೦ ಕಲೆಗಳಾಗುವುವು. ವ್ಯಾಪಿಕಾಂತೇ—ವ್ಯಾಪಿನಿಗೆ ಅನಂತರದಲ್ಲಿ, ಘನಾ ವಿಯತ್—ವ್ಯೋಮರೂಪಿಣಿಯು ೧೧ನೆಯ ಕಲೆಯಾಗುವುದು, ಅನಂತಸಂಜ್ಞಾ—ಅನಂತೆಯು ೧೨ನೆಯ ಕಲೆಯಾಗುವುದು, ಅನಾಥಾ—ಅನಾಥೆಯು ೧೩ನೆಯ ಕಲೆಯಾಗುವುದು, ಅನಾಶ್ರಿತಾ—ಅನಾಶ್ರಿತೆಯು ೧೪ನೆಯ ಕಲೆಯಾಗುವುದು, ಮಧ್ಯೇ—ಈ ನಾಲ್ಕು ಮಧ್ಯದಲ್ಲಿರುವುವು. ಅಥ ಪ್ರಾಗಿವ—ಅನಂತರದಲ್ಲಿ ಮೊದಲಿನಂತೆಯೇ ಅಂತ್ಯ ಭಾಗದಲ್ಲಿ, ಸಸಮನಾ—(ಸಮನೆಯೊಡನೆ ಕೂಡಿದ) ಸಮನೆಯು ೧೫ನೆಯ ಕಲೆಯಾಗುವುದು. ತಥಾ ಅನ್ಯಾ—ಹಾಗೆಯೇ ಅದರ ಮೇಲೆ ಉನ್ಮನಿಯು ೧೬ನೆಯ ಕಲೆಯಾಗುವುದು. ಹೀಗೆ ತೋರಿಸಿದ ಕ್ರಮದಲ್ಲಿ ಕಲೆಗಳು ೧೬ ಆಗುವುವು.

**ಅವತರಣಿಕೆ**= ಪ್ರಾಸಾದಮಂತ್ರದಲ್ಲಿರುವ ಕಲೆಗಳ ಮಾತ್ರಾಲೆಕ್ಕಗಳನ್ನೂ, ಹನ್ನೆರಡು ಕಲೆಗಳುಳ್ಳ ಪ್ರಾಸಾದಮಂತ್ರದಲ್ಲಿ ಮೊದಲಿನ ಒಂಬತ್ತು ಕಲೆಗಳೊಳಗೆ ಆದಿಮಧ್ಯಾವಸಾನಗಳಲ್ಲಿ ಏರ್ಪಡುವ ತ್ರಿಶೂನ್ಯವನ್ನೂ, ಮೇಲಿನ

ಮೂರುಕಲೆಗಳೊಳಗೆ ಆದಿಮಧ್ಯಾವಸಾನಗಳಲ್ಲಿ ಏರ್ಪಡುವ ತ್ರಿಶೂನ್ಯವನ್ನೂ ಮೂವತ್ತೈದನೆಯ ಶ್ಲೋಕದಲ್ಲಿ ತೋರಿಸುತ್ತಾರೆ :—

**ತ್ರಿದ್ವ್ಯೇಕಾರ್ಧತದರ್ಧತದ್ದಳಕಲಾದ್ವಂದ್ವಾಗ್ನಿವೇದಾಧ್ವಭಿಃ**
**ಸರ್ಪಾಕ್ಷೀಂದುಕವರ್ತ್ಮಬಾಣಯುಗಳೈರ್ಮಾತ್ರೈರ್ಮನೋಮಾತ್ರಯಾ ।**
**ಯುಕ್ತೇ ತ್ವರ್ಕಾಂಶಕೇ ತು ತ್ರಿಕತ್ರಿಕವಿರಹಾದಂತರೇಷು ತ್ರಿಶೂನ್ಯಂ**
**ಭೂಯಸ್ತ್ವೇಕೈಕಹಾನೇರಿತಿಖಲು ಗುರುಭಿರ್ಜ್ಞಾಯತೇ ಶೂನ್ಯ**
**ಷಟ್ಕಂ ॥೩೫॥**

**ಟೀಕೆ**— ೧ ತ್ರಿ ೨ ದ್ವಿ ೩ ಏಕ ೪ ಅರ್ಧ ೫ ತದರ್ಧ ೬ ತದ್ದಳ ೭ ಕಲಾ ೮ ದ್ವಂದ್ವಾಗ್ನಿ ೯ ವೇದಾಧ್ವಭಿಃ—ಮೂರು, ಎರಡು, ಒಂದು, ಅರ್ಧ, ಅದರಲ್ಲಿ ಅರ್ಧ, ಅದರಲ್ಲಿಯೂ ಅರ್ಧ, ಹದಿನಾರದಲ್ಲಿ ಒಂದು ಭಾಗ, ಮೂವತ್ತೆರಡರಲ್ಲಿ ಒಂದು ಭಾಗ, ಅರವತ್ತುನಾಲ್ಕರಲ್ಲಿ ಒಂದುಭಾಗ ಇಂಥ ಪರಿಮಾಣವುಳ್ಳವುಗಳಾಗಿಯೂ, ೧೦ ಸರ್ಪಾಕ್ಷೀಂದುಕ ೧೧ ವರ್ತ್ಮಬಾಣಯುಗಳೈಃ— ನೂರುಇಪ್ಪತ್ತೆಂಟರಲ್ಲಿ ಒಂದು ಭಾಗ, ಇನ್ನೂರುಐವತ್ತಾರರಲ್ಲಿ ಒಂದು ಭಾಗ ಇಂಥ ಪರಿಮಾಣವುಳ್ಳವುಗಳಾಗಿಯೂ ಇರುವ, ಮಾತ್ರೈಃ—ಮಾತ್ರೆಗಳೊಡನೆಯೂ, ೧೨ ಮನೋಮಾತ್ರಯಾ—ಇಷ್ಟೆಂದು ಹೇಳಲಶಕ್ಯವಾದ ಪರಿಮಾಣವುಳ್ಳ ಮನೋಮಾತ್ರೆಯೊಡನೆಯೂ, ಯುಕ್ತೇ—ಕೂಡಿರುವ, ಅರ್ಕಾಂಶಕೇ—ಔಕಾರ ಊಕಾರಗಳನ್ನು ಆದಿಯಲ್ಲಿ ಪಡೆದಿರುವ ದ್ವಾದಶಕಲಾಪ್ರಾಸಾದ ಮಂತ್ರದಲ್ಲಿ, ಅಂತರೇಷು— ಮೊದಲಿನ ಒಂಬತ್ತು ಕಲೆಗಳೊಳಗೆ ಆದಿ-ಮಧ್ಯಾವಸಾನಗಳಲ್ಲಿ, ತ್ರಿಕತ್ರಿಕವಿರಹಾತ್—ಮೂರು ಮೂರು ಕಲೆಗಳನ್ನು ತಳ್ಳುವುದರಿಂದ, ತ್ರಿಶೂನ್ಯಂ— ಆದಿಶೂನ್ಯ-ಮಧ್ಯಶೂನ್ಯ-ಅಂತ್ಯಶೂನ್ಯ-ಎಂಬ ಮೊದಲಿನ ಮೂರುಶೂನ್ಯಗಳೂ, ಭೂಯಃ—ತಿರುಗಿಯೂ, ಏಕೈಕಹಾನೇಃ—ಕೊನೆಯ ಮೂರುಕಲೆಗಳೊಳಗೆ ಆದಿಮಧ್ಯಾವಸಾನಗಳಲ್ಲಿ ಒಂದೊಂದನ್ನು ತಳ್ಳುವುದರಿಂದ, ತ್ರಿಶೂನ್ಯಂ—ಆದಿಶೂನ್ಯ-ಮಧ್ಯಶೂನ್ಯ-ಅಂತ್ಯಶೂನ್ಯ ಎಂಬ ಮೇಲಿನ ಮೂರು ಶೂನ್ಯಗಳು, ಇತಿ— ಹೀಗೆ ಇವುಗಳ ಸಂಯೋಜನದಿಂದ ಏರ್ಪಡುವ, ಶೂನ್ಯಷಟ್ಕಂ—ಶೂನ್ಯಗಳಾರರ ಸಮುದಾಯವು, ಗುರುಭಿಃ—ಆಚಾರ್ಯರಿಂದ, ಜ್ಞಾಯತೇ—ತಿಳಿಯಲ್ಪಡುತ್ತದೆ. ॥೩೫॥

**ಅವತರಣಿಕೆ**— ಹನ್ನೆರಡು ಕಲೆಗಳುಳ್ಳ ಪ್ರಾಸಾದಮಂತ್ರದ ಪ್ರಸ್ತಾರಕ್ರಮವನ್ನೂ, ಧ್ಯಾನಕ್ರಮವನ್ನೂ ಮೂವತ್ತಾರನೆಯ ಶ್ಲೋಕದಲ್ಲಿ ಹೇಳುತ್ತಾರೆ. (ಪ್ರಸ್ತಾರ— ಕಲೆಗಳಸ್ವರೂಪ)

**ಘೋಷೋ ಮೇಧಾ ಕ್ಷಮಾಖ್ಯೋ ವಿಷಮಥ ಚ ತತಶ್ಚೇತನಾ ಚಂದ್ರ ಖಂಡಂ**
**ತ್ರ್ಯಶ್ರಂ ದೃಗ್ವೃತ್ತಸೀರೋಽರುಣಕಿರಣಹಲಸ್ಸೇಂದುಸೀರಃ ಕ್ರಮೇಣ ।**
**ವೃತ್ತಾರ್ಕತ್ರಿಶಿಖಂ ದ್ವಿಬಿಂಬಕಲಿತಾ ರೇಖಾ ದ್ವಿಕುಬ್ಜೋನ್ಮನಾ**
**ಸಾಕಾರಂ ಮನಸಾ ಸ್ಮರೇದಪಿ ಕಲಾಃ ಪ್ರತ್ಯೇಕಮರ್ಕೇ ಶಿವೇ ॥೩೬॥**

**ಟೀಕೆ**— ಘೋಷಃ—ಶಿವಬೀಜವಾದ ಹಕಾರವು, ಮೇಧಾ—೧ ನೆಯ ಕಲೆಯಾದ ಔಕಾರವು, ಕ್ಷಮಾಖ್ಯಃ—೨ ನೆಯಕಲೆಯಾದ ಊಕಾರವು, ವಿಷಂ-೩ ನೆಯ ಕಲೆಯಾದ ಮಕಾರವು, ಅಥ ಚ ತತಶ್ಚೇತನಾ—೪ ನೆಯಕಲೆಯಾದ ಬಿಂದುವು-(೦), ಚಂದ್ರಖಂಡಂ—೫ ನೆಯಕಲೆಯಾದ ಅರ್ಧಚಂದ್ರನು-(◡), ತ್ರ್ಯಶ್ರಂ—೬ ನೆಯಕಲೆಯಾದ ನಿರೋಧಿನಿಯೆಂಬ ತ್ರಿಕೋಣವು-(△), ದೃಗ್ವೃತ್ತಸೀರಂ—ಎರಡುಪಕ್ಕಗಳಲ್ಲಿಯೂ ಬಿಂದುವುಳ್ಳ ನೇಗಲಿನಂತಿರುವ ಏಳನೆಯ ಕಲೆಯಾದ ನಾದವು, ಅರುಣಕಿರಣಹಲಃ—ಬಲಪಾರ್ಶ್ವದಲ್ಲಿಮಾತ್ರವೇ ಬಿಂದುವುಳ್ಳ ನೇಗಲಿನಂತಿರುವ ಎಂಟನೆಯಕಲೆಯಾದ ನಾದಾಂತವು. ಸೇಂದುಸೀರಃ—ಎಡಪಾರ್ಶ್ವದಲ್ಲಿಮಾತ್ರವೇ ಬಿಂದುವುಳ್ಳ ನೇಗಲಿನಂತಿರುವ ಒಂಬತ್ತನೆಯಕಲೆಯಾದ ಶಕ್ತಿಯು, ವೃತ್ತಾರ್ಕತ್ರಿಶಿಖಂ—ಬಲಪಾರ್ಶ್ವದಲ್ಲಿ ಬಿಂದುವುಳ್ಳ ತ್ರಿಶೂಲದಂತಿರುವ, ೧೦ ನೆಯಕಲೆಯಾದ ವ್ಯಾಪಿನಿಯು, ದ್ವಿಬಿಂಬಕಲಿತಾ—ಎರಡುಪಕ್ಕಗಳಲ್ಲಿಯೂ ಬಿಂದುವುಳ್ಳ, ದ್ವಿಕುಬ್ಜಾ ರೇಖಾ—೧೧ ನೆಯಕಲೆಯಾದ ಎರಡು ವಕ್ರರೇಖೆಗಳೆಂಬ ಸಮನೆಯು, (ಬಿಂದುವಿಲಸದೃಜುರೇಖಾಉನ್ಮನಾ)—ಬಿಂದುವುಳ್ಳ ೧೨ ನೆಯಕಲೆಯಾದ ಉನ್ಮನಿಯು, ಏವಂ—ಈ ರೀತಿಯಾಗಿ, ಅರ್ಕೇ ಶಿವೇ—ದ್ವಾದಶಕಲಾಪ್ರಾಸಾದಮಂತ್ರದಲ್ಲಿ, ಕಲಾಃ—ಮೇಧೆ ಮೊದಲಾದ ಕಲೆಗಳನ್ನು, ಪ್ರತ್ಯೇಕಂ—ಒಂದೊಂದನ್ನಾಗಿ, ಮನಸಾ—ಮನಸ್ಸಿನಿಂದ, ಸಾಕಾರಂ—ಆಕಾರಸಹಿತವಾಗಿ, ಸ್ಮರೇತ್—ಧ್ಯಾನಿಸಬೇಕು. ॥೩೬॥

**ಅವತರಣಿಕೆ**— ಪ್ರಸಾದಮಂತ್ರದಲ್ಲಿರುವ ಕಲೆಗಳ ಸ್ಥಾನವಿಶೇಷಗಳನ್ನೂ, ಷಡಧ್ವದಲ್ಲಿ ಅವುಗಳ ವ್ಯಾಪ್ತಿವಿಶೇಷವನ್ನೂ, ಮತ್ತು ಅವುಗಳ ಕಾರಣೇಶ್ವರರನ್ನೂ ಮೂವತ್ತೇಳನೆಯ ಶ್ಲೋಕದಲ್ಲಿ ಹೇಳುತ್ತಾರೆ.—

**ವಸ್ತೇರ್ನಾದೋಽಥನಾಭೇಸ್ತ್ರಿಪದಮುಜಗೃಹೇ ಹೃತ್ಕಜೇಸ್ಪ್ರಾಕೃತಾಂತಂ**
**ವಿಷ್ಣುಂ ಕಂಠೇ ಕಲಾಂತಂ ರಸಮುಪಿಚಪಶುಸ್ತಾಲುನಿ ಗ್ರಂಥಿರುದ್ರಃ ।**
**ವಿದ್ಯೇಶೌ ಬಿಂದ್ವನಂತೌ ಭುವಿಚ ಶ್ರುತಿಕಲಾ ಬ್ರಹ್ಮರಂಧ್ರೇ ಸದೇಶಾಃ**
**ಶಕ್ತ್ಯಂತಂ ಶಕ್ತಿವೇದಾ ಉಪರಿ ವಸತಿ ಭಾನ್ವಂಗುಳಾನ್ನಾಹತೇಶಾಃ॥೩೭॥**

**ಟೀಕೆ**— ನಾದಃ—ಶಿವಬೀಜವಾದ ಹಕಾರವು, ವಸ್ತೇರ್ನಾಭೇರ್ವಸತಿ— ಗುಹ್ಯಪ್ರದೇಶವನ್ನು ಆರಂಭಿಸಿ ನಾಭಿಯವರೆಗೆ ವ್ಯಾಪಿಸಿರುತ್ತದೆ. ಅಥ—ಅನಂತರದಲ್ಲಿ, ಪ್ರಾಕೃತಾಂತಂ ತ್ರಿಪದಂ—ಪೃಥಿವಿಯನ್ನು ಆರಂಭಿಸಿ ಪ್ರಕೃತಿಯವರೆಗೆ ವ್ಯಾಪ್ತಿಯುಳ್ಳ ಔಕಾರವು, ಅಜಗೃಹೇ—ತನಗೆ ಕಾರಣೇಶ್ವರನಾದ ಬ್ರಹ್ಮನು ವಾಸಮಾಡುವ ಸ್ಥಳವಾದ, ಹೃತ್ಕಜೇ—ಹೃದಯಕಮಲದಲ್ಲಿ, ವಸತಿ—ವಾಸಮಾಡುತ್ತದೆ. (ಇರುತ್ತದೆ) ಕಲಾಂತಂ—ಪ್ರಕೃತಿಗೆ ಮೇಲೆ ಕಲಾತತ್ತ್ವದವರೆಗೆ ವ್ಯಾಪಿಸಿ, ವಿಷ್ಣುಂ—ವಿಷ್ಣುವನ್ನು ಕಾರಣೇಶ್ವರನಾಗಿ ಪಡೆದಿರುವ, ರಸಂ—ಉಕಾರವು, ಕಂಠೇ ವಸತಿ—ಕಂಠಸ್ಥಾನದಲ್ಲಿ ಇರುತ್ತದೆ. ಗ್ರಂಥಿರುದ್ರಃ—ಅದರ ಮೇಲೆ ಮಾಯಾತತ್ತ್ವದವರೆಗೆ ವ್ಯಾಪಿಸಿ ರುದ್ರನನ್ನು ಕಾರಣೇಶ್ವರನಾಗಿ ಪಡೆದಿರುವ, ಪಶುಃ—ಮಕಾರವು, ತಾಲುನಿ ವಸತಿ—ತಾಲುಸ್ಥಾನದಲ್ಲಿ ಇರುತ್ತದೆ. ವಿದ್ಯೇಶೌ—ಅದರಮೇಲೆ ಶುದ್ಧವಿದ್ಯೆ ಈಶ್ವರ ಇವರಿಬ್ಬರನ್ನೂ ವ್ಯಾಪಿಸಿಕೊಂಡಿರುವ, ಬಿಂದ್ವನಂತೌ—ಅನಂತೇಶ್ವರನನ್ನು ಕಾರಣೇಶ್ವರನಾಗಿ ಪಡೆದಿರುವ ಬಿಂದುವು, ಭ್ರುವಿ—ಹುಬ್ಬಿನಸ್ಥಾನದಲ್ಲಿ, ವಸತಿ—ಇರುತ್ತದೆ. ಶಕ್ತ್ಯಂತಂ—ಅದರ ಮೇಲೆ ಸಾದಾಖ್ಯ-ಶಕ್ತಿ-ಎಂಬ ಎರಡು ತತ್ತ್ವಗಳನ್ನು ವ್ಯಾಪಿಸಿಕೊಂಡಿರುವ ಸದೇಶಾಃ—ಸದಾಶಿವನನ್ನು ಕಾರಣೇಶ್ವರನಾಗಿ ಪಡೆದಿರುವ, ಶ್ರುತಿಕಲಾಃ—ಅರ್ಧಚಂದ್ರ-ನಿರೋಧಿನಿ-ನಾದ-ನಾದಾಂತಗಳೆಂಬ ನಾಲ್ಕು ಕಲೆಗಳು, ಬ್ರಹ್ಮರಂಧ್ರೇ—ಬ್ರಹ್ಮರಂಧ್ರಸ್ಥಾನದಲ್ಲಿ, ವಸಂತಿ—ಇರುತ್ತವೆ. ಉಪರಿಭಾನ್ವಂಗುಳಾತ್—ಅದರಮೇಲೆ ದ್ವಾದಶಾಂತದವರೆಗೆ ವ್ಯಾಪ್ತಿಯುಳ್ಳ, ನಾಹತೇಶಾಃ—ಅನಾಹತಶಿವನನ್ನು ಕಾರಣೇಶ್ವರನಾಗಿ ಪಡೆದಿರುವ, ಶಕ್ತಿವೇದಾಃ—ಶಕ್ತಿ-ವ್ಯಾಪಿನಿ-ಸಮನಾ-ಉನ್ಮನಾ ಎಂಬ ನಾಲ್ಕು ಕಲೆಗಳು, ಉಪರಿ ವಸಂತಿ—ಮೇಲೆ ಇರುತ್ತವೆ.

**ಅವತರಣಿಕೆ**— ಧ್ಯಾನಕ್ಕೆ ಆಲಂಬನವಾದ ಕಲೆಗಳ ವರ್ಣವಿಶೇಷಗಳನ್ನು ಧ್ಯಾನಸೌಕರ್ಯಕ್ಕಾಗಿ ಮೂವತ್ತೆಂಟನೆಯ ಶ್ಲೋಕದಲ್ಲಿ ತೋರಿಸುತ್ತಾರೆ. ಹೀಗೆ ಮೂವತ್ತುಮೂರನೆಯ ಶ್ಲೋಕಮೊದಲುಗೊಂಡು ಇಲ್ಲಿಯವರೆಗೆ ಪ್ರಾಸಾದ ಮಂತ್ರದ ಉದ್ಧಾರ, ಮಾತ್ರೆ, ಪ್ರಸ್ತಾರ, ವ್ಯಾಪ್ತಿ, ಕಾರಣನಾಮಧೇಯ, ಸ್ಥಾನ, ಶೂನ್ಯ, ವರ್ಣ ಇವುಗಳನ್ನು ಹೇಳಿದಂತಾಯಿತು.

**ಮೇಧಾದಯೋ ವಹ್ನಿಶಿಖಾಪ್ರಭಾರ್ಕ**
**ಚಂದ್ರಾಭವಿದ್ಯುದ್ದ್ಯುತಿ ದೀಪಭಾಸಃ ।**

**ಅರ್ಧೇಂದುಭೌ ದಂಡತದಂತರತ್ನ**
**ವಿದ್ಯುತ್ಪ್ರಭೋಽರ್ಧ್ವಗಂ ಶತಭಾನುಭಾಸಃ ||೩೮||**

**ಟೀಕೆ** —ಮೇಧಾದಯಃ—ಮೇಧೆಯೆನಿಸಿಕೊಳ್ಳುವ ಔಕಾರ, ಊಕಾರ, ಮಕಾರ, ಬಿಂದು ಈ ನಾಲ್ಕು ಕಲೆಗಳೂ, ವಹ್ನಿಶಿಖಾಪ್ರಭಾ ಅರ್ಕಚಂದ್ರಾಭ ವಿದ್ಯುದ್ದ್ಯುತಿ ದೀಪಭಾಸಃ—(ಕ್ರಮವಾಗಿ) ಅಗ್ನಿಜ್ವಾಲೆಯ ವರ್ಣವುಳ್ಳುದಾಗಿಯೂ, ಸೂರ್ಯಚಂದ್ರರ ವರ್ಣವುಳ್ಳುದಾಗಿಯೂ, ಮಿಂಚಿನಬಣ್ಣವುಳ್ಳುದಾಗಿಯೂ, ದೀಪದಬಣ್ಣವುಳ್ಳುದಾಗಿಯೂ ಆಗಿರುವುವು. ಅರ್ಧೇಂದುಭೌ—(ಅನಂತರದಲ್ಲಿ ಅರ್ಧಚಂದ್ರ-ನಿರೋಧಿನಿ-ಈ ಎರಡು ಕಲೆಗಳೂ) ಅರ್ಧಚಂದ್ರನ ಬಣ್ಣವುಳ್ಳುವುಗಳಾಗಿರುವುವು. ದಂಡತದಂತ—(ಅನಂತರದಲ್ಲಿ) ನಾದ-ನಾದಾಂತ ಈ ಎರಡು ಕಲೆಗಳೂ, ರತ್ನವಿದ್ಯುತ್ಪ್ರಭಾ—(ಕ್ರಮವಾಗಿ) ರತ್ನದ-ಮತ್ತು-ಮಿಂಚಿನ ಬಣ್ಣವುಳ್ಳುವುಗಳಾಗಿರುವುವು. ಊರ್ಧ್ವಗಂ—ಅದರಮೇಲೆ-ಶಕ್ತಿ-ವ್ಯಾಪಿನಿ-ಸಮನಾ-ಉನ್ಮನಾ ಈ ನಾಲ್ಕು ಕಲೆಗಳೂ, ಶತಭಾನುಭಾಸಃ—ಅನೇಕಸೂರ್ಯರ ಪ್ರಕಾಶವುಳ್ಳುವುಗಳಾಗಿರುವುವು. ||೩೮||

**ಅವತರಣಿಕೆ**— ಹಿಂದೆ ಹೇಳಿದ ಕ್ರಮದಲ್ಲಿ ದೀಕ್ಷೆಯನ್ನು ಪಡೆದಿರುವ ಆಚಾರ್ಯರು ನಿಷ್ಕಳಪ್ರಾಸಾದಮಂತ್ರವನ್ನೇ ಜಪಿಸಬೇಕೆಂದೂ, ಹಾಗೆ ಜಪಿಸುವವರು ಶುದ್ಧಭುವನಭೋಗಗಳನ್ನು ಅನುಭವಿಸಿ ಅನಂತರದಲ್ಲಿ ಪರಶಿವನ ತೇಜಸ್ಸ್ವರೂಪಪ್ರಾಪ್ತಿಯೆಂಬ ಮುಕ್ತಿಯನ್ನು ಪಡೆವರೆಂದೂ ಮೂವತ್ತೊಂಬತ್ತನೆಯ ಶ್ಲೋಕದಲ್ಲಿ ಹೇಳುತ್ತಾರೆ.—

**ಮಂತ್ರಂ ಷಟ್ಕಲಮಾಸ್ಯರಂಧ್ರಮುಕುಳಾದ್ಯಾಧಾರಮೈಶಂ ಕ್ರಮಾತ್**
**ತುರ್ಯಂ ಧಾಮ ವಿಶಂತಮೇವಮಸಕೃದ್ಯಸ್ಯ ಪ್ರಸಾದಾದ್ಧಿಯಾ।**
**ಸಿಕ್ತಾತ್ಸೌಧರಸೈಃ ಪ್ರಯಾಂತ್ಯಭಿಮತಾನ್ಯಂತೇ ಯದೀಯಂ ಮಹಃ**
**ಶಂಭೋಸ್ತಸ್ಯ ನಮಶ್ಶಿವಾಯ ಸುಮನುರ್ಜಪ್ಯಸ್ಸತಾರಸ್ಸತಾಂ ||೩೯||**

**ಟೀಕೆ**— ಷಟ್ಕಲಂ—ಹೃದಯ ಮುಂತಾದ ಆರು ಅಂಗಗಳೊಡನೆ ಕೂಡಿದುದಾಗಿಯೂ ದೀರ್ಘಸ್ವರಯುಕ್ತವಾಗಿಯೂ ಇರುವ, ಮತ್ತು, ಆಸ್ಯರಂಧ್ರಮುಕುಳಾದ್ಯಾಧಾರಂ—ಲಲಾಟ-ಬ್ರಹ್ಮರಂಧ್ರ-ಹೃದಯ ಮುಂತಾದ ಸ್ಥಾನಗಳಲ್ಲಿರುವ ಕಮಲಮುಕುಳಗಳನ್ನು ಆಧಾರವಾಗಿ ಪಡೆದಿರುವ, ಮತ್ತು ತುರ್ಯಂ ಧಾಮ-ದ್ವಾದಶಾಂತಸ್ಥಾನದಲ್ಲಿ ಹೋಗಿ ಪರಮಶಿವನ ತೇಜಸ್ಸನ್ನು, ಕ್ರಮಾತ್—ಬ್ರಹ್ಮಾದಿಕಾರಣತ್ಯಾಗಕ್ರಮಾನುಸಾರವಾಗಿ ಹೃದಯಾದಿಸ್ಥಾನತ್ಯಾಗಕ್ರಮದಿಂದ,

ವಿಶಂತಂ—ಪ್ರವೇಶಿಸುತ್ತಿರುವ, ಐಶಂ—ಪರಮಶಿವಸಂಬಂಧಿಯಾದ, ಮಂತ್ರಂ—ನಾದಸ್ವರೂಪವಾದ ಪ್ರಾಸಾದಮಂತ್ರವನ್ನು, ಅಸಕೃದ್ಧಿಯಾ—ಯಾವಾಗಲೂ ವಿಚ್ಛೇದವಿಲ್ಲದೆ ನಡೆಯಿಸುವ ಭಾವನಾಬುದ್ಧಿಯಿಂದ, ಏವಂ—ಈ ರೀತಿಯಾಗಿ ಉಕ್ತಕ್ರಮದಲ್ಲಿ, (ಭಾವಯಿತ್ವಾ)—ಚೆನ್ನಾಗಿ ಧ್ಯಾನಮಾಡಿ, ಸೌಧರಸೈಃ—ಹೀಗೆ ಪ್ರತಿನಿತ್ಯವೂ ಮಾಡುವ ಧ್ಯಾನಬಲದಿಂದ ಬ್ರಹ್ಮರಂಧ್ರದ ಮೇಲುಭಾಗದಲ್ಲಿರುವ ನಿಷ್ಕಳಶಕ್ತಿಕ್ಷೋಭವುಂಟಾಗಿ ಅದರಿಂದ ಸ್ರವಿಸಿರುವ ಅಮೃತರಸಗಳಿಂದ ಸಿಕ್ತಾಃ—ಒಳಗೂ ಹೊರಗೂ ಚೆನ್ನಾಗಿ ಅಭಿಷೇಕಮಾಡಲ್ಪಟ್ಟ ಪುರುಷರು, ಯಸ್ಯ—ಯಾವ ಪರಶಿವನ, ಪ್ರಸಾದಾತ್—ಅನುಗ್ರಹದಿಂದ, ಅಭಿಮತಾನಿ—ಅಭೀಷ್ಟಗಳಾದ ಶುದ್ಧಭುವನಗಳನ್ನು, ಪ್ರಯಾಂತಿ—ಹೊಂದುತ್ತಾರೆಯೋ, (ಕಿಂಚ)—ಮತ್ತು, ಅಂತೇ—ಶುದ್ಧಭುವನದ ಭೋಗಾನಂತರದಲ್ಲಿ, ಯದೀಯಂ ಮಹಶ್ಚ—ಯಾವ ಪರಶಿವನ ಸಂಬಂಧಿಯಾದ ದಿವ್ಯತೇಜಸ್ಸನ್ನೂ, ಪ್ರಯಾಂತಿ—ಹೊಂದುತ್ತಾರೆಯೋ, ತಸ್ಯ-ಶಂಭೋಃ—ಅಂಥ ಪರಶಿವನ, ನಮಶ್ಶಿವಾಯ ಸುಮನುಃ—"ನಮಶ್ಶಿವಾಯ" ಎಂಬ ಸರ್ವೋತ್ಕೃಷ್ಟಮಂತ್ರವು, ಸತಾರಃ—ಪ್ರಣವಸಹಿತವಾಗಿ, ಸತಾಂ-ಶಿವದೀಕ್ಷೆಯನ್ನು ಪಡೆದಿರುವ ಸಜ್ಜನರಿಗೆ, ಜಪ್ಯಃ—ಯಾವಾಗಲೂ ಜಪಿಸುವುದಕ್ಕೆ ಯೋಗ್ಯವಾಗಿರುವುದು. ||೩೯||

**ಅವತರಣಿಕೆ**= ದೀಕ್ಷೆಯನ್ನು ಪಡೆದವನು ಮಾನಸಸ್ನಾನವನ್ನು ಮಾಡುವ ಕ್ರಮವನ್ನು ನಲವತ್ತನೆಯ ಶ್ಲೋಕದಲ್ಲಿ ತೋರಿಸುತ್ತಾರೆ. ಮೂಲಮಂತ್ರವೆನಿಸಿಕೊಂಡಿರುವ ಪ್ರಾಸಾದಮಂತ್ರವನ್ನು ಮೂಲಾಧಾರಮೊದಲುಗೊಂಡು ನಾದಾಂತವಾಗಿ ಉಚ್ಚರಿಸಿ ಶಕ್ತಿಕ್ಷೋಭೆಯನ್ನು ಮಾಡಿ ಅಲ್ಲಿಂದ ಸುರಿಸಲ್ಪಟ್ಟ ಹೆಚ್ಚಿದ ಅಮೃತಪ್ರವಾಹಗಳಿಂದ ತನ್ನ ದೇಹವನ್ನು ಒಳಗೂ ಹೊರಗೂ ಅಭಿಷೇಕ ಮಾಡಿದಂತೆ ಭಾವಿಸುವಿಕೆಯೇ ಮಾನಸಸ್ನಾನವೆನಿಸಿಕೊಳ್ಳುವುದು.

**ಮೂಲಾಣುಂ ಲಯನಾಂತಮುಚ್ಚರತಿ ಯಶ್ಶಕ್ತಿಂ ಜಗತ್ಕಾರಣಂ**
**ಕ್ಷುಬ್ಧ್ವಾ ತತ್ಪ್ರಸೃತಾಮೃತೌಘವಿಸರೈಃ ಪ್ರಾಣಾ೯ ನಿಯಮ್ಯ ಸ್ಥಿತಃ |**
**ಮಧ್ಯೇ ಸಂಪ್ಲವನಾತ್ ಸ್ವದೇಹಮಚಿರಾದಾಗತ್ಯ ನಾಡ್ಯಾ ಬಹಿಃ**
**ಸೋಂತಶ್ಚಾಪ್ಲವತೀಹ ಮಾನಸಮಿದಂ ಸ್ನಾನಂ ತದಾಪ್ಯಾಯನಂ ||೪೦||**

**ಟೀಕೆ**= ಯಃ—ಯಾವ ದೀಕ್ಷಿತನು, ಪ್ರಾಣಾ೯ ನಿಯಮ್ಯ—ಪ್ರಾಣಾದಿ ವಾಯುಗಳನ್ನು ಪ್ರಾಣಾಯಾಮದಿಂದ ಅಡಗಿಸಿ (ತಡೆದು), ಸ್ಥಿತಸ್ಸ೯—ಇರುವನಾಗಿ, ಮೂಲಾಣುಂ—ಮೂಲಾಧಾರಮೊದಲುಗೊಂಡು ಉಚ್ಚರಿಸಲ್ಪಡುವ ಮೂ

ಲಮಂತ್ರರೂಪವಾದ ಪ್ರಾಸಾದಮಂತ್ರವನ್ನು, ಲಯನಾಂತಂ—ದ್ವಾದಶಾಂತ ಸ್ಥಾನದವರೆಗೆ, ಉಚ್ಚರತಿ—ಉಚ್ಚರಿಸುತ್ತಾನೆಯೋ, ಸಃ—ಅವನು (ಅಂಥ ಉಚ್ಚಾರಣಸಾಮರ್ಥ್ಯವನ್ನು ಮುಂದಿಟ್ಟುಕೊಂಡು ಪರಶಿವನೊಡನೆ ಪರಮಸಾಮ್ಯವೆಂಬ ಏಕೀಭಾವವನ್ನು ಭಾವಿಸುತ್ತಿರುವುದರಿಂದ, ಜಗತ್ಕಾರಣಂ—ಜಗತ್ತಿಗೆ ಉಪಾದಾನಕಾರಣವಾಗಿರುವ, ಶಕ್ತಿಂ—ಕುಟಿಲಾಶಕ್ತಿಯನ್ನು, ಕ್ಷುಬ್ಧ್ವಾ—ಕ್ಷೋಭಪಡಿಸಿ, ತತ್ರಸ್ರುತಾಮೃತೌಘವಿಸರೈಃ—ಅಲ್ಲಿಂದ ಸ್ರವಿಸುತ್ತಿರುವ ಅಮೃತಪ್ರವಾಹಗಳಿಂದ, ಸಂಪ್ಲವನಾತ್—ಚನ್ನಾಗಿ ನೆನಸೋಣದರಿಂದ, ಅಚಿರಾತ್—ಶೀಘ್ರವಾಗಿ, ನಾಡ್ಯಾ—ಬ್ರಹ್ಮನಾಡಿಯಿಂದ, ಮಧ್ಯೇ—ಶರೀರಮಧ್ಯದಲ್ಲಿ, ಆಗತ್ಯ—ಬಂದು, ಸ್ವದೇಹಂ—ತನ್ನ ದೇಹವನ್ನು, ಅಂತರ್ಬಹಿಶ್ಚ—ಒಳಗೂ ಹೊರಗೂ, ಆಪ್ಲವತಿ—ಚನ್ನಾಗಿ ಅಭಿಷೇಕಮಾಡುತ್ತಾನೆ. ತದಿದಂ ಸ್ನಾನಂ—ಹಾಗೆ ನಡೆಯಿಸಿದ ಈ ಸ್ನಾನವು, ಆಪ್ಯಾಯನಂ—ತೃಪ್ತಿಕಾರಿಯಾಗಿಯೂ ಪರಿಶುದ್ಧಿಕಾರಿಯಾಗಿಯೂ ಇರುವ, ಮಾನಸಂ ಸ್ನಾನಮಿತಿ—ಮಾನಸಸ್ನಾನವೆಂದು, ಇಹ—ಈ ಶೈವಶಾಸ್ತ್ರದಲ್ಲಿ, (ವಿದುಃ)—ತಿಳಿಯುತ್ತಾರೆ. ||೪೦||

**ಅವತರಣಿಕೆ—** ಶಿವದೀಕ್ಷೆಯನ್ನು ಪಡೆದಿರುವವನು ಭೂತಶುದ್ಧಿಯನ್ನು ಮಾಡಿಕೊಳ್ಳುವ ಸಮಯದಲ್ಲಿ ತನ್ನ ದೇಹವನ್ನು ಲೋಕವಿಲಕ್ಷಣವಾದ ವಟವೃಕ್ಷರೂಪವಾಗಿ ಭಾವಿಸಬೇಕೆಂದು ನಲವತ್ತೊಂದನೆಯ ಶ್ಲೋಕದಲ್ಲಿ ಉಪದೇಶಿಸುತ್ತಾರೆ. ಲೋಕವಿಲಕ್ಷಣವೆಂದರೆ ಲೋಕದಲ್ಲಿ ಪ್ರಸಿದ್ಧವಾಗಿರುವ ವಟವೃಕ್ಷಕ್ಕಿಂತಲೂ ಈ ಶರೀರವೆಂಬ ವಟವೃಕ್ಷವು ವಿಜಾತೀಯವಾಗಿರುವುದೆಂದು ಅಭಿಪ್ರಾಯವು. ಲೋಕದಲ್ಲಿರುವ ವೃಕ್ಷಗಳಿಗೆಲ್ಲಾ ಕೆಳಗೆ ಬೇರೂ ಮೇಲೆ ಶಾಖೆಗಳೂ ಇರುವುವೆಂದು ಸುಪ್ರಸಿದ್ಧವಾಗಿರುವುದು; ಆದರೆ ಈ ಶರೀರವೆಂಬ ವಟವೃಕ್ಷಕ್ಕೆ ಬೇರು ಮೇಲೆಯೂ ಶಾಖೆಗಳು ಕೆಳಗೂ ಇರುವುವಾದುದರಿಂದ ಇದು ವಿಜಾತೀಯವಾಗಿರುವುದೆಂದು ಹೇಳಲು ಅಡ್ಡಿಯಿಲ್ಲ. ಮೇಲಿರುವ ಮಾಯಾತತ್ತ್ವವೇ ಇದಕ್ಕೆ ಬೇರಾಗಿರುವುದೆಂದೂ, ಕೆಳಗಿರುವ ಉಳಿದ ತತ್ತ್ವಗಳೇ ಶಾಖೆಗಳಾಗಿರುವುವೆಂದೂ ಸಮಾಧಾನವನ್ನು ತಿಳಿಯಬೇಕು.

**ಸ್ವಂ ದೇಹಂ ಭೂತಬೀಜಂ ಹರಿವಿಧಿರಚಿತಂ ಸ್ವಾಂಕುರಂ ಕರ್ಮಮೂಲಂ**
**ಭವ್ಯಂ ಕಾಲಾದಿಸಾರಂ ವಿಷಯದಳಗತಂ ಖಾದಿಶಾಖೋಪಶಾಖಂ ||**
**ಭಾವಾಶೇಷಪ್ರಸೂನಂ ವ್ಯವಸಿತಸುಫಲಂ ಪುಂವಿಹಂಗೋಪಭೋಗ್ಯಂ**
**ನ್ಯಗ್ರೋಧಂ ಚೋರ್ಧ್ವಮೂಲಂ ವಿಷಯುರಸಮುವಾಕ್ಯಾಖಿನಂ ಭಾವ**
**ಯೇಚ್ಚ ||೪೧||**

**ಟೀಕೆ**= (ಕಿಂಚ)—ಮತ್ತು, (ಸ ದೀಕ್ಷಿತಃ)—ಆ ದೀಕ್ಷಿತನು, (ಭೂತ ಶುದ್ಧಿಸಮಯೇ)—ಭೂತಶುದ್ಧಿಮಾಡಿಕೊಳ್ಳುವ ಸಮಯದಲ್ಲಿ, ಸ್ವಂ ದೇಹಂ— ಭೌತಿಕವಾದ ತನ್ನ ದೇಹವನ್ನು, ಭೂತಬೀಜಂ—ಪಂಚಭೂತಗಳನ್ನೇ ಬೀಜ ವಾಗಿ ಪಡೆದಿರುವಂಥದಾಗಿಯೂ, ಹರಿವಿಧಿರಚಿತಂ—ಬ್ರಹ್ಮನಿಂದ ಸೃಷ್ಟಿಸಲ್ಪಟ್ಟುದ ನ್ನಾಗಿಯೂ, ವಿಷ್ಣುವಿನಿಂದ ರಕ್ಷಿಸಲ್ಪಟ್ಟುದನ್ನಾಗಿಯೂ, ಸ್ವಾಂಕುರಂ—ತನ್ನನ್ನೇ ಮೊಳಕೆಯಾಗಿ ಪಡೆದಿರುವಂಥದಾಗಿಯೂ; ಕರ್ಮಮೂಲಂ—ಪುಣ್ಯಪಾಪಗಳೆಂಬ ಕರ್ಮಗಳನ್ನೇ ಪಕ್ಕದ ಬೇರುಗಳಾಗಿ ಪಡೆದಿರುವಂಥದಾಗಿಯೂ, ಭವ್ಯಂ—ಕ್ಷೇಮ ದಿಂದ ಬೆಳೆಯುವಂಥದಾಗಿಯೂ, ಕಾಲಾದಿಸಾರಂ—ಕಾಲ ಮುಂತಾದ ತತ್ತ್ವ ಗಳನ್ನೇ ದೃಢತರವಾದ ಬಲವಾಗಿ ಪಡೆದಿರುವಂಥದಾಗಿಯೂ, ವಿಷಯದಳ ಗತಂ—ಶಬ್ದಾದಿವಿಷಯಗಳನ್ನೇ ಎಲೆಗಳಾಗಿ ಪಡೆದಿರುವಂಥದಾಗಿಯೂ, ಖಾದಿ ಶಾಖೋಪಶಾಖಂ—ಇಂದ್ರಿಯಾದಿಗಳನ್ನೇ ದೊಡ್ಡಶಾಖೆ ಚಿಕ್ಕಶಾಖೆಗಳಾಗಿ ಪಡೆ ದಿರುವಂಥದಾಗಿಯೂ, ಭಾವಾಶೇಷಪ್ರಸೂನಂ—ಮೊದಲು ಹೇಳಿದ ಐವತ್ತು ಬಗೆಯಾದ ಭಾವಗಳನ್ನೇ ಪುಷ್ಪಗಳಾಗಿ ಪಡೆದಿರುವಂಥದಾಗಿಯೂ, ವ್ಯವಸಿತ ಸುಫಲಂ—ಬುದ್ಧಿಯ ಅಧ್ಯವಸಾಯಸಂಕಲ್ಪಗಳನ್ನೇ ಒಳ್ಳೆಯ ಪುಷ್ಪಗಳಾಗಿ ಪಡೆದಿರುವಂಥದಾಗಿಯೂ, ವಿಷಯರಸಂ—ಭೋಗ್ಯವಸ್ತುಗಳನ್ನೇ ರಸವಾಗಿ ಪಡೆದಿರುವಂಥದಾಗಿಯೂ, ಪುಂವಿಹಂಗೋಪಭೋಗ್ಯಂ—ಪುರುಷನೆಂಬ ಪಕ್ಷಿ ಯಿಂದ ಭುಜಿಸಲ್ಪಡುತ್ತಿರುವಂಥದಾಗಿಯೂ, ಊರ್ಧ್ವಮೂಲಂ—ಮೇಲೆ ಇರುವ ಮಾಯೆಯನ್ನೇ ಮುಖ್ಯವಾದ ಬೇರಾಗಿ ಪಡೆದಿರುವಂಥದಾಗಿಯೂ, ಅವಾಕ್ಶಾ ಖಿನಂ—ಕೆಳಗಡೆ ಇರುವ ತತ್ತ್ವಗಳನ್ನೇ ಗೊನೆಗಳಾಗಿ ಪಡೆದಿರುವಂಥದಾ ಗಿಯೂ ಇರುವ, ನ್ಯಗ್ರೋಧಂ—ವಿಲಕ್ಷಣವಾದ ವಟವೃಕ್ಷವನ್ನಾಗಿ, ಭಾವ ಯೇತ್—ಭಾವಿಸಬೇಕು. ||೪೧||

**ಅವತರಣಿಕೆ**= ಶೋಷಣ-ದಾಹನ-ಪ್ಲಾವನಗಳೆಂಬ ಸಂಸ್ಕಾರವಿಶೇಷ ಗಳಿಂದ ಶರೀರವನ್ನು ಶುದ್ಧಪಡಿಸಿ ಅನಂತರದಲ್ಲಿ ಮಾನಸಪೂಜೆಯನ್ನು ಮಾಡ ಬೇಕೆಂದು ನಲವತ್ತೆರಡನೆಯ ಶ್ಲೋಕದಲ್ಲಿ ಹೇಳುತ್ತಾರೆ.—

**ಕುಂಭಾಪೂರಕರೇಚಕಾರ್ಥಯುಗಳೈರ್ಹ್ಲಾವಮಾದಿಮಂತ್ರೈಃ ಪರಂ**
**ಭೂಮ್ಯಾದಿಸ್ಥಗುಣಸ್ಥಿತಿಕ್ರಮಯುತಂ ಪತ್ರಾದ್ಯಯೋಗಾನ್ವಿತಂ ।**
**ಶೋಷಾದ್ದಾಹನತಶ್ಚ ಭಸ್ಮವಿಗಮಾಚ್ಛಿದ್ಧಾಭ್ರಸಂಭಾವನಾತ್**
**ಶಕ್ತ್ಯಾಪ್ಲಾವಿತಮಂತ್ರವಿಗ್ರಹಯುತಃ ಪೂಜಾಂ ವಿದಧ್ಯಾದ್ಧೃದಿ ||೪೨||**

**ಟೀಕೆ**— ಕುಂಭಾಪೂರಕರೇಚಕಾರ್ಧಯುಗಳೈಃ—ಪೂರಕ-ಕುಂಭಕ-ರೇಚಕಗಳ ಮೊದಲಿನ ಅರ್ಧ ಮೇಲಿನ ಅರ್ಧಗಳಿಂದ ಕ್ರಮವಾಗಿ, ಭೂವ್ಯಾದಿಸ್ಥ—ಪೃಥಿವ್ಯಾದಿಪಂಚಭೂತಗಳಲ್ಲಿರುವ, ಗುಣಸ್ಥಿತಿಕ್ರಮಯುತಂ—ಗಂಧ-ರಸ-ರೂಪ-ಸ್ಪರ್ಶ-ಶಬ್ದಗಳೆಂಬ ಗುಣಗಳ ಸ್ಥಿತಿಕ್ರಮಸಹಿತವಾಗಿ, ಪತ್ರಾದ್ಯಯೋಗಾನ್ವಿತಂ—ಸ್ಥೂಲಗಳಾಗಿಯೂ ಸೂಕ್ಷ್ಮಗಳಾಗಿಯೂ ಇರುವ ಪತ್ರ-ಪುಷ್ಪ-ಫಲಗಳು ನಿವರ್ತಿಸಿದಂತೆ, ವಿಚಿಂತ್ಯ—ಭಾವಿಸಿ, ಹ್ಲಾಮಾದಿಮಂತ್ರೈಃ—'ಹ್ಲಾಂ' ಎಂಬುವೇ ಮೊದಲಾದ ಬೀಜಾಕ್ಷರಗಳುಳ್ಳ ನಿವೃತ್ತ್ಯಾದಿ ಪಂಚಕಲಾಮಂತ್ರಗಳನ್ನು, ಪಠನ್—ಉಚ್ಚರಿಸುತ್ತಿರುವವನಾಗಿ, ಶೋಷಾತ್—ಒಣಗಿಸುವುದರಿಂದಲೂ, ದಾಹನತಶ್ಚ—ಸುಟ್ಟುಹಾಕುವುದರಿಂದಲೂ, ಭಸ್ಮವಿಗಮಾತ್—ಸುಟ್ಟ ಬೂದಿಯನ್ನು ಚದರಿಸುವುದರಿಂದಲೂ ಒಣಗಿಸಿ,-ಸುಟ್ಟು,-ಬೂದಿಯನ್ನು ಚದರಿಸಿ, (ತತಃ)—ಅನಂತರದಲ್ಲಿ, ಶುದ್ಧಾಭ್ರಸಂಭಾವನಾತ್—ನಿರ್ಮಲವಾದ ಆಕಾಶವನ್ನು ಧ್ಯಾನಿಸುವುದರಿಂದ, ಶಕ್ತ್ಯಾ—ಕ್ಷೋಭೆಗೊಳಿಸಲ್ಪಟ್ಟ ಪರಾಶಕ್ತಿಯಿಂದ ಸ್ರವಿಸುತ್ತಿರುವ ಹೆಚ್ಚಾದ ಅಮೃತಧಾರೆಗಳಿಂದ, ಆಪ್ಲಾವಿತಮಂತ್ರವಿಗ್ರಹಯುತಃ—ಚನ್ನಾಗಿ ಅಭಿಷೇಕಮಾಡಲ್ಪಟ್ಟ ಮಂತ್ರನ್ಯಾಸಸಹಿತವಾದ ಶರೀರವುಳ್ಳವನಾಗಿ, ಹೃದಿ—ಹೃದಯಕಮಲದಲ್ಲಿ, ಪೂಜಾಂ—ಮಾನಸಪೂಜೆಯನ್ನು, ವಿದಧ್ಯಾತ್—ಮಾಡಬೇಕು. ||೪೨||

**ಅವತರಣಿಕೆ**— ಅಷ್ಟತ್ರಿಂಶತ್ಕಲಾನ್ಯಾಸದಲ್ಲಿ ಮಂತ್ರಕ್ರಮವನ್ನು ನಲವತ್ತುಮೂರನೆಯ ಶ್ಲೋಕದಲ್ಲಿ ಹೇಳುತ್ತಾರೆ.—

**ಈಶೇ ನಾಂನಾಂ ಚ ಹ್ಮಾಸ್ತುವೋಂ ಹೇಹಿದ್ರ್ಯಯಾನ್ನರೇಭ್ಯಭ್ಯರಭ್ಯರ್ವಭ್ಯದ್ರ**
**ಭ್ಯೋಃಘೋರೇ ವೇದಮಾಲೋ ಮಲಮಲ ಚ ಮಮಾ ವಾಮದೇವೇ ಮನೋ ಮಃ ।**
**ಮಿರ್ಮೋ ವೇ ತ್ರೀಣಿ ಮಾಂ ವೋದ್ಭವಯ ಚ ಹಿ ನಮಸ್ಸದ್ಯಮಂತ್ರೇ ಕಲಾಸ್ಸ್ಯುಃ**
**ಪಂಚಾಬ್ಧಿಶ್ಚಾಷ್ಟವಿಶ್ವೇಃಪ್ಯಹಿರಿತಿ ಚ ಯಥಾಸಂಖ್ಯಮಷ್ಟಾಧಿ ತ್ರಿಂಶತ್ ||೪೩||**

**ಟೀಕೆ**— ಈಶೇ—ವೇದದಲ್ಲಿ ಹೇಳಿರುವ ಈಶಾನಮಂತ್ರದಲ್ಲಿ, ನಾಂ-ನಾಂ ಹ್ಮಾ-ಸ್ತು-ವೋಂ—ಎಂಬ ಈ ಐದು ಅಕ್ಷರಗಳನ್ನು ಕೊನೆಯಲ್ಲಿ ಇಟ್ಟುಕೊಂಡಿರುವ ಪದಗಳವರೆಗೆ ಐದು ಭಾಗಮಾಡಿ, ನರೇ—ತತ್ಪುರುಷಮಂತ್ರದಲ್ಲಿ, ಹೇ-ಹಿ-

ದ್ರಃ-ಯಾತ್—ಎಂಬ ಈ ನಾಲ್ಕು ಅಕ್ಷರಗಳನ್ನು ಕೊನೆಯಲ್ಲಿ ಇಟ್ಟುಕೊಂಡಿರುವ ಪದಗಳವರೆಗೆ ನಾಲ್ಕುಭಾಗಮಾಡಿ, ಅಘೋರೇ—ಅಘೋರಮಂತ್ರದಲ್ಲಿ, ಭ್ಯಃ-ಭ್ಯಃ-ರ-ಭ್ಯಃ ರ್ವ-ಭ್ಯಃ-ದ್ರ-ಭ್ಯಃ—ಎಂಬ ಈ ಎಂಟು ಅಕ್ಷರಗಳನ್ನು ಕೊನೆಯಲ್ಲಿ ಇಟ್ಟುಕೊಂಡಿರುವ ಪದಗಳವರೆಗೆ ಎಂಟು ಭಾಗಮಾಡಿ, ವಾಮದೇವೇ—ವಾಮದೇವಮಂತ್ರದಲ್ಲಿ, ಮಃ-ಮಃ-ಮಃ-ಮಃ ಲ-ಮಃ-ಲ-ಮಃ-ಲ-ಮಃ-ಮಃ-ನಃ-ಮಃ—'ವೇದಮಾಃ' ಎಂಬ ಪದದಿಂದ ಲಬ್ಧಗಳಾಗಿರುವ ನಾಲ್ಕು ಮಕಾರಗಳೊಡನೆ ಸೇರಿಸುವುದರಿಂದ ಆಗುವ ಈ ಹದಿಮೂರು ಅಕ್ಷರಗಳನ್ನು ಕೊನೆಯಲ್ಲಿ ಇಟ್ಟುಕೊಂಡಿರುವ ಪದಗಳವರೆಗೆ ಹದಿಮೂರು ಭಾಗಮಾಡಿ, ಸದ್ಯಮಂತ್ರೇ—ಸದ್ಯೋಜಾತಮಂತ್ರದಲ್ಲಿ, ಮಿಃ-ಮಃ-ವೇ-ವೇ-ವೇ-ಮಾಂ-ಯ-ಮಃ—ಈ ಎಂಟು ಅಕ್ಷರಗಳನ್ನು ಕೊನೆಯಲ್ಲಿ ಇಟ್ಟುಕೊಂಡಿರುವ ಪದಗಳವರೆಗೆ ಎಂಟು ಭಾಗಮಾಡಿ, (ಏವಂ)—ಈರೀತಿಯಾಗಿ, (ತತ್ರತತ್ರ)—ಅಲ್ಲಲ್ಲಿ, (ಪದಾಂತೇಷು)—ಆ ಆ ವೈದಿಕಪದಗಳ ಕೊನೆಯಲ್ಲಿ, (ಶಶಿನ್ಯೈ ನಮಃ) (ಇತ್ಯಾದಿ ಕ್ರಮೇಣ)—ಇದೇ ಮೊದಲಾದ ಕ್ರಮದಲ್ಲಿ, (ನ್ಯಸ್ಯಮಾನಾಃ)—ನ್ಯಾಸಮಾಡಲ್ಪಡುವ, ಕಲಾಃ—ಕಲೆಗಳು, ಯಥಾಸಂಖ್ಯಂ—ಈಶಾನಾದಿಮಂತ್ರಕ್ರಮದಲ್ಲಿ, ಪಂಚ-ಅಬ್ಧಿ-ಅಷ್ಟ ವಿಶ್ವೇ-ಅಹಿಃ— ಐದು-ನಾಲ್ಕು-ಎಂಟು-ಹದಿಮೂರು-ಎಂಟು (ಈ ರೀತಿಯಲ್ಲಿ), ಅಷ್ಟಾಧಿತ್ರಿಂಶತ್-ಸ್ಯುಃ—ಮೂವತ್ತೆಂಟು ಆಗುವುವು. ||೪೩||

**ಅವತರಣಿಕೆ**— "ಈಶಾನಕಲೆಗಳು ಐದು, ತತ್ಪುರುಷಕಲೆಗಳು ನಾಲ್ಕು, ಅಘೋರಕಲೆಗಳು ಎಂಟು, ವಾಮದೇವಕಲೆಗಳು ಹದಿಮೂರು, ಸದ್ಯೋಜಾತ ಕಲೆಗಳು ಎಂಟು, ಈ ಅಷ್ಟತ್ರಿಂಶತ್ಕಲೆಗಳನ್ನೂ (ಮೂವತ್ತೆಂಟನ್ನೂ) ಆ ಆ ವೇದಮಂತ್ರಭಾಗಗಳೊಡನೆ ಸೇರಿಸಿ ಶರೀರದಲ್ಲಿ ನ್ಯಾಸಮಾಡಬೇಕು; ಹೀಗೆ ವೇದಮಂತ್ರಸಹಿತವಾಗಿ ಮಾಡುವ ನ್ಯಾಸವು ಸಶಕ್ತಿಕನ್ಯಾಸವೆಂದೂ, ವೇದಮಂತ್ರಸಹಿತವಾಗಿಲ್ಲದ ನ್ಯಾಸವು ವಿಶಕ್ತಿಕನ್ಯಾಸವೆಂದೂ ಎನಿಸಿಕೊಳ್ಳುವುವು" ಎಂಬ ಅಂಶವನ್ನು ಹಿಂದೆ ತೋರಿಸಿದ್ದರ ಮೇಲೆ ಈ ಮೂವತ್ತೆಂಟು ಕಲೆಗಳ ನ್ಯಾಸಸ್ಥಾನಗಳನ್ನು ಕ್ರಮವಾಗಿ ನಲವತ್ತುನಾಲ್ಕನೆಯ ಶ್ಲೋಕದಲ್ಲಿ ತೋರಿಸುತ್ತಾರೆ.—

**ಮೂರ್ಧಾನಃ ಪಂಚ ವಕ್ತ್ರಾಣ್ಯಥ ಹೃದಯಗಳಾ ದ್ವ್ಯಂಸನಾಭಿಶ್ಚ ಕುಕ್ಷಿಃ**
**ಪೃಷ್ಠೋರೋಗುಹ್ಯಶಿಶ್ನೋರುಯುಗಳಮುಪರಂ ಜಾನುಯುಗ್ಮಂ ಚ ಜಂಘೇ ।**

**ದ್ವಿಸ್ಫಿಜ್ಮಧ್ಯಂ ಚ ಪಾರ್ಶ್ವೌ ಚರಣಕರಯುಗಂ ಘ್ರಾಣವೌಳಿಶ್ಚ ಬಾಹೂಃ ಸ್ಥಾನಾನಿ ಸ್ಯುಃ ಕಲಾನಾಂ ಶಿವತನುಕರಣೇ ತ್ರಿಂಶತಸ್ಸಾಷ್ಟಕಾನಾಂ ||೪೪||**

**ಟೀಕೆ**= ಶಿವತನುಕರಣೇ—ಶಿವಪೂಜೆಗೋಸ್ಕರ ಶಿವನಿಗೆ ಸಮಾನವಾದ ದೇಹವನ್ನು ಉಂಟುಮಾಡಿಕೊಳ್ಳುವ ವಿಷಯದಲ್ಲಿ, ಸಾಷ್ಟಕಾನಾಂ ತ್ರಿಂಶತಃ ಕಲಾನಾಂ—"ಶಶಿನ್ಯೈನಮಃ" ಎಂಬಿವೇ ಮೊದಲಾದ ಮೂವತ್ತೆಂಟು ಕಲೆಗಳಿಗೂ, ಪಂಚಮೂರ್ಧಾನಃ—ಊರ್ಧ್ವ-ಪೂರ್ವ-ದಕ್ಷಿಣ-ಪಶ್ಚಿಮ-ಉತ್ತರಭಾಗಗಳಲ್ಲಿರುವ ಐದು ಶಿರಸ್ಸುಗಳು ಈಶಾನಕಲೆಗಳೈದಕ್ಕೂ, ಅಥ-ವಕ್ತ್ರಾಣಿ—ಅನಂತರದಲ್ಲಿ ಪೂರ್ವ-ದಕ್ಷಿಣ-ಪಶ್ಚಿಮ-ಉತ್ತರಮುಖಗಳು ನಾಲ್ಕೂ ತತ್ಪುರುಷಕಲೆಗಳು ನಾಲ್ಕಕ್ಕೂ, ಹೃದಯಗಳೌ ದ್ವ್ಯಂಸನಾಭಿಃ ಕುಕ್ಷಿಃ ಪೃಷ್ಠೋರಃ—ಕಂಠದ ಕೆಳಭಾಗದೊಡನೆ ಸೇರಿರುವ ಹೃದಯವೂ, ಕಂಠವೂ, ಎರಡುತೋಳುಗಳೂ, ನಾಭಿಪ್ರದೇಶವೂ, ಹೊಟ್ಟೆಯೂ, ಬೆನ್ನೂ, ವಕ್ಷಸ್ಥಲವೂ, ಈ ಎಂಟುಸ್ಥಾನಗಳು ಅಘೋರಮಂತ್ರದ ಕಲೆಗಳೆಂಟಕ್ಕೂ, ಗುಹ್ಯ ಶಿಶ್ನ ಊರುಯುಗಳಂ—ಗುದಸ್ಥಾನ-ಮೇಢ್ರಸ್ಥಾನ-ಎರಡುತೊಡೆಗಳು, ಜಾನುಯುಗ್ಮಂ-ಜಂಘೇ-ದ್ವಿಸ್ಫಿಕ್-ಮಧ್ಯಂ-ಪಾರ್ಶ್ವೌ—ಎರಡು ಮಂಡಿಗಳು,ಎರಡು ಮೊಣಕಾಲುಗಳು, ಪೃಷ್ಠಭಾಗಗಳೆರಡು ಸೊಂಟವು ಕಂಕುಳಿನ ಕೆಳಭಾಗಗಳೆರಡು ಈ ಹದಿಮೂರು ಸ್ಥಾನಗಳು ವಾಮದೇವಕಲೆಗಳು ಹದಿಮೂರಕ್ಕೂ, ಚರಣಕರಯುಗಂ—ಕಾಲುಗಳೆರಡು-ಕೈಗಳೆರಡು, ಘ್ರಾಣ-ವೌಳಿಶ್ಚ—ಮೂಗು-ತಲೆ, ಬಾಹೂ—ಎರಡು ಭುಜಗಳು ಈ ಎಂಟುಸ್ಥಾನಗಳು ಸದ್ಯೋಜಾತಕಲೆಗಳೆಂಟಕ್ಕೂ, ಸ್ಥಾನಾನಿ ಸ್ಯುಃ—ಕ್ರಮವಾಗಿ ನ್ಯಾಸಸ್ಥಾನಗಳಾಗುವುವು. ||೪೪||

**ಅವತರಣಿಕೆ**= ಬಾಹ್ಯಪೂಜೆಯೆಂದೂ ಆಂತರಪೂಜೆಯೆಂದೂ ಎರಡು ಬಗೆಯಾಗಿರುವ ಶಿವಪೂಜೆಯಲ್ಲಿ ಆತ್ಮಜ್ಞಾನಿಗಳಿಗೆ ಆಂತರಪೂಜೆಯೂ, ಕ್ರಿಯಾಧಿಕಾರಿಗಳಿಗೆ ಬಾಹ್ಯಪೂಜೆಯೂ ಶಾಸ್ತ್ರವಿಹಿತವಾಗಿರುವಕಾರಣ ಆತ್ಮಜ್ಞಾನಿಗಳು ಮಾಡಬೇಕಾದ ಆಂತರಪೂಜಾಕ್ರಮವನ್ನು ನಲವತ್ತೈದನೆಯ ಮತ್ತು ನಲವತ್ತಾರನೆಯ ಪದ್ಯಗಳಲ್ಲಿ ಉಪದೇಶಿಸುತ್ತಾರೆ.—

**ಹೃತ್ಪದ್ಮೇ ಮನಸಾ ವಿಭಾವಿತಮಹಾಮಾಯೋಪರಿಸ್ಥಾಸನೇ**
**ಧ್ಯೇಯೋ ದೀಪಶಿಖಾಕೃತಿಃ ಸುಕುಸುಮಂ ಭಾವಃ ಕ್ಷಮಾರ್ಘ್ಯಂ ಜಲಂ।**
**ಲೇಪೋ ಧೀರವಸಾಯಿನೀ ಪರಶಿವೇ ಪ್ರಾಣೋಽನಲೋ ಮಾನಸೇ**
**ಪಾತ್ರೇಽಹಂಕೃತಿರೇಷ ಏವ ಪರಮೋ ಧೂಪೋಽಥ ಮಾನಾತ್ಮಕಃ ||೪೫||**

**ದೀಪಸ್ಸದ್ವಿಷಯಾಸ್ಸುತೃಪ್ತಿಕರಣಾ ಗಂಧಾದಯಃ ಕ್ಷ್ಮಾದಿಕಾಃ**
**ಪಾನೀಯಾದಿಕದರ್ಪಣವ್ಯಜನಕಸ್ತೋತ್ರಾದಿಕಾವೇದನಂ ।**
**ನೈವೇದ್ಯಂ ಸ್ವಯಮುದ್ಧೃತಾ ಸಮನಯಾ ಸೂಕ್ಷ್ಮಾಂಗಹೀನೋ ಯದಾ**
**ಯುಕ್ತಸ್ಯ ಸ್ವಯಮೇವ ನಾದಮನುನಾ ಚಾಪಸ್ಸನಾಭ್ಯುತ್ಥಿತಃ ॥೪೬॥**

**ಟೀಕೆ**= ಹೃತ್ಪದ್ಮೇ—ಮಾನಸಪೂಜೆಯನ್ನು ಮಾಡುವಾಗ ಮೊದಲು ಹೃದಯಕಮಲದಲ್ಲಿ, ಮನಸಾ—ಮನಸ್ಸಿನಿಂದ, ವಿಭಾವಿತಮಹಾಮಾಯೋಪರಿಸ್ಥಾಸನೇ—ಧ್ಯಾನಿಸಲ್ಪಟ್ಟ ಮಹಾಮಾಯೆಗೆ ಮೇಲಿರುವ ಸಿಹ್ಮಾಸನದಲ್ಲಿ, ದೀಪಶಿಖಾಕೃತಿಃ—ದೀಪಜ್ವಾಲೆಗೆ ಸಮಾನವಾದ ಶರೀರವುಳ್ಳ ಪರಶಿವನು, ಧ್ಯೇಯಃ—ಧ್ಯಾನಮಾಡಲ್ಪಡತಕ್ಕವನು (ಆನಂತರದಲ್ಲಿ ಆವಾಹನಾದಿಮುದ್ರೆಗಳಿಂದ ಆವಾಹನಾದಿಗಳನ್ನು ಮಾಡಿದ ಮೇಲೆ), ಭಾವಃ— ಮನಶ್ಶುದ್ಧಿಯೇ, ಸುಕುಸುಮಂ—ಶ್ಲಾಘ್ಯವಾದ ಪುಷ್ಪವಾಗಿರುವುದೆಂದೂ, ಕ್ಷಮಾ—ಕ್ಷಾಂತಿಗುಣವೆಂಬ ಸಹನೆಯೇ, ಅರ್ಘ್ಯಂ-ಜಲಂ—ಅರ್ಘ್ಯ-ಪಾದ್ಯ-ಆಚಮನೀಯ-ಸ್ನಾನೀಯ ಮುಂತಾದ ಜಲವಾಗಿರುವುದೆಂದೂ, ಪರಶಿವೇ—ಪರಮಶಿವನ ವಿಷಯದಲ್ಲಿ, ಅವಸಾಯಿನೀ—ನಿಯತವಾಗಿ ಸ್ಥಿರಪಟ್ಟಿರುವ, ಧೀಃ—ಬುದ್ಧಿಯೇ, ಲೇಪಃ—ಕುಂಕುಮ-ಕರ್ಪೂರ-ಚಂದನ ಮುಂತಾದ ಅನುಲೇಪನವಸ್ತುವಾಗಿರುವುದೆಂದೂ, ಮಾನಸೇ ಪಾತ್ರೇ—ಮನಸ್ಸೆಂಬ ಧೂಪಪಾತ್ರದಲ್ಲಿ, ಪ್ರಾಣಃ-ಅನಲಃ—ಪ್ರಾಣವಾಯುವೇ ಅಗ್ನಿಯಾಗಿರುವುದೆಂದೂ, ಅಹಂಕೃತಿರೇಷ ಏವ—ಈ ಅಹಂಕಾರವೇ, ಪರಮೋ ಧೂಪಃ—ಶ್ರೇಷ್ಠವಾದ ಧೂಪವಾಗಿರುವುದೆಂದೂ, ಅಥ —ಅನಂತರದಲ್ಲಿ, ಮಾನಾತ್ಮಕಃ—ಸರ್ವಪ್ರಮಾಣವಾದ ಚಿಚ್ಛಕ್ತಿಯೇ, ದೀಪಃ—ದೀಪವಾಗಿರುವುದೆಂದೂ, ಗಂಧಾದಯಃ—ಗಂಧ-ರಸ-ರೂಪ-ಸ್ಪರ್ಶ-ಶಬ್ದಗಳೇ, ಸುತೃಪ್ತಿಕರಣಾಃ—ಹೆಚ್ಚಿದ ತೃಪ್ತಿಯನ್ನು ಉಂಟುಮಾಡುವ, ಸದ್ವಿಷಯಾಃ—ಶ್ರೇಷ್ಠವಾದ ಭೋಗ್ಯವಸ್ತುಗಳಾಗಿರುವುವೆಂದೂ, ಕ್ಷ್ಮಾದಿಕಾಃ—ಪೃಥಿವ್ಯಾದಿಪಂಚಭೂತಗಳೇ, ನೈವೇದ್ಯಂ ಪಾನೀಯಾದಿಕದರ್ಪಣವ್ಯಜನಕಸ್ತೋತ್ರಾದಿಕಾವೇದನಂ—ಅನ್ನಾದಿಭೋಜ್ಯವಸ್ತುವಾಗಿಯೂ, ಪಾನಕವೇ ಮೊದಲಾದ ಕುಡಿಯುವ ವಸ್ತುವಾಗಿಯೂ, ಕನ್ನಡಿಯೇ ಮೊದಲಾದ ಪ್ರಕಾಶಕವಸ್ತುವಾಗಿಯೂ, ಬೀಸಣಿಗೆಯೇ ಮೊದಲಾದ ಶ್ರಮಹರವಸ್ತುವಾಗಿಯೂ, ಸ್ತೋತ್ರವೇ ಮೊದಲಾದ ಶ್ರಾವ್ಯವಸ್ತುವಾಗಿಯೂ, ಇರುವುವೆಂದೂ, ಭಾವಿಸಿ ಮನಸ್ಸಿನಿಂದಲೇ ಪೂಜಿಸಬೇಕು. ಯದಾ-ಸೂಕ್ಷ್ಮಾಂಗಹೀನಃ—ಆದರೆ ಯಾವಾಗ

ಯೋಗಾಂಗವಾದ ಸೂಕ್ಷ್ಮಶರೀರವಿಲ್ಲದವನಾಗುವನೋ ಆವಾಗ, ಸಮನಯಾ-ಯುಕ್ತಸ್ಯ—ಮನೋಭಾವನೆಯೊಡನೆ ಕೂಡಿರುವವನಿಗೆ, ಸ್ವಯಮುದ್ಯತಾ—ತಾನಾಗಿಯೇ ಉಂಟಾಗುತ್ತಿರುವ, ನಾದಮನುನಾ—ನಾದಮಂತ್ರದಿಂದ, ಸ್ವಯಮೇವ—ತಾನಾಗಿಯೇ, ನಾಭ್ಯುತ್ಥಿತಃ—ಮೂಲಾಧಾರದಿಂದುಂಟಾಗಿರುವ, ಸ ಜಾಪಃ—ಅಂಥ ಮಂತ್ರಜಪವು, (ಕ್ಷಮಃ ಸ್ಯಾತ್)—ಯುಕ್ತವಾಗಿರುವುದು. ||೪೬||

**ಅವತರಣಿಕೆ**— ಉಕ್ತಕ್ರಮದಿಂದ ಹೃದಯದಲ್ಲಿ ಶಿವಪೂಜೆಯಂಗೈದು ನಾಭಿಕುಂಡದಲ್ಲಿ ಶಿವಾಗ್ನಿಯನ್ನು ಪ್ರತಿಷ್ಠಿಸಿ, ಹೃದಯದಲ್ಲಿ ಪೂಜಿಸಿದಂತೆ ಅಲ್ಲಿಯೂ ಪರಶಿವನನ್ನು ಪೂಜಿಸಿ, ಬಿಂದುಸ್ಥಾನದಿಂದ ಪ್ರವಹಿಸುತ್ತಿರುವ ಅಮೃತಧಾರೆಯನ್ನು ಆಜ್ಯಧಾರೆಯಾಗಿ ಭಾವಿಸಿ, ನೂರೆಂಟು ಆಹುತಿಗಳನ್ನು ನಡೆಯಿಸಿ, ಶಿವನಲ್ಲಿ ಕ್ಷಮೆಯನ್ನು ಬೇಡಿ ಪೂಜಾಸಮರ್ಪಣೆಯನ್ನು ಮಾಡಿ ನಿಷ್ಕಳಸ್ವರೂಪನಾದ ಪರಶಿವನಲ್ಲಿ ಲಯಿಸಿ ಏಕಾಕಾರಶಿವಧ್ಯಾನರೂಪವಾದ ಸಮಾಧಿಯನ್ನು ಅಭ್ಯಸಿಸಬೇಕೆಂದು ನಲವತ್ತೇಳನೆಯ ಶ್ಲೋಕದಲ್ಲಿ ಉಪದೇಶಿಸುತ್ತಾರೆ.—

**ವಹ್ನಾವೇವಮಪಿ ಪ್ರಪೂಜ್ಯ ಜುಹುಯಾತ್ಪೂರ್ವೋಕ್ತಯೋಗೇನ ತತ್**
**ಸ್ಥಾನಸ್ಥಾಮಿಡಯಾ ಸ್ರುವೇಣ ಚ ಸುಧಾಮಂತೇ ಸುಷುಮ್ನಾಸ್ರುಚಾ ।**
**ಪೂರ್ಣಾಂತಂ ಹವನಂ ಸಮರ್ಪ್ಯ ಕೃತವಾನೀಶಂ ಕ್ಷಮಾಪ್ಯಾದರಾ**
**ದಂತೇ ಭಾವವಿವರ್ಜಿತೇ ಪರಪದೇ ಲೀನಸ್ಸಮಾಧಿಂ ವ್ರಜೇತ್ ||೪೭||**

**ಟೀಕೆ**— ಏವಂ—ಈ ರೀತಿಯಾಗಿ, ಪೂರ್ವೋಕ್ತಯೋಗೇನ—ಮೊದಲು ಹೇಳಿರುವ ಮಾನಸಯೋಗದಿಂದಲೇ, ವಹ್ನಾವಪಿ—ಕುಂಡದಲ್ಲಿ ವಿಧ್ಯನುಸಾರವಾಗಿ ಆವಾಹಿಸಲ್ಪಟ್ಟ ಸ್ವಭಾವಸಿದ್ಧವಾದ ಶಿವಾಗ್ನಿಯಲ್ಲಿಯೂ, ಈಶಂ—ಪರಶಿವನನ್ನು, ಪ್ರಪೂಜ್ಯ—ಹೃದಯದಲ್ಲಿ ಹೇಗೋ ಹಾಗೆ ಚನ್ನಾಗಿ ಪೂಜಿಸಿ, ತತ್ಸ್ಥಾನಸ್ಥಾಂ—ಆ ಬಿಂದುಸ್ಥಾನದಲ್ಲಿರುವ, ಸುಧಾಂ—ಅಮೃತವೆಂಬ ಆಜ್ಯವನ್ನು, ಇಡಯಾ-ಸ್ರುವೇಣ—ಇಡೆಯೆಂಬ ನಾಡೀರೂಪವಾದ ಸ್ರುವವೆಂಬ ಹೋಮಸಾಧನಪಾತ್ರದಿಂದ, ಜುಹುಯಾತ್—ನೂರೆಂಟು ಸಂಖ್ಯೆಯುಳ್ಳ ಆಹುತಿಯನ್ನು ನಡೆಯಿಸಬೇಕು. ಅಂತೇ–ಅದರ ಸಮಾಪ್ತಿಯಲ್ಲಿ, ಸುಷುಮ್ನಾಸ್ರುಚಾ—ಸುಷುಮ್ನೆಯೆಂಬ ನಾಡೀರೂಪವಾದ ಸ್ರುಕ್ಕೆಂಬ ಹೋಮಸಾಧನಪಾತ್ರದಿಂದ, ಪೂರ್ಣಾಂತಂ-ಹವನಂ—ಪೂರ್ಣಾಹುತಿಪರ್ಯಂತವಾದ ಹವನವನ್ನು, ಕೃತವಾರ್ನ್—ಮಾಡಿದವನಾಗಿ, ಆದರಾತ್—ಪ್ರೀತಿಯಿಂದ, ಈಶಂ—ಪರಮಶಿವನನ್ನು,

ಕ್ಷಮಾಪ್ಯ—ಕ್ಷಮಿಸುವಂತೆ ಬೇಡಿಕೊಂಡು, ಸಮರ್ಪ್ಯ—ಅಂತರ್ಯಾಗವನ್ನೂ ಹವನಕಾರ್ಯವನ್ನೂ ಶಿವನಿಗೆ ಅರ್ಪಿಸಿ, ಅಂತೇ—ಅದರ ಸಮಾಪ್ತಿಯಲ್ಲಿ, ಭಾವ ವಿವರ್ಜಿತೇ—ಸದಾಶಿವತತ್ತ್ವವೇ ಮೊದಲಾದ ಅಧಿಕಾರರೂಪವಾದ ಭಾವಾಕಾರ ದಿಂದ ಬಿಡಲ್ಪಟ್ಟಿರುವ, ಪರಪದೇ—ನಿಷ್ಕಳಸ್ವರೂಪವಾದ ದ್ವಾದಶಾಂತದಲ್ಲಿ, ಲೀನಸ್ಸನ್—ಲಯಿಸಿದವನಾಗಿ, ಸಮಾಧಿಂ—ಮೂಲಾಧಾರವೊದಲುಗೊಂಡು ದ್ವಾದಶಾಂತಪರ್ಯಂತವಾದ ಅವಯವಗಳಲ್ಲಿ ಏಕಾಕಾರವಾಗಿ ಶಿವನನ್ನು ಧ್ಯಾನಿ ಸುವಿಕೆಯೆಂಬ ಯೋಗಸಮಾಧಿಯನ್ನು, ವ್ರಜೇತ್—ಹೊಂದಬೇಕು. ||೪೭||

**ಅವತರಣಿಕೆ**= ಹೀಗೆ ಅಂತರ್ಯಾಗವೊದಲುಗೊಂಡು ಸಮಾಧಿಪರ್ಯಂತವಾಗಿರುವ ವ್ಯಾಪಾರದ ವಿಧಿಯನ್ನು ತೋರಿಸಿ ಈಗ ಬಾಹ್ಯಪೂಜೆಗಾಗಿ ಲಿಂಗವೇ ಉತ್ಕೃಷ್ಟವಾದುದೆಂದು ಭಾವಿಸಿ ಲಿಂಗಾಧಾರವಾಗಿ ನಡೆಯಿಸುವ ಬಾಹ್ಯ ಶಿವ ಪೂಜಾಕ್ರಮವನ್ನು ನಲವತ್ತೆಂಟನೆಯ ಶ್ಲೋಕದಲ್ಲಿ ಉಪದೇಶಿಸುತ್ತಾರೆ.—

**ಸೇಶಾನಾಹತಧಾರಿಕೋಪರಿ ಧರಾದ್ಯಾಗ್ರಂಥ್ಯಧಃಪಂಕಜಂ**
**ವಿದ್ಯಾದ್ಯೂರ್ಧ್ವಶಿವಾಂತಪದ್ಮಖಚಿತಂ ಪೀಠಂ ಶಿವಸ್ಯಾಸನಂ ।**
**ಸರ್ವಾಧ್ವಾಧಿಕಭಾಗಸಂಯುತಶಿವಜ್ಞಾನಾಖ್ಯಲಿಂಗಾತ್ಮಕಂ**
**ಸರ್ವಾಧ್ವಾಧಿಕಭಾಗನಾಳಸಹಿತಂ ಪೀಠಂ ಕ್ರಿಯಾಶಕ್ತಿಕಂ ||೪೮||**

**ಟೀಕೆ**= ಸೇಶಾನಾಹತಧಾರಿಕೋಪರಿ—ಶಿವಾಧಿಷ್ಠಿತವಾಗಿಯೂ ವ್ಯಾಪಕವಾಗಿಯೂ, ಅಥವಾ ಶಿವಾಧಿಷ್ಠಿತವಾಗಿ ಕಂದಸ್ಥಾನದಿಂದ ಮೊಳಕೆಯಂತೆ ಹೊರಟಿರುವ ಆಧಾರಶಕ್ತಿಯ ಮೇಲ್ಭಾಗದಲ್ಲಿ, ಧರಾದ್ಯಾಗ್ರಂಥ್ಯಧಃಪಂಕಜಂ—ಪೃಥಿವೀತತ್ತ್ವ ಮೊದಲುಗೊಂಡು ಮಾಯಾತತ್ತ್ವದವರೆಗೆ, ಕಮಲದ ಅಧೋಭಾಗವಾಗಿಯೂ, ವಿದ್ಯಾದ್ಯೂರ್ಧ್ವಶಿವಾಂತಪದ್ಮಖಚಿತಂ—ಮೇಲೆ ಶುದ್ಧವಿದ್ಯೆ ಮೊದಲುಗೊಂಡು ಶಿವತತ್ತ್ವದವರೆಗೆ ಅರಳಿರುವ ಊರ್ಧ್ವಪದ್ಮವಾಗಿಯೂ ಮಾಡಲ್ಪಟ್ಟಿರುವ, ಪೀಠಂ—ಪದ್ಮಪೀಠವನ್ನು, ಶಿವಸ್ಯ—ಪರಮಶಿವನಿಗೆ, ಆಸನಂ (ಪ್ರಕಲ್ಪ್ಯ)—ಆಸನವಾಗಿ ಕಲ್ಪಿಸಿ, ಸರ್ವಾಧ್ವಾಧಿಕಭಾಗನಾಳಸಹಿತಂ—ಷಡಧ್ವಗಳಲ್ಲಿ ಶ್ರೇಷ್ಠವಾದ ಬ್ರಹ್ಮ-ವಿಷ್ಣು-ರುದ್ರ-ಭಾಗವುಳ್ಳ ಗೋಮುಖದೊಡನೆ ಕೂಡಿರುವ, ಪೀಠಂ—ಪೀಠವನ್ನು, ಕ್ರಿಯಾಶಕ್ತಿಕಂ—ಕ್ರಿಯಾಶಕ್ತಿರೂಪವಾಗಿಯೂ, ಸರ್ವಾಧ್ವಾಧಿಕಭಾಗಸಂಯುತಶಿವಜ್ಞಾನಾಖ್ಯಲಿಂಗಾತ್ಮಕಂ—ಷಡಧ್ವಗಳಲ್ಲಿಯೂ ಶ್ರೇಷ್ಠವಾದ ಬ್ರಹ್ಮ ವಿಷ್ಣು ರುದ್ರ ಭಾಗವುಳ್ಳ ಶಿವಲಿಂಗವನ್ನು ಶಿವನ ಜ್ಞಾನಶಕ್ತಿರೂಪವಾಗಿಯೂ, (ಧ್ಯಾತ್ವಾ)—ಧ್ಯಾನಮಾಡಿ, (ಪೂಜಯೇತ್)—ಪೂಜಿಸಬೇಕು. ||೪೮||

ಅವತರಣಿಕೆ— ಪೂಜೆಗೆ ಗುರಿಯಾಗಿರುವ ಲಿಂಗ ಮೊದಲಾದುವುಗಳಲ್ಲಿ ಪರಶಿವನ ಆವಾಹನಕ್ರಮವನ್ನು ನಲವತ್ತೊಂಬತ್ತನೆಯ ಶ್ಲೋಕದಲ್ಲಿ ಹೇಳುತ್ತಾರೆ.—

**ಸ್ವಾಧಾರೇ ಗತಮಾನಸಶ್ಶಿವಮನೋಃ ಶಕ್ತ್ಯಾತ್ಮಕೋ ಧ್ಯಾನತೋ**
**ಮಾತ್ರಾದೀಪ್ತಕಲೇಶ್ವರಕ್ರಮಗತೇರ್ಮಂತ್ರಂ ಸಮುಚ್ಚಾರಯನ್ ।**
**ನೀತ್ವಾ ಕಾಂತಕಮಂಜಲಿಂ ಪರಶಿವೇ ಪ್ರಾಪ್ಯೈಕಭಾವಂ ತತೋ**
**ಘಂಟಾನಾದಲಲಾಟಗಂ ಕುಸುಮಗಂ ಲಕ್ಷ್ಯೇ ಮಹೋಽನ್ತರ್ನ್ಯ**
**ಸೇತ್ ॥೪೯॥**

ಟೀಕೆ— ಸ್ವಾಧಾರೇ—ಮೂಲಾಧಾರದಲ್ಲಿ, ಗತಮಾನಸಃ—ಪ್ರವೇಶಿಸಿರುವ ಮನಸ್ಸುಳ್ಳವನಾಗಿ, ಶಿವಮನೋಃ—ಶಿವಸ್ವರೂಪಪ್ರತಿಪಾದಕವಾದ ಪ್ರಾಸಾದಮಂತ್ರದ, ಶಕ್ತ್ಯಾತ್ಮಕಃ—ಶಕ್ತಿಸ್ವರೂಪನಾಗಿರುವೆನೆಂದು ತನ್ನನ್ನು ಭಾವಿಸಿ ಮಾತ್ರಾದೀಪ್ತಕಲೇಶ್ವರಕ್ರಮಗತೇಃ—ಅಕಾರಾದಿ ಐದು ಮಾತ್ರೆಗಳಿಂದ ಪ್ರಕಾಶಿಸುತ್ತಿರುವ ನಿಜಯಾ ಮೊದಲಾದ ಅರವತ್ತುನಾಲ್ಕು ಕಲೆಗಳ ಮತ್ತು ಅವುಗಳಿಗೆ ಅಧಿಪತಿಗಳಾದ ಬ್ರಹ್ಮಾದಿಕಾರಣೇಶ್ವರರೈವರ ಮಾರ್ಗದ ರೀತಿಯಲ್ಲಿ, ಧ್ಯಾನತಃ—ಧ್ಯಾನಮಾಡುವಿಕೆಯಿಂದಲೇ, ಮಂತ್ರಂ—ಪ್ರಾಸಾದಮಂತ್ರವನ್ನು, ಸಮುಚ್ಚಾರಯನ್—ಉಚ್ಚರಿಸುತ್ತಿರುವವನಾಗಿ, ಅಂಜಲಿಂ—ಪುಷ್ಪಾಂಜಲಿಯನ್ನು, ಕಾಂತಕಂ-ನೀತ್ವಾ—ಶಿರಸ್ಸಿನ ಮೇಲೆ ದ್ವಾದಶಾಂತದವರೆಗೆ ಹೊಂದಿಸಿ, ಪರಶಿವೇ—ಉನ್ಮನ್ಯಂತದಲ್ಲಿರುವ ಪರಮಶಿವನಲ್ಲಿ, ಏಕಭಾವಂ-ಪ್ರಾಪ್ಯ—ಪರಮಸಾಮ್ಯವೆಂಬ ಏಕೀಭಾವವನ್ನು ಪಡೆದುದಾಗಿ ಭಾವಿಸಿ, ತತಃ—ಅನಂತರದಲ್ಲಿ (ಅಂಜಲಿಯನ್ನು ಕೆಳಗೆ ತಂದು), ಘಂಟಾನಾದಲಲಾಟಗಂ— ಘಂಟೆಯ ಧ್ವನಿಯಂತೆ ಭ್ರೂಮಧ್ಯದಲ್ಲಿ ಬಂದಿರುವ, ಕುಸುಮಗಂ—ಅನಂತರದಲ್ಲಿ ಪುಷ್ಪಾಂಜಲಿಯನ್ನು ಸೇರಿರುವ, ಮಹಃ—ಪರಶಿವನ ತೇಜಸ್ಸನ್ನು, ಲಕ್ಷ್ಯೇ ಅಂತಃ—ಪೂಜೆಗೆ ವಿಷಯವಾಗಿರುವ ಲಿಂಗವೇ ಮೊದಲಾದುವುಗಳ ಮಧ್ಯಸ್ಥಾನದಲ್ಲಿ (ಮಡಗಿ), ನ್ಯಸೇತ್—ಆವಾಹನಮಾಡಬೇಕು. ॥೪೯॥

ಅವತರಣಿಕೆ— ಪರಶಿವನ ಆವಾಹನ ಸ್ಥಾಪನ ಮೊದಲಾದ ಹತ್ತು ಪ್ರಧಾನಸಂಸ್ಕಾರಗಳನ್ನು ಐವತ್ತನೆಯ ಶ್ಲೋಕದಲ್ಲಿ ತೋರಿಸುತ್ತಾರೆ.—

**ಆವಾಹನಸ್ಥಾಪನಸನ್ನಿಧಾನ**
**ನಿರೋಧನಾಕುಂಠನಧೇನುಮುದ್ರಾಃ ।**

**ಪಾದ್ಯಂ ತಥಾಚಾಚಮನಾರ್ಘ್ಯಪುಷ್ಪ**
**ದಾನಂ ಸ್ಮೃತಾಸ್ಸಂಸ್ಕೃತಯೋ ದಶೈವ** ||೫೦||

**ಟೀಕೆ**— ಆವಾಹನಸ್ಥಾಪನಸನ್ನಿಧಾನನಿರೋಧನಾಕುಂಠನಧೇನುಮುದ್ರಾಃ—ಲಿಂಗ-ಪ್ರತಿಮೆ ಮೊದಲಾದುವುಗಳಲ್ಲಿ ಪರಶಿವನನ್ನು ಆವಾಹಿಸುವಿಕೆ, ಭಕ್ತಿಪೂರ್ವಕವಾಗಿ ಅಲ್ಲಿ ಸ್ಥಿರಪಡಿಸುವಿಕೆ, ಸಾನ್ನಿಧ್ಯಗೊಳಿಸುವಿಕೆ, ಮತ್ತೊಂದು ಕಡೆ ಹೋಗದಂತೆ (ಪೂಜೆಗಾಗಿ) ಅಲ್ಲೇ ತಡೆಯುವಿಕೆ, ಆಚ್ಛಾದಿಸುವಿಕೆ, ಸುರಭಿಮುದ್ರೆಯನ್ನು ತೋರಿಸುವಿಕೆ (ಇವುಗಳೂ), ಪಾದ್ಯಂ—ಪಾದತೀರ್ಥಸಮರ್ಪಣೆಯೂ, ಆಚಮನಾರ್ಘ್ಯಪುಷ್ಪದಾನಂ—ಆಚಮನವನ್ನು ಸಮರ್ಪಿಸುವಿಕೆಯೂ, ಅರ್ಘ್ಯತೀರ್ಥಸಮರ್ಪಣೆಯೂ, ಪುಷ್ಪಸಮರ್ಪಣೆಯೂ, (ಏತಾಃ) ಸಂಸ್ಕೃತಯಃ—ಈ ಸಂಸ್ಕಾರಗಳು, ದಶೈವ ಸ್ಮೃತಾಃ—ಹತ್ತೇ ಪ್ರಧಾನಸಂಸ್ಕಾರಗಳೆಂದು ಹೇಳಲ್ಪಟ್ಟಿರುವುವು. ||೫೦||

**ಅವತರಣಿಕೆ**— ಶಿವನಿಗಾಗಿ ನಡೆಯಿಸುವ ಉಪಚಾರಗಳೆಲ್ಲವೂ ಪಂಚಭೂತಸಂಬಂಧಿಗಳಾದುದರಿಂದ ಐಸುಬಗೆಯಾಗಿರುವುವೆಂಬುದನ್ನು ಐವತ್ತೊಂದನೆಯ ಶ್ಲೋಕದಲ್ಲಿ ತೋರಿಸುತ್ತಾರೆ.—

**ಗಂಧೋ ಮೂಲಫಲಾದಿಕಂದಕುಸುಮಾದ್ಯನ್ನಾದಿಕಂ ಪಾರ್ಥಿವಂ**
**ಚಾಪ್ಯಂ ವಾರಿಪಯಃಪಟಾದಿ ದಧಿಕಂ ಚಾಗ್ನೇಯಮಿಷ್ಟಾ ಮಣಿಃ।**
**ದೀಪಾದ್ಯಾಭರಣಾದಿ ಮಾರುತಮಯೋ ಧೂಪಂ ತಥಾ ಚಾಮರಂ**
**ಘಂಟಾಗೀತರವಾದಿ ನಾಭಸಮಿಮಾ ಪಂಚೋಪಚಾರಾಃ ಶಿವೇ** ||೫೧||

**ಟೀಕೆ**— ಗಂಧಃ—ಚಂದನವೂ, ಮೂಲ-ಫಲಾದಿ—ಲಾಮಂಚ ಮೊದಲಾದ ಬೇರೂ, ಮಾವು ಮೊದಲಾದ ಹಣ್ಣೂ, ಕಂದ-ಕುಸುಮಾದಿ—ಗೆಣಸು ಮುಂತಾದುದೂ, ಪುಷ್ಪಪತ್ರ ಮುಂತಾದುದೂ, ಅನ್ನಾದಿಕಂ—ಅನ್ನ-ತೊವ್ವೆ-ಕಾಯಿಪಲ್ಯ-ಭಕ್ಷ್ಯ-ಭೋಜ್ಯ-ಮುಂತಾದುದೂ, ಪಾರ್ಥಿವಂ—ಇದೆಲ್ಲವೂ ಪೃಥಿವಿಯ ಸಂಬಂಧಿಯಾದುದರಿಂದ ಪಾರ್ಥಿವೋಪಚಾರವೆನಿಸಿಕೊಳ್ಳುವುದು. ವಾರಿ—ತೀರ್ಥವೂ, ಪಯಃ—ಹಾಲೂ, ಪಟಾದಿ—ಪೀತಾಂಬರವೇ ಮೊದಲಾದುದೂ, ದಧಿಕಂ—ಮೊಸರು ಮುಂತಾದುದೂ, ಆಪ್ಯಂ—ಇದೆಲ್ಲವೂ ಜಲಸಂಬಂಧಿಯಾದುದರಿಂದ ಜಲೀಯೋಪಚಾರವೆನಿಸಿಕೊಳ್ಳುವುದು. ಇಷ್ಟಾ-ಮಣಿಃ—ಅಭಿಮತವಾದ ನವರತ್ನ ಮುಂತಾದುದೂ, ದೀಪಾದಿ—ತುಪ್ಪ-ಎಣ್ಣೆ ಇವುಗಳಿಂದ ಹತ್ತಿಸಿದ ದೀಪವೂ-ಕರ್ಪೂರಾದಿ ದೀಪವೂ, ಆಭರಣಾದಿ—ಚಿನ್ನ-ಬೆಳ್ಳಿಗಳಿಂದ



ಮಾಡಿದ ಆಭರಣವೂ, ಆಗ್ನೇಯಂ—ಇದೆಲ್ಲವೂ ತೇಜಸ್ಸಂಬಂಧಿಯಾದುದರಿಂದ ತೈಜಸೋಪಚಾರವೆನಿಸಿಕೊಳ್ಳುವುದು. ಧೂಪಂ—ಸಾಂಬ್ರಾಣಿ-ದಶಾಂಗ-ಗಂಧದ ಕಡ್ಡಿ ಮೊದಲಾದುದೂ, ತಥಾ ಚಾಮರಂ—ಹಾಗೆಯೇ ಚಾಮರ-ಬೀಸಣಿಗೆ ಮೊದಲಾದುದೂ, ಮಾರುತಮಯಃ—ಇದೆಲ್ಲವೂ ವಾಯುಸಂಬಂಧಿಯಾದುದರಿಂದ ವಾಯವೀಯೋಪಚಾರವೆನಿಸಿಕೊಳ್ಳುವುದು. ಘಂಟಾಗೀತರವಾದಿ—ಘಂಟಾನಾದವೂ-ಗಾನಧ್ವನಿಯೂ-ವಾದ್ಯಧ್ವನಿಯೂ-ಸ್ತೋತ್ರಧ್ವನಿಯೂ, ನಾಭಸಂ—ಇದೆಲ್ಲವೂ ಆಕಾಶಸಂಬಂಧಿಯಾದುದರಿಂದ ನಾಭಸೋಪಚಾರವೆನಿಸಿಕೊಳ್ಳುವುದು. ಶಿವೇ—ಶಿವವಿಷಯದಲ್ಲಿ ಪೂಜೆಗಾಗಿ ಉಪಯೋಗಿಸಲ್ಪಡುವ, ಅಮೀ—ಇವುಗಳು, ಪಂಚ-ಉಪಚಾರಾಃ ಭವೇಯುಃ—ಪಂಚಭೂತಸಂಬಂಧಿಗಳಾದುದರಿಂದ ಪಾಂಚಭೌತಿಕೋಪಚಾರಗಳೆನಿಸಿಕೊಳ್ಳುವುವು. ||೫೧||

**ಅವತರಣಿಕೆ**= ಭಕ್ತಿಪೂರ್ವಕವಾಗಿ ಜಪಿಸಬೇಕಾದ ಶಿವಮಂತ್ರದ ಜಪಕ್ರಮವನ್ನು ಐವತ್ತೆರಡನೆಯ ಶ್ಲೋಕದಲ್ಲಿ ತೋರಿಸುತ್ತಾರೆ.—

**ಸ್ವಾಧಾರೋದಿತನಾದತಶ್ಶಿವಪಥೇ ಮೇಧಾದಿಕಾರ್ಕಾಃ ಕಲಾ**
**ಮಾತ್ರಾಸ್ತತ್ಪದಸಂಸ್ಥಿತಾಂಸ್ತದಧಿಪಾನ್ಮತ್ವಾ ಲಯಂ ತತ್ಪರಂ ।**
**ಕರ್ಷನ್ನಂಗುಳಿಮಧ್ಯತೋಽಕ್ಷನಿಕರಂ ಚೈಕೈಕಶೋ ಮಾನಸಂ**
**ಜಪ್ಯೋ ತೋಪಾಂಶು ಸಮರ್ಪಯೇಚ್ಛಿವಮನುಂ ದೇವೇ ಜಪಂ ಸ್ವಾಕೃತಂ॥**

**ಟೀಕೆ**= ಸ್ವಾಧಾರೋದಿತ-ನಾದತಃ—ಮೂಲಾಧಾರದಿಂದ ಉಂಟಾಗಿರುವ ನಾದವಾಚಕವಾದ ಹಕಾರವನ್ನು ಪ್ರಾರಂಭಿಸಿಕೊಂಡು, ಶಿವಪಥೇ—ನಿಷ್ಕಳಶಿವತತ್ತ್ವವನ್ನು ಲಕ್ಷೀಕರಿಸಿ ಹೋಗುವ ಮಾರ್ಗದಲ್ಲಿ, ಮೇಧಾದಿಕಾರ್ಕಾಃ—ಔಕಾರ ಮೊದಲುಗೊಂಡು ಹನ್ನೆರಡಾಗಿರುವ, ಕಲಾಮಾತ್ರಾಃ—ಕಲಾರೂಪವಾದ ಮಾತ್ರೆಗಳನ್ನೂ, ತತ್ಪದಸಂಸ್ಥಿತಾನ್—ಆ ಕಲೆಗಳ ಸ್ಥಾನಗಳಲ್ಲಿರುವ, ತದಧಿಪಾನ್—ಅವುಗಳಿಗೆ ಅಧಿಪತಿಗಳಾಗಿರುವ ಬ್ರಹ್ಮ-ವಿಷ್ಣು-ರುದ್ರ-ಮಹೇಶ್ವರ-ಸದಾಶಿವರನ್ನೂ, ಲಯಂ (ಗತಾನ್)—ಕ್ರಮವಾಗಿ ಲಯಹೊಂದಿದವರನ್ನಾಗಿ, ಮತ್ವಾ—ಭಾವನೆಮಾಡಿ, ತತ್ಪರಂ—ಅವರಿಗಿಂತಲೂ ಮೇಲೆ ದ್ವಾದಶಾಂತಸ್ಥಾನದಲ್ಲಿರುವ ಪರಶಿವನನ್ನೂ, ಮತ್ವಾ—ಧ್ಯಾನಮಾಡಿ, ಅಕ್ಷನಿಕರಂ—ಜಪಮಾಲೆಯಲ್ಲಿರುವ ರುದ್ರಾಕ್ಷಸಮೂಹವನ್ನು, ಏಕೈಕಶಃ—ಒಂದೊಂದಾಗಿ, ಅಂಗುಳಿಮಧ್ಯತಃ—ನಡುಬೆರಳಿನಿಂದ, ಕರ್ಷನ್ ಸನ್—ಸೆಳೆಯುತ್ತಿರುವವನಾಗಿ, ಮಾನಸಂ—ಮನಸ್ಸಿನಲ್ಲಿ ಅಡಗಿರುವಂತೆಯೂ, ಉಪಾಂಶು—ತುಟಿಮಾತ್ರವೇ ಚಲಿ

ಸುತ್ತ ತನಗೆ ಮಾತ್ರವೇ ಕೇಳಿಸುವಂತೆಯೂ, ಶಿವಮನುಂ—ಶಿವವಾಚಕವಾದ ಪ್ರಾಸಾದಮಂತ್ರವನ್ನು, ಜಪ್ತ್ವಾ—ಜಪಿಸಿ, ಸ್ವಾಕೃತಂ—ತನ್ನಿಂದ ಚನ್ನಾಗಿ ನಡೆಯಿಸಲ್ಪಟ್ಟ, ಜಪಂ—ಈ ಮಂತ್ರಜಪವನ್ನು, ದೇವೇ—ಪರಶಿವನಲ್ಲಿ, ಸಮರ್ಪಯೇತ್—ಅರ್ಪಿಸಬೇಕು. ||೫೨||

**ಅವತರಣಿಕೆ**— ಅನಂತರದಲ್ಲಿ ಅಗ್ನಿಕಾರ್ಯಕ್ರಮವನ್ನು ಐವತ್ತುಮೂರು ಐವತ್ತುನಾಲ್ಕನೆಯ ಶ್ಲೋಕಗಳಲ್ಲಿ ಉಪದೇಶಿಸುತ್ತಾರೆ.—

**ನೇಮಿನಾಭಿಗಹಾಸ್ತವಹ್ನಿವಸತಾವಷ್ಟಾದಶಾಖ್ಯೈರ್ಯುತೇ**
**ಸಂಸ್ಕಾರೈರರಣಿದ್ವಿಜಾದಿಗೃಹಜಂ ಬಿಂದ್ವಾದಿವಹ್ನ್ಯೈಕ್ಯಗಂ ।**
**ವಾಗೀಶ್ಯಾಂ ಜನಿತಂ ಶಿವಾಗ್ನಿಮನಘಂ ನಾಡ್ಯಾ ಪ್ರವಿಶ್ಯೈವ ತತ್**
**ಸ್ವಾಂತೇ ಪೂರ್ವವದರ್ಚಿತೇ ಪರಶಿವೇ ನಿಸ್ಸೃತ್ಯ ಚೋರ್ಧ್ವಾನನೇ||೫೩||**
**ವಹ್ನ್ಯೂರ್ಧ್ವಾಸ್ಯಸುಸಂಧಿತೇ ಘೃತತಿಲೈರ್ಹುತ್ವಾ ತು ಶಕ್ತಿಸ್ರುಚಿ**
**ನ್ಯಸ್ತ್ವಾ ಚ ಸ್ರುವಶಂಭುಮಾತ್ಮನಿನದಾನ್ಮಂತ್ರಂ ಸಮುಚ್ಚಾರಯನ್ ।**
**ಕ್ಷುಬ್ಧ್ವಾ ಶಕ್ತ್ಯಮೃತಂ ತತಃ ಪ್ರಸರತೋ ನಾಡ್ಯಾ ಪ್ರಯುಕ್ತಾಜ್ಯತಃ**
**ಪೂರ್ತ್ಯೈ ಹೋಮವಿಧೇಃ ಸ್ರುಚಾ ತ್ವಮೃತಧೀಃ ಪೂರ್ಣಾಂ ವಿದಧ್ಯಾ**
**ಚ್ಛನೈಃ ||೫೪||**

**ಟೀಕೆ**— ನೇಮಿನಾಭಿಗಹಾಸ್ತವಹ್ನಿವಸತಾ—ನೇಮಿಯೆಂಬ ಮೇಖಲೆಯನ್ನೂ ನಾಭಿಯೆಂಬ ಕುಂಡಯೋನಿಯನ್ನೂ ಹೊಂದಿರುವ ಹಸ್ತಪ್ರಮಾಣವುಳ್ಳ ಅಗ್ನಿಕುಂಡವು, ಅಷ್ಟಾದಶಾಖ್ಯೈಃ—ಹದಿನೆಂಟೆಂದು ಪ್ರಸಿದ್ಧಗಳಾಗಿರುವ, ಸಂಸ್ಕಾರೈಃ—ನಿರೀಕ್ಷಣ-ಪ್ರೋಕ್ಷಣ ಮೊದಲಾದ ಸಂಸ್ಕಾರಗಳೊಡನೆ, ಯುತೇಸತಿ—ಕೂಡಿದ ಮೇಲೆ, ಅರಣಿದ್ವಿಜಾದಿಗೃಹಜಂ—ಅಲ್ಲಿ ಸ್ಥಾಪಿಸಲ್ಪಟ್ಟ ಅರಣಿ-ಅಥವಾ ಬ್ರಾಹ್ಮಣಗೃಹ ಮುಂತಾದ ಸ್ಥಾನದಲ್ಲಿ ಉಂಟಾಗಿರುವ ಅಗ್ನಿಯನ್ನು, ಬಿಂದ್ವಾದಿವಹ್ನ್ಯೈಕ್ಯಗಂ—ಬಿಂದ್ವಗ್ನಿ-ನಾಭ್ಯಗ್ನಿಗಳೊಡನೆ ಏಕೀಭವಿಸಿದುದನ್ನಾಗಿಯೂ, ವಾಗೀಶ್ಯಾಂ—ವಾಗೀಶ್ವರರಿಂದ ವಾಗೀಶ್ವರಿಯ ಗರ್ಭದಲ್ಲಿ, ಜನಿತಂ—ಉಂಟುಮಾಡಲ್ಪಟ್ಟರುವಂಥದನ್ನಾಗಿಯೂ (ಭಾವಿಸಿ), ಅನಘಂ-ಶಿವಾಗ್ನಿಂ-ಪ್ರಕಲ್ಪ್ಯ—ಆದರಿಂದ ದೋಷರಹಿತವಾದ ಶಿವಾಗ್ನಿಯನ್ನಾಗಿ ಕಲ್ಪಿಸಿಕೊಂಡು, ನಾಡ್ಯಾ—'ಬ್ರಹ್ಮನಾಡಿ' ಎನಿಸಿಕೊಳ್ಳುವ ಸುಷುಮ್ನೆಯೆಂಬ ಮಧ್ಯನಾಡಿಯಿಂದ, ಪ್ರವಿಶ್ಯ—ಆ ಅಗ್ನಿಯೊಳಗೆ ಪ್ರವೇಶಿಸಿ (ಪ್ರವೇಶಿಸಿದಂತೆ ಭಾವಿಸಿ) ತತ್ಸ್ವಾಂತೇ—ಆ ಅಗ್ನಿಯ ಹೃದಯಕಮಲದಲ್ಲಿ, ಪೂರ್ವವತ್—ಮೊದಲು

ಪೂಜಿಸಿದಂತೆ, ಪರಶಿವೇ-ಆರ್ಚಿತೇ ಸತಿ—ಪರಶಿವನು ಪೂಜಿಸಲ್ಪಟ್ಟ ಮೇಲೆ, ನಿಸ್ಸೃತ್ಯ—ಆ ಅಗ್ನಿ ಶರೀರದಿಂದ ಹೊರಗೆ ಬಂದು, ಊರ್ಧ್ವಾನನೇ—ಮೇಲಿನ ದಾದ ಈಶಾನಮುಖದಲ್ಲಿ, ವಹ್ನ್ಯೂರ್ಧ್ವಾಸ್ಯ ಸುಸಂಧಿತೇ ಸತಿ—ವಹ್ನಿಮುಖ-ಊರ್ಧ್ವಮುಖ ಈ ಎರಡಕ್ಕೂ ಚನ್ನಾಗಿ ಸಂಧಾನಮಾಡಿದ ಮೇಲೆ, ಘೃತ ತಿಲೈಃ—ತುಪ್ಪ-ಎಳ್ಳು ಇವುಗಳಿಂದ, ಹುತ್ವಾ—ಹೋಮಮಾಡಿ, ಶಕ್ತಿಸ್ರುಚಿ—ಶಕ್ತಿರೂಪವಾಗಿ ಭಾವಿಸಲ್ಪಟ್ಟ ಸ್ರುಕ್ಕೆಂಬ ಪಾತ್ರದಲ್ಲಿ, ಸ್ರುವಶಂಭುಂ—ಶಂಭು ಸ್ವರೂಪವಾಗಿ ಭಾವಿಸಲ್ಪಟ್ಟ ಸ್ರುವವೆಂಬ ಪಾತ್ರವನ್ನು, ನ್ಯಸ್ತ್ವಾ-(ನ್ಯಸ್ಯ)—ಇಟ್ಟು, ಸ್ವಾತ್ಮನಿನದಾತ್—ಆತ್ಮನಾದಡವರೆಗೆ, ಮಂತ್ರಂ—ಮೂಲಮಂತ್ರ ವನ್ನು, ಸಮುಚ್ಚಾರಯನ್—ಉಚ್ಚರಿಸುತ್ತಿರುವವನಾಗಿ, ಶಕ್ತ್ಯಮೃತಂ—ಶಕ್ತಿ ಮಂಡಲದಲ್ಲಿ ಅಧಿಷ್ಠಿತವಾಗಿರುವ ಅಮೃತವನ್ನು, ಕ್ಷುಬ್ಧ್ವಾ—ಕ್ಷೋಭಿಸಿ, ತತಃ—ಆ ಶಕ್ತಿಮಂಡಲದಿಂದ, ನಾಡ್ಯಾ—ಸುಷುಮ್ನಾನಾಡಿಯ ಮೂಲಕವಾಗಿ, ಪ್ರಸರತಃ—ಸ್ರವಿಸುತ್ತಿರುವ, ಪ್ರಯುಕ್ತಾತ್ ಜ್ಯತಃ—ಸ್ರುಕ್ಕಿನಲ್ಲಿ ಸ್ರುವದಿಂದ ಬಿಡ ಲ್ಪಟ್ಟ ಆಜ್ಯಧಾರೆಯಿಂದ, ಅಮೃತಧೀಃ—ಆದನ್ನು ಅಮೃತವೆಂದು ಭಾವಿಸುವ ಬುದ್ಧಿಯುಳ್ಳವನಾಗಿ, ಹೋಮವಿಧೇಃ-ಪೂರ್ತ್ಯೈ—ಹೋಮಕಾರ್ಯದ ಪೂರ್ತಿಗೋಸ್ಕರ, ಸ್ರುಚಾ—ಸ್ರುಕ್ಪಾತ್ರದಿಂದ, ಪೂರ್ಣಾಂ—ಪೂರ್ಣಾಹುತಿಯನ್ನು, ಶನೈಃ—ಮೆಲ್ಲಗೆ, ವಿದಧ್ಯಾತ್—ಮಾಡಬೇಕು. ||೫೩-೫೪||

**ಅವತರಣಿಕೆ**— ಅನೇಕವಿಧವಾದ ಕಾಮ್ಯಫಲಗಳ ಸಿದ್ಧಿಗಾಗಿ ಕಾಮ್ಯ ಹೋಮವಿಧಿಕ್ರಮವನ್ನು ಐವತ್ತೈದು ಐವತ್ತಾರನೆಯ ಶ್ಲೋಕಗಳೆರಡರಲ್ಲಿ ತೋರಿಸುತ್ತಾರೆ.

**ಸ್ವರ್ಣಾಪ್ತ್ಯೈ ಮಧುನಾ ಚ ಗವ್ಯಪಯಸಾ ಗೋಸಿದ್ಧಯೇ ಸರ್ಪಿಷಾ**
**ಲಕ್ಷ್ಮ್ಯೈ ಶರ್ಕರಯಾ ಜುಹೋತು ಯಶಸೇ ದಧ್ನಾ ತು ಸರ್ವಾರ್ಥಯೇ।**
**ಅನ್ನೈರನ್ನಸಮೃದ್ಧಯೇ ಚ ಸತಿಲೈರ್ದ್ರವ್ಯಾಪ್ತಯೇ ತಂಡುಲೈಃ**
**ಲಾಜೈಸ್ಸದ್ಯಶಸೇ ಕುಸುಂಭಕುಸುಮೈಸ್ಸಾಶ್ವಾದಿಜೈರ್ವಾಸಸೇ ||೫೫||**
**ಪದ್ಮೈರ್ಭೂಪತಿಮುತ್ಪಲೈರ್ನೃಪವಧೂಸ್ತನ್ಮಂತ್ರಿಣಃ ಕೈರವೈ**
**ರಶ್ವತ್ಥಾದಿಸಮಿದ್ಭಿರಗ್ರಜಮುಖಾನ್ ವರ್ಣಾನ್ ವಧೂಃ ಪಿಷ್ಟಜೈಃ।**
**ಪುತ್ಥಳ್ಯಾದಿಭಿರನ್ಯಹಂ ಚ ವಶಯೇಜ್ಜಂಭಂ ತ್ವನಾವೃಷ್ಟಯೇ**
**ಲೋಣೈರ್ವೃಷ್ಟಿಸಮೃದ್ಧಯೇ ಚ ಜುಹುಯಾನ್ಮಂತ್ರೀ ಪುನರ್ವೇತಸೈಃ ||೫೬||**

**ಟೀಕೆ**= ಸ್ವರ್ಣಾಪ್ತ್ಯೈ—ಸುವರ್ಣಲಾಭಕ್ಕೋಸ್ಕರ, ಮಧುನಾ ಚ— ಜೇನುತುಪ್ಪದಿಂದಲೂ, ಗೋಸಿದ್ಧ್ಯಯೇ—ಪಶುಲಾಭಕ್ಕೋಸ್ಕರ, ಗವ್ಯಪಯಸಾ ಚ—ಗೋವಿನಹಾಲಿನಿಂದಲೂ, ಲಕ್ಷ್ಮ್ಯೈ—ಪುತ್ರಾದಿಸಮೃದ್ಧಿಗೋಸ್ಕರ, ಸರ್ಪಿಷಾ—ಗೋವಿನತುಪ್ಪದಿಂದಲೂ, ಯಶಸೇ—ಕೀರ್ತಿಲಾಭಕ್ಕೋಸ್ಕರ, ಶರ್ಕರಯಾ—ಸಕ್ಕರೆಯಿಂದಲೂ, ಸರ್ವಾರ್ಥಯೇ—ಸಮಸ್ತಪದಾರ್ಥಗಳ ಸಮೃದ್ಧಿಗೋಸ್ಕರ, ದಧ್ನಾ—ಮೊಸರಿನಿಂದಲೂ, ಅನ್ನಸಮೃದ್ಧ್ಯಯೇ—ಅನ್ನಾಭಿವೃದ್ಧಿಗೋಸ್ಕರ, ಅನ್ನೈಃ—ನಾನಾವಿಧವಾದ ಅನ್ನಗಳಿಂದಲೂ, ದ್ರವ್ಯಾಪ್ತಯೇ—ದ್ರವ್ಯಲಾಭಕ್ಕೋಸ್ಕರ, ಸತಿಲೈಃ-ತಂಡುಲೈಃ—ತಿಲಮಿಶ್ರಿತವಾದ ಅಕ್ಕಿಯಿಂದಲೂ, ಸದ್ಯಶಸೇ—ಉತ್ತಮವಾದ ಕೀರ್ತಿಯ ಲಾಭಕ್ಕೋಸ್ಕರ, ಲಾಜೈಃ—ಅರಳುಗಳಿಂದಲೂ, ವಾಸಸೇ—ವಸ್ತ್ರಲಾಭಕ್ಕೋಸ್ಕರ, ಸಾಶ್ವಾರಿಜೈಃ—ಅಶ್ವಶತ್ರುವೆನಿಸಿಕೊಂಡಿರುವ ಎಮ್ಮೆಯ ತುಪ್ಪದೊಡನೆ ಕೂಡಿರುವ, ಕುಸುಂಭಕುಸುಮೈಃ—ಕುಸುಂಬೆಯ ಹೂವುಗಳಿಂದಲೂ, ಜುಹೋತು—ಹೋಮಮಾಡಬೇಕು. (ಕಿಂಚ)—ಮತ್ತು ಭೂಪತಿಂ—ರಾಜನನ್ನು, ಪದ್ಮೈಃ—ಕಮಲಪುಷ್ಪಗಳಿಂದಲೂ, ನೃಪವಧೂಃ—ರಾಜಸ್ತ್ರೀಯರನ್ನು, ಉತ್ಪಲೈಃ—ನೈದಿಲೆಹೂವುಗಳಿಂದಲೂ, ತನ್ಮಂತ್ರಿಣಃ—ಆ ರಾಜನ ಮಂತ್ರಿಗಳನ್ನು, ಕೈರವೈಃ—ಕೈರವವೆಂಬ ಕಮಲವಿಶೇಷಗಳಿಂದಲೂ, ಅಗ್ರಜಮುಖಾನ್-ವರ್ಣಾನ್—ಬ್ರಾಹ್ಮಣ-ಕ್ಷತ್ರಿಯ-ವೈಶ್ಯ-ಶೂದ್ರರೆಂಬ ನಾಲ್ಕುವರ್ಣದವರನ್ನು, ಅಶ್ವತ್ಥಾದಿಸಮಿದ್ಭಿಃ—ಕ್ರಮವಾಗಿ ಅರಳಿ-ಮಾವು-ಅತ್ತಿ-ಆಲ-ಇವುಗಳ ಸಮಿತ್ತುಗಳಿಂದಲೂ, ವಧೂಃ—(ಸಾಮಾನ್ಯವಾಗಿ) ಸ್ತ್ರೀಯರನ್ನು, ಪಿಷ್ಟಜೈಃ—ಅಕ್ಕಿಯಹಿಟ್ಟಿನಿಂದ ಮಾಡಲ್ಪಟ್ಟ, ಪುತ್ಥಳ್ಯಾದಿಭಿಃ—ಅವರವರಿಗೆ ಸದೃಶಗಳಾದ ಬೊಂಬೆಗಳಿಂದಲೂ, ಅನ್ವಹಂ—ಸ್ವಾಧೀನರಾಗುವವರೆಗೆ ಪ್ರತಿನಿತ್ಯವೂ ಹೋಮಮಾಡಿ, ವಶಯೇತ್—ಸ್ವಾಧೀನಪಡಿಸಿಕೊಳ್ಳಬೇಕು. (ಸರ್ವವಶ್ಯಾರ್ಥಂ)—ಸರ್ವವಶೀಕರಣಕ್ಕಾಗಿ, ಜಂಭಂ—ನಿಂಬೇಹಣ್ಣನ್ನು, ಜುಹುಯಾತ್—ಹೋಮಮಾಡಬೇಕು. (ಕಿಂಚ)—ಮತ್ತು, ಅನಾವೃಷ್ಟ್ಯಯೇ—ಮಳೆಯಿಲ್ಲದಂತೆಮಾಡುವುದಕ್ಕಾಗಿ, ಲೋಣೈಃ—ಸಮುದ್ರಜನ್ಯವಾದ ಲವಣಗಳಿಂದಲೂ, ವೃಷ್ಟಿಸಮೃದ್ಧ್ಯಯೇ—ಮಳೆಯನ್ನು ಹೆಚ್ಚಿಸುವುದಕ್ಕಾಗಿ, ವೇತಸೈಃ—ನದಿಯ ದಡಗಳಲ್ಲಿ ಬೆಳೆದಿರುವ 'ನೀರವಂಜಿ' ಎಂಬ ಔಷಧಿಗಳಿಂದಲೂ, ಜುಹುಯಾತ್—ಹೋಮಮಾಡಬೇಕು. ಪುನಃ—ಆದರೆ, ಸರ್ವಮಿದಂ—ಇದೆಲ್ಲವನ್ನೂ, ಮಂತ್ರೀ ಸನ್—ಆ ಆ ಮಂತ್ರಗಳನ್ನು ತಿಳಿದವನಾಗಿ, (ಕುರ್ಯಾತ್)—ಆ ಆ ಮಂತ್ರಗಳಿಂದಲೇ ಮಾಡಬೇಕು.

**ಅವತರಣಿಕೆ**— ದೀಕ್ಷಾವಿಶೇಷಗಳನ್ನೂ ಅವುಗಳ ಫಲವಿಶೇಷಗಳನ್ನೂ ಐವತ್ತೇಳು ಐವತ್ತೆಂಟನೆಯ ಶ್ಲೋಕಗಳಲ್ಲಿ ಹೇಳುತ್ತಾರೆ.—

**ದೀಕ್ಷಾ ಭೌತಿಕನೈಷ್ಠಿಕೀತ್ಯಭಿಹಿತಾ ತ್ವಾದ್ಯಾ ದ್ವಿಧಾ ಲೌಕಿಕೀ**
**ದೇಹೋರ್ಧ್ವಾಷ್ಟಗುಣರ್ದ್ಧಿದೇಷ್ಟಭುವನೇ ಸದ್ಭೋಗದಾ ಸಾಧಕೇ ।**
**ಅನ್ಯಾ ಸ್ಯಾಚ್ಛಿವಧರ್ಮಿಣೀತ್ಯಭಿಹಿತಾ ಚಾದ್ಯಾ ಸಬೀಜಾಹ್ವಯಾ**
**ಶಕ್ತಾನಾಮಪರಾ ತ್ವಶಕ್ತವಿಷಯೇ ನಿರ್ಬೀಜಕಾಖ್ಯಾ ತಥಾ ॥೫೭॥**

**ಪಾಕೇ ತೀವ್ರತರೇ ರುಜಸ್ಸತಿ ನರೇ ಸದ್ಯಸ್ತು ನಿರ್ವಾಣದಾ**
**ನಿರ್ಬೀಜಾ ಪರಿಶೋಧಿತಸ್ವಸಮಯಾಚಾರೇಶಭಕ್ತೇ ಸ್ಥಿತಾ ।**
**ವಿಜ್ಞಾನಪ್ರಳಯಾಕಲಾತ್ಮಸು ನಿರಾಧಾರಾ ಶಿವೇನೈವ ಸಾ**
**ಸಾಧಾರಾ ಸಕಲಾತ್ಮನಾಂ ನ ಚ ತನೋರ್ಜಾತೇಶ್ಚ ಶೈವಾತ್ಮನಾಂ ॥೫೮॥**

**ಟೀಕೆ**—ದೀಕ್ಷಾ—ಭೋಗಮೋಕ್ಷಗಳನ್ನು ಕೊಡುವಂಥದಾಗಿಯೂ, ಪಾಶಕ್ಷಯವನ್ನು ಮಾಡುವಂಥದಾಗಿಯೂ ಇರುವುದರಿಂದ ದೀಕ್ಷೆಯೆಂಬ ಅನ್ವರ್ಥನಾಮಧೇಯವನ್ನು ಪಡೆದಿರುವ ಕ್ರಿಯಾರೂಪವಾದ ಸಂಸ್ಕಾರವಿಶೇಷವು. ಭೌತಿಕನೈಷ್ಠಿಕೀತಿ—ವಿಚಿತ್ರಭೂತಗಳನ್ನು (ಭೋಗಗಳನ್ನು) ಕೊಡುವುದರಿಂದ 'ಭೌತಿಕೀ' ಎಂಬುದಾಗಿಯೂ, ನಿಷ್ಠೆಯನ್ನು ಕೊಡುವುದರಿಂದ 'ನೈಷ್ಠಿಕೀ' ಎಂಬುದಾಗಿಯೂ, ದ್ವಿಧಾ—ಎರಡುವಿಧವಾಗಿ, ಅಭಿಹಿತಾ—(ಆಗಮಗಳಲ್ಲಿ) ಹೇಳಲ್ಪಟ್ಟಿದೆ. (ತತ್ರ) ಅವುಗಳಲ್ಲಿ, ಆದ್ಯಾ—ಮೊದಲನೆಯದಾದ ಭೌತಿಕದೀಕ್ಷೆಯು ಲೌಕಿಕೀ—'ಲೋಕಧರ್ಮಿಣಿ' ಎನಿಸಿಕೊಂಡು, ಸಾಧಕೇ—ಫಲಾಪೇಕ್ಷೆಯುಳ್ಳ ಆತ್ಮನಲ್ಲಿ, ದೇಹೋರ್ಧ್ವಾಷ್ಟಗುಣರ್ದ್ಧಿದಾ—ದೇಹಾವಸಾನಾನಂತರದಲ್ಲಿ ಅಣಿಮಾದ್ಯಷ್ಟಸಿದ್ಧಿಗಳನ್ನು ಕೊಡುವಂಥದಾಗಿಯೂ, ಇಷ್ಟಭುವನೇ—ಅಭಿಮತವಾದ ಲೋಕದಲ್ಲಿ, ಸದ್ಭೋಗದಾ ಚ—ಉತ್ತಮವಾದ ಭೋಗಗಳನ್ನು ಕೊಡುವಂಥದಾಗಿಯೂ, ಸ್ಯಾತ್—ಆಗುವುದು. ಅನ್ಯಾ—'ಅಲೌಕಿಕೀ' ಎಂಬ ಮತ್ತೊಂದು ಹೆಸರುಳ್ಳ ಎರಡನೆಯದಾದ ನೈಷ್ಠಿಕದೀಕ್ಷೆಯು, ಶಿವಧರ್ಮಿಣೀತಿ—'ಶಿವಧರ್ಮಿಣೀ) ಎಂದು ಅಭಿಹಿತಾ—ಹೇಳಲ್ಪಟ್ಟುದಾಗಿ ಸ್ಯಾತ್—ಆಗುವುದು. ಕಿಂಚ—ಮತ್ತು, ಆದ್ಯಾ—ಮೊದಲನೆಯದಾದ ಆ ಭೌತಿಕದೀಕ್ಷೆಯು, ಶಕ್ತಾನಾಂ—ಸಮಯಾಚಾರಗಳನ್ನು ಆಚರಿಸಲು ಸಮರ್ಥರಾಗಿರುವವರ (ವಿಷಯದಲ್ಲಿ), ಸಬೀಜಾಹ್ವಯಾ—(ಸಬೀಜಾ) (ಸಾಪೇಕ್ಷಾ) ಎಂಬ ಹೆಸರುಳ್ಳುದಾಗಿ, ಸ್ಯಾತ್—ಆಗುವುದು. ತಥಾ—ಹಾಗೆಯೇ, ಅಪರಾ—ಎರಡನೆಯದಾದ ನೈಷ್ಠಿಕದೀಕ್ಷೆಯು

ಅಶಕ್ತವಿಷಯೇ—ಸಮಯಾಚಾರಗಳನ್ನು ಆಚರಿಸಲು ಸಮರ್ಥರಾಗದಿರುವವರ ವಿಷಯದಲ್ಲಿ, ನಿರ್ಬೀಜಕಾಖ್ಯಾ—(ನಿರ್ಬೀಜಾ) (ನಿರಪೇಕ್ಷಾ) ಎಂಬ ಹೆಸರುಳ್ಳುದಾಗಿ, ಸ್ಯಾತ್—ಆಗುವುದು. ರುಜಃ—ಆಣವಮಲಕ್ಕೆ, ತೀವ್ರತರಪಾಕೇ ಸತಿ—ಹೆಚ್ಚಿದ ಪರಿಪಾಕವುಂಟಾಗುತ್ತಿರಲು, ಈಶಭಕ್ತೇ—ಪರಶಿವನಲ್ಲಿ ಭಕ್ತಿಯುಳ್ಳ, ನರೇ—ವಿರಕ್ತಪುರುಷನಲ್ಲಿ, ಸ್ಥಿತಾ—ಇರುವಂಥದಾದ (ಪ್ರಯೋಗಿಸಲ್ಪಟ್ಟ ದಾದ), ಪರಿಶೋಧಿತಸ್ವಸಮಯಾಚಾರಾ—ಶೋಧಿಸಲ್ಪಟ್ಟ (ಶುದ್ಧಿಯನ್ನು ಪಡೆದಿರುವ) ತನ್ನ ಸಮಯಾಚಾರವುಳ್ಳ, ನಿರ್ಬೀಜಾ—ಆ ನಿರ್ಬೀಜದೀಕ್ಷೆಯು, ಸದ್ಯಃ—ತತ್‌ಕ್ಷಣದಲ್ಲಿಯೇ, ನಿರ್ವಾಣದಾ—ಮೋಕ್ಷವನ್ನು ಕೊಡುವಂಥದಾಗಿ, ಸ್ಯಾತ್—ಆಗುವುದು. (ಕಿಂಚ)—ಮತ್ತು, ಸಾ—ಆ ದೀಕ್ಷೆಯು, ವಿಜ್ಞಾನಪ್ರಳಯಾಕಲಾತ್ಮಸು—ವಿಜ್ಞಾನಕಲರೆನಿಸಿಕೊಂಡ ಆತ್ಮಗಳ ವಿಷಯದಲ್ಲಿಯೂ, ಪ್ರಳಯಾಕಲರೆನಿಸಿಕೊಂಡ ಆತ್ಮಗಳ ವಿಷಯದಲ್ಲಿಯೂ, ಶಿವೇನೈವ—ಶಿವನಿಂದಲೇ ಸಾಕ್ಷಾತ್ತಾಗಿ, (ಕ್ರಿಯಮಾಣತ್ವಾತ್) ಮಾಡಲ್ಪಡುವುದಾದುದರಿಂದ, ನಿರಾಧಾರಾ—ಆಧಾರವಿಲ್ಲದುದಾಗಿ, ಸ್ಯಾತ್—ಆಗುವುದು. ಸಕಲಾತ್ಮನಾಂ—ಸಕಲರೆನಿಸಿಕೊಂಡ ಆತ್ಮಗಳ ವಿಷಯದಲ್ಲಿ, (ಗುರುದ್ವಾರಾ)—ಆಚಾರ್ಯನ ಮೂಲಕವಾಗಿ, (ಕ್ರಿಯಮಾಣತ್ವಾತ್)—ಮಾಡಲ್ಪಡುವುದಾದುದರಿಂದ, ಸಾಧಾರಾ—ಆಧಾರದೊಡನೆ ಕೂಡಿದುದಾಗಿ, ಸ್ಯಾತ್—ಆಗುವುದು. ಕಿಂಚ—ಮತ್ತು, ಇಯಂ ದೀಕ್ಷಾ—ಈ ದೀಕ್ಷೆಯು, ತನೋಃ—ಶರೀರಕ್ಕೂ, ಜಾತೇಶ್ಚ—ಜಾತಿಗೂ, ನ ಸ್ಯಾತ್—ಶುದ್ಧಿಕರವಾದ ಸಂಸ್ಕಾರವಾಗಲಾರದು. (ಕಿಂತು)—ಮತ್ತೇನಂದರೆ, ಶೈವಾತ್ಮಾನಾಂ—ಶಿವತ್ವವನ್ನು ಪಡೆವುದಕ್ಕೆ ಯೋಗ್ಯವಾದ ಆತ್ಮಸ್ವರೂಪಕ್ಕೇ ಶುದ್ಧಿಕರವಾದ ಸಂಸ್ಕಾರವಾಗುವುದು ||೫೭||೫೮||

**ಅವತರಣಿಕೆ**— ದೀಕ್ಷೆಗೆ ಯೋಗ್ಯವಾದ ಮಾಸ-ನಕ್ಷತ್ರ-ವಾರಗಳನ್ನು ಐವತ್ತೊಂಬತ್ತನೆಯ ಶ್ಲೋಕದಲ್ಲಿ ಹೇಳುತ್ತಾರೆ.

**ಕಾಲೇ ವಾರ್ಷಿಕಪೌಷಚೈತ್ರರಹಿತೇ ದೇವೋತ್ಸವೇ ದಾಮನೇ**
**ಸಂಕ್ರಾಂತೌ ವಿಷುವೇಽಯನೇ ಗ್ರಹಣಯೋರ್ದೀಕ್ಷಾಪವಿತ್ರೋತ್ಸವೇ ।**
**ಮೈತ್ರಾರ್ಕಾನಿಲಸೌಮ್ಯಪೈತ್ರನಿಋತೀಪೌಷ್ಣಾಖ್ಯ ಶಾಜ್ಞ್ರಿಣೀಶ್ವರಾ**
**ಶ್ಚೈವಂ ರೋಹಿಣಿಕೋತ್ತರಾತ್ರಯಮಘೋ ಭೌಮಾರ್ಕವಾರೇಽ**
**ಶುಭಂ ||೫೯||**

**ಟೀಕೆ**— ವಾರ್ಷಿಕಪೌಷಚೈತ್ರರಹಿತೇ—ಶ್ರಾವಣಭಾದ್ರಪದಮಾಸಗಳೇನು ಪುಷ್ಯ-ಚೈತ್ರ ಮಾಸಗಳೇನು ಇವುಗಳಿಂದ ಬಿಡಲ್ಪಟ್ಟ, ಕಾಲೇ—ಇತರ

ಕಾಲವಲ್ಲಿಯೂ, ದೇವೋತ್ಸವೇ—ಸ್ವಾಮಿಯ ರಥೋತ್ಸವಾದಿಕಾಲದಲ್ಲಿಯೂ, ದಾಮನೇ—ದಮನೋತ್ಸವಕಾಲದಲ್ಲಿಯೂ, ಸಂಕ್ರಾಂತೌ—ಇತರಸಂಕ್ರಮಣ ಕಾಲದಲ್ಲಿಯೂ, ವಿಷುವೇ—ಮೇಷತುಲಾಸಂಕ್ರಮಣಕಾಲದಲ್ಲಿಯೂ, ಅಯನೇ—ಉತ್ತರಾಯಣ-ದಕ್ಷಿಣಾಯನ ಪುಣ್ಯಕಾಲಗಳಲ್ಲಿಯೂ, ಗ್ರಹಣಯೋಃ—ಚಂದ್ರಸೂರ್ಯರ ಗ್ರಹಣಕಾಲದಲ್ಲಿಯೂ, ಪವಿತ್ರೋತ್ಸವೇ—ಪವಿತ್ರೋತ್ಸವಕಾಲದಲ್ಲಿಯೂ, ದೀಕ್ಷಾ—ದೀಕ್ಷೆಯು, (ಶಸ್ತಾ ಸ್ಯಾತ್)—ಪ್ರಶಸ್ತವಾಗುವುದು. (ಕಿಂಚ)—ಮತ್ತು ಮೈತ್ರಾರ್ಕಾನಿಲಸೌಮ್ಯಪೈತೃನಿಋತೀಪೌಷ್ಣಾಖ್ಯಶಾರ್ಙ್ಗೀಶ್ವರಾಃ—ಅನೂರಾಧೆ, ಹಸ್ತ, ಸ್ವಾತಿ, ಮೃಗಶೀರ್ಷ, ಮಖೆ, ಮೂಲ, ರೇವತಿ, ಶ್ರವಣ, ಆರ್ದ್ರಾ ಈ ನಕ್ಷತ್ರಗಳೂ, ಚೈವಂ—ಪುಷ್ಯ, ರೋಹಿಣಿಕಾ—ರೋಹಿಣಿ, ಉತ್ತರಾತ್ರಯಂ—ಉತ್ತರಾ-ಉತ್ತರಾಷಾಢ-ಉತ್ತರಾಭಾದ್ರ, (ಏತಾನಿ)—ಈ ನಕ್ಷತ್ರಗಳೂ (ದೀಕ್ಷೆಗೆ), (ಶಸ್ತಾನಿ ಸ್ಯುಃ)—ಪ್ರಶಸ್ತಗಳಾಗಿರುವುವು. ಅಥೋ—ಆದರೆ, ಭೌಮಾರ್ಕವಾರೇ—ಮಂಗಳವಾರದಲ್ಲಿಯೂ ಭಾನುವಾರದಲ್ಲಿಯೂ, ಅಶುಭಂ ಸ್ಯಾತ್—ದೀಕ್ಷೆಯು ಶುಭವಲ್ಲ ||೫೯||

**ಅವತರಣಿಕೆ**= ಉತ್ತಮೋತ್ತಮ-ಉತ್ತಮ-ಮಧ್ಯಮ-ಉತ್ತಮಾಧಮ-ಮಧ್ಯಮೋತ್ತಮ-ಮಧ್ಯಮಮಧ್ಯಮ-ಮಧ್ಯಮಾಧಮ--ಅಧಮೋತ್ತಮ-ಅಧಮಮಧ್ಯಮ-ಅಧಮಾಧಮ-ಎಂಬುದಾಗಿ ಒಂಬತ್ತುಬಗೆಯಾದ ಲಿಂಗಗಳಿಗೂ ದೀಕ್ಷೆಗಳಿಗೂ ಆವಶ್ಯಕವಾಗಿರುವ ಮಂಟಪರಚನಾಕ್ರಮವನ್ನು ಅರವತ್ತನೆಯ ಶ್ಲೋಕದಲ್ಲಿ ಹೇಳುತ್ತಾರೆ.—

**ಯಾಗಧಾಮಕೃತಭೂಗೃಹಾದಿಕಂ ಶೂನ್ಯರಾಮಖಯಮಾಷ್ಟಪಂಕ್ತಿಭಿಃ ।**
**ಭಾಸ್ಕರೇಣ ಚ ವಿಕಲ್ಪಿತೈಃ ಕರೈಃ ಕಲ್ಪಯೇತ್ಸವಿವರಂ ಸಲಕ್ಷಣಂ ||೬೦||**

**ಟೀಕೆ**= ಯಾಗಧಾಮಕೃತಭೂಗೃಹಾದಿಕಂ—ಯಾಗಶಾಲೆಯಾಗಿ ಏರ್ಪಡಿಸಲ್ಪಟ್ಟ ಭೂಮಿಯಲ್ಲಿ ಗೃಹಾಗ್ರಮಂಟಪ-ಆಲಯಾಗ್ರಮಂಟಪ ಮುಂತಾದುದನ್ನು, ಶೂನ್ಯರಾಮಖಯಮಾಷ್ಟ-ಪಂಕ್ತಿಭಿಃ—(ಸೊನ್ನೆ-ಮತ್ತು-ಮೂರು) ಎಂದರೆ-ಮೂವತ್ತು (ಸೊನ್ನೆ-ಮತ್ತು-ಎರಡು) ಎಂದರೆ-ಇಪ್ಪತ್ತು ಎಂಟು ಹತ್ತು ಈ ಸಂಖ್ಯೆಗಳಿಂದಲೂ, ಭಾಸ್ಕರೇಣ ಚ—ಹನ್ನೆರಡರಿಂದಲೂ, ವಿಕಲ್ಪಿತೈಃ—ವಿಕಲ್ಪಿಸಲ್ಪಟ್ಟ, ಕರೈಃ—ಹಸ್ತಪ್ರಮಾಣಗಳಿಂದ (ಅಳತೆಯಿಟ್ಟು), ಸವಿವರಂ—ಕುಂಡಸಹಿತವಾಗಿಯೂ, ಸಲಕ್ಷಣಂ—ಲಕ್ಷಣಸಹಿತವಾಗಿಯೂ, ಕಲ್ಪಯೇತ್—ಮಾಡಬೇಕು ||೬೦||

**ಅವತರಣಿಕೆ**— ಉಕ್ತಲಕ್ಷಣೋಪೇತವಾದ ಮಂಟಪದಲ್ಲಿ ವೇದಿಕೆಗಳ ವಿಸ್ತಾರಲಕ್ಷಣಗಳನ್ನು ಅರವತ್ತೊಂದನೆಯ ಶ್ಲೋಕದಲ್ಲಿ ತೋರಿಸುತ್ತಾರೆ.—

**ಏಕದ್ವಿತ್ರಿಚತುಷ್ಕಭೂತರಸಯುಕ್ಸಪ್ತಾಷ್ಟಭಿರ್ಮಧ್ಯತಃ**
**ಪ್ರತ್ಯೇಕಂ ತು ವಿಕಲ್ಪಿತೈರ್ಗುರುಕರೈರಷ್ಟಾಂಗುಳೋಚ್ಛ್ರಯತಃ ।**
**ವೇದೀದರ್ಪಣಸನ್ನಿಭಾ ಸಮಚತುಷ್ಕೋಣಾ ಸನೇಮಿಸ್ತ್ವಧ**
**ಸ್ಸೂತ್ರಂ ತತ್ತ್ರಿಗುಣಂ ಸುವರ್ತಿತಮಥೋ ಸೋಮಪ್ರಭಂ ಸದ್ಘಟಿ॥೬೧॥**

**ಟೀಕೆ**— ಏಕದ್ವಿತ್ರಿಚತುಷ್ಕಭೂತರಸಯುಕ್‌ಸಪ್ತಾಷ್ಟಭಿಃ—ಒಂದು-ಎರಡು-ಮೂರು--ನಾಲ್ಕು-ಐದು--ಆರು--ಏಳು-ಎಂಟು--ಈ ಕ್ರಮದಲ್ಲಿ, ಪ್ರತ್ಯೇಕಂ—ಪ್ರತಿಯೊಂದೊಂದಾಗಿ, ವಿಕಲ್ಪಿತೈಃ—ಏರ್ಪಡಿಸಲ್ಪಟ್ಟ ಲೆಕ್ಕವುಳ್ಳ, ಗುರುಕರೈಃ—ಗುರುವಿನ ಹಸ್ತಪ್ರಮಾಣಗಳಿಂದ, (ಪರಿಮಿತವಿಸ್ತಾರಾ)—ಅಳೆಯಲ್ಪಟ್ಟ ವಿಸ್ತಾರವುಳ್ಳುದಾಗಿಯೂ, ಉಚ್ಛ್ರಯತಃ—ಎತ್ತರದಲ್ಲಿ, ಅಷ್ಟಾಂಗುಲಾ—ಎಂಟಂಗುಲವುಳ್ಳುದಾಗಿಯೂ, ವೇದೀ—ವೇದಿಕೆಯು, ಮಧ್ಯತಃ—ಮಂಟಪದ ಮಧ್ಯದಲ್ಲಿ, (ಕಾರ್ಯಾ)—ಮಾಡಲ್ಪಡತಕ್ಕುದು. (ಕಿಂಚ)—ಮತ್ತು (ಸಾ) ವೇದಿಃ—ಆ ವೇದಿಕೆಯು, ದರ್ಪಣಸನ್ನಿಭಾ—ಕನ್ನಡಿಯಂತೆ ನಿರ್ಮಲವಾಗಿಯೂ, ಸಮಚತುಷ್ಕೋಣಾ—ಸಮವಾದ ನಾಲ್ಕು ಮೂಲೆಗಳುಳ್ಳುದಾಗಿಯೂ, ಅಧಃ—ಕೆಳಭಾಗದಲ್ಲಿ, ಸನೇಮಿಶ್ಚ—ನೇಮಿಯೆಂಬ ಉಪವೇದಿಕೆಯೊಡನೆ ಕೂಡಿದುದಾಗಿಯೂ, ಭವೇತ್—ಆಗಬೇಕು. ತತ್ಸೂತ್ರಂ—ಆ ನೇಮಿಯಲ್ಲಿರುವ ಸೂತ್ರವು, ತ್ರಿಗುಣಂ—ಮೂರು ಎಳೆಗಳುಳ್ಳುದಾಗಿಯೂ, ಸೋಮಪ್ರಭಂ—ಚಂದ್ರನಂತೆ ಬಿಳುಪುಬಣ್ಣವುಳ್ಳುದಾಗಿಯೂ, ಸದ್ಘಟಿ—ಚನ್ನಾಗಿ ವೇದಿಕೆಯಲ್ಲಿ ಸಂಘಟಿಸಲ್ಪಟ್ಟುದಾಗಿಯೂ, ಅಥೋಸುವರ್ತಿತಂ—ಮತ್ತು ವೇದಿಕೆಯ ಸುತ್ತಲೂ ಚನ್ನಾಗಿ ಸುತ್ತಲ್ಪಟ್ಟುದಾಗಿಯೂ, ಸ್ಯಾತ್—ಇರಬೇಕು.

**ಅವತರಣಿಕೆ**— ಚತುಷ್ಕೋಣವೇ ಮೊದಲಾದ ಸಕಲಕುಂಡಗಳಿಗೂ ಸಾಮಾನ್ಯಲಕ್ಷಣವನ್ನು ಅರವತ್ತೆರಡನೆಯ ಶ್ಲೋಕದಲ್ಲಿ ಹೇಳುತ್ತಾರೆ.—

**ತಿರ್ಯಕ್ಖಾತಸಮೋರ್ಧ್ವಮೇಖಲಯುಜಾ ಖಾತೇನ ಚೈಕಂ ಕರಂ**
**ಕಂಠೋನ್ನತ್ಯವಿಯದಂಗುಳೋ ಬಹಿರಿತೋ ವೇದಾಗ್ನಿಯುಗ್ಮಾಂಗುಳೈಃ ।**
**ನೇಮೀನಾಂ ತ್ರಿತಯಂ ಸಮೋದಯಯುತಂ ಕುಂಡಂ ತದರ್ಧಾಯತಾ**
**ನಾಭಿಃ ಪಿಪ್ಪಲಪತ್ರವದ್ವಸುತತಾ ಚೈಕೋನ್ನತಾ ಕಂಠಗಾ ॥೬೨॥**

**ಟೀಕೆ**= ಕುಂಡಂ—ಸಾಮಾನ್ಯವಾಗಿ ಯಾವ ಕುಂಡವಾದರೂ, ತಿರ್ಯಕ್ಖಾತಸಮೋರ್ಧ್ವಮೇಖಲಯುಜಾ—ಮೇಲಿನ ಮೇಖಲೆಯೊಡನೆ ಅಡ್ಡವಾಗಿ ಅಗೆಯಲ್ಪಟ್ಟ ಮಧ್ಯಕ್ಕೆ ಸರಿಯಾದ ಅಳತೆಯುಳ್ಳ, ಖಾತೇನ—ಒಳಗಿನ ಆಳದ ಅಳತೆಯಿಂದ, ಏಕಂ ಕರಂ—ಒಂದು ಹಸ್ತಪ್ರಮಾಣವುಳ್ಳದಾಗಿರಬೇಕು. ಅಂತಃ—ಕುಂಡಮಧ್ಯದಲ್ಲಿ, ಕಂಠಃ—ಕಂಠಸ್ಥಾನವು, ಏಯದಂಗುಳಃ—ಒಂದು ಅಂಗುಳಪ್ರಮಾಣವುಳ್ಳದಾಗಿರಬೇಕು. ಇತೋ ಬಹಿಃ—ಈ ಕಂಠಕ್ಕೆ ಹೊರಭಾಗದಲ್ಲಿ, ನೇಮಿನಾಂ ತ್ರಿತಯಂ—ಮೇಖಲೆಗಳು ಮೂರೂ, ವೇದಾಗ್ನಿಯುಗ್ಮಾಂಗುಳೈಃ—ಮೇಲಿನಿಂದ ಕ್ರಮವಾಗಿ ನಾಲ್ಕು-ಮೂರು-ಎರಡು-ಅಂಗುಳಪ್ರಮಾಣಗಳಿಂದ, ಸಮೋದಯಯುತಂ—ಸರಿಯಾದ ಎತ್ತರವೂ ಅಗಲವೂ ಉಳ್ಳದಾಗಿರಬೇಕು. ನಾಭಿಃ—ಕುಂಡಮಧ್ಯದಲ್ಲ ಪದ್ಮಾಕಾರವಾಗಿ ರಚಿಸಲ್ಪಡುವ ನಾಭಿಸ್ಥಾನವು, ತದರ್ಧಾಯತಾ—ಅದರ ಅರ್ಧವಾದ ಹನ್ನೆರಡು ಅಂಗುಲಗಳ ವಿಸ್ತಾರವುಳ್ಳದಾಗಿರಬೇಕು. (ಯೋನಿಃ)—ಕುಂಡದ ಯೋನಿಸ್ಥಾನವು, ವಸುತತಾ—ಎಂಟುಅಂಗುಲ ವಿಸ್ತಾರವುಳ್ಳದಾಗಿಯೂ, ಏಕೋನ್ನತಾ—ಒಂದಂಗುಲ ಎತ್ತರವುಳ್ಳದಾಗಿಯೂ, ಕಂಠಗಾ ಚ—ಕುಂಡದ ಕಂಠಪರ್ಯಂತವೂ ವ್ಯಾಪಿಸಿರುವಂಥದಾಗಿಯೂ, ಪಿಪ್ಪಲಪತ್ರವತ್—ಮೇಖಲೆಯ ಮೇಲುಭಾಗದಲ್ಲಿ ಅರಳೆಯ ಎಲೆಯಂತೆ, ಸ್ಯಾತ್—ಇರಬೇಕು ||೬೨||

**ಅವತರಣಿಕೆ**= ಯೋನಿಕುಂಡ-ಅರ್ಧಚಂದ್ರಕುಂಡ-ಈ ಎರಡು ಕುಂಡಗಳ ಲಕ್ಷಣಗಳನ್ನು ಅರವತ್ತುಮೂರನೆಯ ಶ್ಲೋಕದಲ್ಲಿ ಹೇಳುತ್ತಾರೆ.—

**ಕ್ಷೇತ್ರಾಂಶಪಂಚಮವಿಭಾಗವಿನಿರ್ಗಮೇಣ**
**ಯೋನಿಶ್ಚ ಕೋಣಚತುರಂಶಪರಿಭ್ರಮೇಣ ||**
**ಆದ್ಯಂತಭಾಗವಿರಹಾನ್ನವಧಾ ವಿಭಕ್ತೇ**
**ಮಧ್ಯಸ್ಥವಾರಿಧಿಪದೈಃ ಸ್ಫುಟಮರ್ಧಚಂದ್ರಂ ||೬೩||**

**ಟೀಕೆ**= ಕ್ಷೇತ್ರಾಂಶಪಂಚಮವಿಭಾಗವಿನಿರ್ಗಮೇಣ— ಚತುಷ್ಕೋಣವಾಗಿ ಮಾಡಲ್ಪಟ್ಟ ಕ್ಷೇತ್ರಭಾಗದಲ್ಲಿ ಐದನೆಯ ಒಂದು ಭಾಗವನ್ನು ಹೊರಗೆ ಬಿಡುವುದರಿಂದ (ಬಿಡುವುದರ ಮೂಲಕ), ಕೋಣಚತುರಂಶಪರಿಭ್ರಮೇಣ—ಅಲ್ಲಿಂದ ಕೋಣಸೂತ್ರದ ನಾಲ್ಕನೆಯ ಒಂದುಭಾಗದಿಂದ ಕ್ಷೇತ್ರಮಧ್ಯದವರೆಗೆ ಎರಡು ಪಾರ್ಶ್ವಗಳಲ್ಲಿಯೂ ಸುತ್ತುವುದರಿಂದ, ಯೋನಿಃ(ಸ್ಯಾತ್)—ಅರಳೆಯ ಎಲೆಯಂತಿರುವ ಯೋನಿಕುಂಡವಾಗುವುದು. ನವಧಾ ವಿಭಕ್ತೇ—ಒಂಬತ್ತುಭಾಗವಾಗಿ

ಭಾಗಿಸಲ್ಪಟ್ಟ ಚತುಷ್ಕೋಣಕ್ಷೇತ್ರದಲ್ಲಿ ಆದ್ಯಂತಭಾಗವಿರಹಾತ್—ಮೊದಲಿನಲ್ಲಿಯೂ ಕೊನೆಯಲ್ಲಿಯೂ ಒಂದೊಂದು ಭಾಗವನ್ನು ತಳ್ಳಿಬಿಡುವುದರಿಂದ (ಬಿಡುವುದರ ಮೂಲಕ), ಮಧ್ಯಸ್ಥಪಾರಿಧಿಪದೈಃ—ಮಧ್ಯದಲ್ಲಿರುವ ಏಳುಪದಗಳಿಂದ, ಅರ್ಧಚಂದ್ರಂ—ಅರ್ಧಚಂದ್ರಾಕಾರವಾದ ಕುಂಡವು, ಸ್ಫುಟಂ (ಸ್ಯಾತ್)—ಚನ್ನಾಗಿ ಏರ್ಪಡುವುದು ||೬೩||

**ಅವತರಣಿಕೆ**= ತ್ರಿಕೋಣಕುಂಡ-ವೃತ್ತಕುಂಡ-ಷಟ್ಕೋಣಕುಂಡ ಈ ಮೂರರ ಲಕ್ಷಣಗಳನ್ನು ಅರವತ್ತುನಾಲ್ಕನೆಯ ಶ್ಲೋಕದಲ್ಲಿ ತೋರಿಸುತ್ತಾರೆ.—

**ತ್ರ್ಯಶ್ರಂ ತ್ರಿಭಾಗಪರಿವೃದ್ಧಿಕೃತತ್ರಿಮತ್ಸ್ಯೈಃ**
**ಕಂಠಾರ್ಧಕಾಷ್ಟಮವಿನಾಕರಣೇನ ವೃತ್ತಂ ||**
**ಷಡ್ಭಾಗವೃದ್ಧ್ಯಾ ರಚಿತೈಶ್ಚತುರ್ಭಿ**
**ರ್ಮತ್ಸ್ಯೈಷ್ಷಡಶ್ರಂ ರಚಯೇತ ಕುಂಡಂ ||೬೪||**

**ಟೀಕೆ**= ತ್ರಿಭಾಗಪರಿವೃದ್ಧಿಕೃತತ್ರಿಮತ್ಸ್ಯೈಃ—ಚತುಷ್ಕೋಣಕ್ಷೇತ್ರದ ಮೂರನೆಯ ಒಂದುಭಾಗವನ್ನು ವೃದ್ಧಿಪಡಿಸಿ ಮೂರುಪಾರ್ಶ್ವಗಳಲ್ಲಿ ಮೂರು ಗುರುತುಗಳನ್ನಿಡುವುದರಿಂದ, ತ್ರ್ಯಶ್ರಂ—ತ್ರಿಕೋಣಕುಂಡವು, (ಸ್ಯಾತ್)—ಆಗುವುದು. ಕುಂಡಾರ್ಧಕಾಷ್ಟಮವಿನಾಕರಣೇನ—ಕುಂಡಮಧ್ಯದ ನಾಲ್ಕು ಪಾರ್ಶ್ವಗಳಲ್ಲಿಯೂ ಕಂಠಸೂತ್ರದ ಅರ್ಧದೊಳಗೆ ಎಂಟನೆಯ ಒಂದುಭಾಗವನ್ನು ಬಿಡುವುದರಿಂದ, ವೃತ್ತಂ (ಸ್ಯಾತ್)—ವೃತ್ತಕುಂಡವು ಏರ್ಪಡುವುದು. ಷಡ್ಭಾಗವೃದ್ಧ್ಯಾರಚಿತೈಃ—ಚತುಷ್ಕೋಣಕ್ಷೇತ್ರದ ಆರನೆಯ ಒಂದುಭಾಗವನ್ನು, ವೃದ್ಧಿಪಡಿಸಿ ಕುಂಡದ ಉಭಯಪಾರ್ಶ್ವಗಳಲ್ಲಿಯೂ ಮಾಡಲ್ಪಟ್ಟ, ಚತುರ್ಭಿರ್ಮತ್ಸ್ಯೈಃ—ನಾಲ್ಕು ಗುರುತುಗಳಿಂದ, ಷಡಶ್ರಂ ಕುಂಡಂ—ಷಟ್ಕೋಣಕುಂಡವನ್ನು, ರಚಯೇತ—ಮಾಡಬೇಕು ||೬೪||

**ಅವತರಣಿಕೆ**= ಪದ್ಮಕುಂಡ-ಅಷ್ಟಕೋಣಕುಂಡಗಳ ಲಕ್ಷಣಗಳನ್ನೂ, ಯೋನ್ಯಾದಿಕುಂಡಗಳನ್ನೂ, ಉಚ್ಚಾಟನ-ಮಾರಣ-ಮುಂತಾದ ಆರುಬಗೆಯ ಕಾಮ್ಯಕರ್ಮಗಳಲ್ಲಿಯೇ ಉಪಯೋಗಿಸಬೇಕೆಂಬುದನ್ನೂ ದೀಕ್ಷೆ-ಪ್ರತಿಷ್ಠೆ-ಮುಂತಾದ ಕರ್ಮಗಳಲ್ಲಿ ವೃತ್ತಕುಂಡವನ್ನಾಗಲಿ ಚತುರಶ್ರಕುಂಡವನ್ನಾಗಿ ಉಪಯೋಗಿಸಬೇಕೆಂಬುದನ್ನೂ ಅರವತ್ತೈದು ಅರವತ್ತಾರನೆಯ ಶ್ಲೋಕಗಳಲ್ಲಿ ತೋರಿಸುತ್ತಾರೆ.—

ಚತುಷ್ಕೃತೇ ವೃತ್ತಕಮೇಖಲಾಂಶೇ ಸ್ಯಾತ್ಕರ್ಣಿಕಾ ಸಾರ್ಧವಿಭಾಗಮಾನಾತ್ ।
ಪತ್ರಾಷ್ಟಕಂ ಸಾರ್ಧಯುಗೇನ ಪದ್ಮಂ ಬಹಿರ್ದಶಾಂಶಾಚ್ಚತುರಶ್ರಕ್ಲೃಪ್ತೇಃ ॥೬೫॥
ತತ್ಕರ್ಣಶೇಷೇಣ ಚ ಮಂಗಳಾಶ್ರಂ ಮುನಿತ್ರ್ಯೈರ್ವಾ ವಿಧಿನಾ ವಿದಧ್ಯಾತ್ ।
ಯೋನ್ಯಾದಿಕುಂಡಾನಿ ತು ಕಾಮ್ಯಪಕ್ಷೇ ದೀಕ್ಷಾದಿಕೇ ವೃತ್ತಮಥಾಶ್ರಮೇವ ॥೬೬॥

**ಟೀಕೆ**— ವೃತ್ತಕಮೇಖಲಾಂಶೇ—ವೃತ್ತಕುಂಡದ ಮೇಖಲಾಭಾಗವು, ಚತುಷ್ಕೃತೇ (ಸತಿ)—ನಾಲ್ಕಾಗಿ ಭಾಗಿಸಲ್ಪಡಲು, ಸಾರ್ಧವಿಭಾಗಮಾನಾತ್—ನಾಲ್ಕುವರೆ ಅಂಗುಲಗಳ ಆಳತೆಯಲ್ಲಿ, ಕರ್ಣಿಕಾಸ್ಯಾತ್—ಕರ್ಣಿಕೆಯಾಗುವುದು. ಸಾರ್ಧಯುಗೇನ—ಉಳಿದ ನಾಲ್ಕುವರೆ ಅಂಗುಲಗಳ ಅಳತೆಯಲ್ಲಿ, ಪ್ರತ್ರಾಷ್ಟಕಂ ಸ್ಯಾತ್—ದಳಗಳ ಅಷ್ಟಕವು ಏರ್ಪಡುವುದು. (ಇದಂ)—ಹೀಗೆ ಏರ್ಪಟ್ಟದು ಪದ್ಮಂ—ಪದ್ಮಕುಂಡವೆಂದು, (ಉಚ್ಯತೇ) ಹೇಳಲ್ಪಡುತ್ತದೆ. ಬಹಿರ್ದಶಾಂಶಾತ್—ಚತುಷ್ಕೋಣಕ್ಷೇತ್ರದ ಹತ್ತನೆಯ ಒಂದು ಭಾಗವನ್ನು ಹೊರಗೆ ಬಿಡುವುದರಿಂದ (ಬಿಡುವುದರಮೂಲಕ), ಚತುರಶ್ರಕ್ಲೃಪ್ತೇಃ—ಉಳಿದ ಒಂಬತ್ತು ಭಾಗಗಳಲ್ಲಿ ಮತ್ತೊಂದು ಚತುಷ್ಕೋಣವನ್ನು ಏರ್ಪಡಿಸುವುದರಿಂದ, ತತ್ಕರ್ಣಶೇಷೇಣ—ಅದರಲ್ಲಿ ಮೊದಲಿನ ಕರ್ಣಸೂತ್ರದ ಅರ್ಧದಿಂದ ನಾಲ್ಕು ಪಾರ್ಶ್ವಗಳಲ್ಲಿಯೂ ಗುರುತಿಟ್ಟು ಅಲ್ಲಿಂದ ಮೊದಲಿನ ಮೂಲೆಯ ಗುರುತುಗಳವರೆಗೆ ನಾಲ್ಕು ಪಾರ್ಶ್ವಗಳಲ್ಲಿಯೂ ಎಂಟುಸೂತ್ರಗಳನ್ನು ಹಾಕುವುದರಿಂದ, ಮಂಗಳಾಶ್ರಂ (ಸ್ಯಾತ್)—ಅಷ್ಟಕೋಣಕುಂಡವಾಗುವುದು. (ಅಥವಾ) ಪಕ್ಷಾಂತರದಲ್ಲಿ, ಮುನಿತ್ರ್ಯೈಃ—ಚತುಷ್ಕೋಣಕ್ಷೇತ್ರವನ್ನು ಇಪ್ಪತ್ತೇಳರಿಂದ ಭಾಗಿಸುವುದರಮೂಲಕ, ವಿಧಿನಾ—ಶಾಸ್ತ್ರೀಯವಾದ ಕ್ರಮದಿಂದಲಾದರೂ, ವಿದಧ್ಯಾತ್—ಅಷ್ಟಕೋಣಕುಂಡವನ್ನು ಮಾಡಬಹುದು. ಯೋನ್ಯಾದಿಕುಂಡಾನಿ ತು—ಯೋನಿಕುಂಡ-ತ್ರಿಕೋಣಕುಂಡ-ಮೊದಲಾದ ಕುಂಡಗಳಾದರೋ, ಕಾಮ್ಯಪಕ್ಷೇ (ಸ್ಯುಃ)-ಉಚ್ಚಾಟನ-ಮಾರಣ-ಮೊದಲಾದ ಆರು ಬಗೆಯ ಕಾಮ್ಯಕರ್ಮಗಳ ವಿಷಯದಲ್ಲಿಯೇ ಬರುವುವು. ದೀಕ್ಷಾದಿಕೇ—ದೀಕ್ಷೆ-ಪ್ರತಿಷ್ಠೆ-ಮೊದಲಾದ ಕರ್ಮಗಳ ವಿಷಯದಲ್ಲಿ, ವೃತ್ತಂ—ವೃತ್ತಕುಂಡವಾಗಲಿ, ಅಥ ಅಶ್ರಮೇವ—ಚತುಷ್ಕೋಣಕುಂಡವಾಗಲಿ, (ಸ್ಯಾತ್)—ಆಗುವುದು. ||೬೫||೬೬||

**ಅವತರಣಿಕೆ**— ಉತ್ತಮ-ಮಧ್ಯಮ-ಅಧಮ-ಎಂದು ಮೂರುಬಗೆಯಾಗಿರುವ ಸ್ರುಕ್-ಸ್ರುವ-ಎಂಬ ಹೋಮಪಾತ್ರಗಳ ಉತ್ತಮಲಕ್ಷಣವನ್ನು ಅರವತ್ತೇಳು ಅರವತ್ತೆಂಟನೆಯ ಪದ್ಯಗಳಲ್ಲಿ ತೋರಿಸುತ್ತಾರೆ.—

**ಷಟ್ತ್ರಿಂಶಾಂಗುಳಸಮ್ಮಿತಸ್ರುಚಿ ರಸ್ಯೈರ್ವಿಂಶಾಗುಳ್ಯೈರ್ನಾಹತೋ**
**ದೈರ್ಘ್ಯಾದ್ದಂಡ ಇಹ ತ್ರಿವೇದಕಲಶೋ ವೇದಾದ್ಯಮಾದ್ಗಂಡಿಕಾ ।**
**ಅಷ್ಟೈಕಾಗಸವೇದಿಕಾಗಳಮುಖಂ ವೃತ್ತಂ ಶ್ರುತಿಸ್ತ್ರ್ಯಂಗುಳಂ**
**ಖಾತಂ ಚಾಂಗುಳಮೇಖಲಂ ಗಳಮುಖೇ ತ್ರ್ಯಂಶೇನ ವೇದ್ಯಾಸ್ತತೇ॥೬೭॥**

**ಕಾನಿಷ್ಠಾಂಗುಳವಿಸ್ತೃತಾಜ್ಯಸರಣಿಃ ಪೃಷ್ಠಂ ಕಜೇಭೋಷ್ಠವತ್**
**ಶಿಷ್ಟಂ ಚಿತ್ರಯುತಂ ಸ್ರುವೇ ಜಿನಮಿತೇ ಹ್ಯಂಗುಷ್ಠದಂಡಾಗ್ರತಃ ।**
**ವೃತ್ತಂ ತ್ರ್ಯಂಗುಳವಿಸ್ತರಂ ಗಜಶಿರಃ ಪೃಷ್ಠಂ ಪುರಃಕರ್ದಮೋ**
**ಸಾರಂಗಾಂಘ್ರಿವರಾಜ್ಯಸಂಸ್ಥಿತಿರಧೋ ಗಂಡ್ಯಗ್ರತೋಽಬ್ಜಾಂಕಿತಂ॥೬೮॥**

**ಟೀಕೆ**— ಷಟ್ತ್ರಿಂಶಾಂಗುಳಸಂಮಿತಸ್ರುಚಿ—ಹೋಮಸಾಧನವಾದ ಸ್ರುಕ್ಪಾತ್ರವು ಮೂವತ್ತಾರು ಅಂಗುಳ ಉದ್ದವಾಗಿರಬೇಕು; ಅಂಥ ಪಾತ್ರದಲ್ಲಿ, ದಂಡಃ—ಕೈಯಿಂದ ಹಿಡಿದುಕೊಳ್ಳುವ ಅದರ ಕಾವು, ನಾಹತಃ—ಸ್ಥೌಲ್ಯದಲ್ಲಿ, ರಸ್ಯೈಃ—ಆರಂಗುಲ ಅಳತೆಯಿಂದಲೂ, ದೈರ್ಘ್ಯಾತ್—ಉದ್ದದಿಂದ (ಉದ್ದದಲ್ಲಿ) ವಿಂಶಾಂಗುಲ್ಯೈಃ—ಇಪ್ಪತ್ತು ಅಂಗುಲಗಳ ಅಳತೆಯಿಂದಲೂ, (ಕಾರ್ಯಃ)—ಮಾಡಲ್ಪಡತಕ್ಕದು. ಇಹ—ಇದರಲ್ಲಿ, ತ್ರಿವೇದಕಲಶಃ—ದಂಡದ ಸ್ಥೂಲತ್ವಕ್ಕೆ ತಕ್ಕಂತೆ ಮೂರು ಅಥವಾ ನಾಲ್ಕು ಅಂಗುಲಗಳಲ್ಲಿ ಕಲಶವು, ಕಾರ್ಯಃ—ಮಾಡಲ್ಪಡಬೇಕು. ವೇದಾತ್—ನಾಲ್ಕಂಗುಲದ ವಿಸ್ತಾರವೂ, ಯಮಾತ್—ಎರಡಂಗುಲದ ಉದ್ದವೂ ಉಳ್ಳ, ಗಂಡಿಕಾ—ಗಂಡಿಕೆಯು (ಉಪವೇದಿಯು), (ಕಾರ್ಯಾ)—ಮಾಡಲ್ಪಡಬೇಕು. ಅಷ್ಟೈಕಾಗಸವೇದಿಕಾಗಳಮುಖಂ—ಅದರಲ್ಲಿ ಎಂಟಂಗುಲದ ವೇದಿಕೆಯೂ, ಒಂದಂಗುಲದ ಕಂಠವೂ, ಏಳಂಗುಲದ ಮುಖವೂ, (ಕಾರ್ಯಂ)—ಮಾಡಲ್ಪಡತಕ್ಕದು. ವೃತ್ತಂ—ವೇದಿಮಧ್ಯದಲ್ಲಿ ಬಿಲದ ಸುತ್ತಳತೆಯು, ಶ್ರುತಿಃ— ನಾಲ್ಕಂಗುಲವಾಗಿರಬೇಕು. ಖಾತಂ ಚ—ಆ ಬಿಲದ ಆಳವು, ತ್ರ್ಯಂಗುಲಂ—ಮೂರು ಅಂಗುಲವಾಗಿರಬೇಕು. ಅಂಗುಳಿಮೇಖಲಂ—ಮೇಖಲೆಯ ಅಳತೆಯು ಒಂದಂಗುಳವಾಗಿರಬೇಕು. ವೇದ್ಯಾಃ—ಅಂಥ ವೇದಿಕೆಯ ಪರಿಮಾಣದ, ತ್ರ್ಯಂಶೇನ—ಮೂರನೆಯ ಒಂದುಭಾಗದಿಂದ, ತತೇ—ವಿಸ್ತೃತವಾಗಿರುವ, ಗಳಮುಖೇ—ಕಂಠದಲ್ಲಿಯೂ ಮುಖದಲ್ಲಿಯೂ, ಆಜ್ಯಸರಣಿಃ—

ತುಪ್ಪವು ಬೀಳುವುದಕ್ಕೆ ಅನುಕೂಲವಾದ ಮಾರ್ಗವು, ಕಾನಿಷ್ಠಾಂಗುಳವಿಸ್ತೃತಾ —ಕಿರುಬೆರಳಿನಷ್ಟು ವಿಸ್ತಾರವುಳ್ಳುದಾಗಿರಬೇಕು. ಪೃಷ್ಠಂ—ಮಹಾವೇದಿಯ ಅಡಿಭಾಗವೂ (ಕೆಳಭಾಗವೂ) ಮುಖಾಗ್ರದ ಅಡಿಭಾಗವೂ, ಕಜೇಭೋಷ್ಠವತ್ —ಕ್ರಮವಾಗಿ ಕಮಲಪುಷ್ಪದಂತೆಯೂ ಆನೆಯ ತುಟಿಯಂತೆಯೂ ಇರಬೇಕು. ಶಿಷ್ಟಂ—ವೇದಿ-ಕಂಠ-ಮುಖ-ಇವುಗಳಲ್ಲಿ ಉಳಿದ ಭಾಗವು, ಚಿತ್ರಯುತಂ—ಕಮಲ-ನೈದಿಲೆ-ಮುಂತಾದ ಚಿತ್ರಗಳೊಡನೆ ಕೂಡಿರಬೇಕು. ಜಿನಮಿತೇ—ಇಪ್ಪತ್ತು ನಾಲ್ಕು ಅಂಗುಲ ಉದ್ದವುಳ್ಳ, ಸ್ರುವೇ—ಹೋಮಸಾಧನವಾದ ಸ್ರುವವೆಂಬ ಪಾತ್ರದಲ್ಲಿ, ಅಂಗುಷ್ಠದಂಡಾಗ್ರತಃ—ಅಂಗುಷ್ಠಬೆರಳಿನಷ್ಟು ಸ್ಥೂಲವಾದ ದಂಡದ ತುದಿಯಲ್ಲಿ, ವೃತ್ತಂ—ಸುತ್ತಳತೆಯು, ತ್ರ್ಯಂಗುಳವಿಸ್ತರಂ—ಮೂರುಅಂಗುಲ ವಿಸ್ತಾರವುಳ್ಳುದಾಗಿರಬೇಕು. ಪೃಷ್ಠಂ—ಆವೃತ್ತದ ಅಡಿಭಾಗವು, ಗಜಶಿರಃ— ಆನೆಯ ತಲೆಯಲ್ಲಿರುವ ಎರಡು ಕುಂಭಸ್ಥಲಗಳಂತೆ ಇರಬೇಕು. ಪುರಃ—ಪೃಷ್ಠದ ಮೇಲೆ ವೃತ್ತಭಾಗದಲ್ಲಿ, ಆಜ್ಯಸಂಸ್ಥಿತಿಃ—ಘೃತಧಾರೆಯ ಸ್ಥಳವು, ಕರ್ದಮೇ—ಕೆಸರಿನಲ್ಲಿ ಇಡಲ್ಪಟ್ಟ, ಸಾರಂಗಾಂಘ್ರಿವತ್—ಜಿಂಕೆಯ ಕಾಲಿನಂತೆ ಮಧ್ಯದಲ್ಲಿ ಉನ್ನತವಾಗಿಯೂ, ಎರಡು ಪಾರ್ಶ್ವಗಳಲ್ಲಿಯೂ ಹಳ್ಳವಾಗಿಯೂ ಇರಬೇಕು. ಅಧಃ—ಆಜ್ಯಧಾರಾಸ್ಥಲದ ಅಡಿಭಾಗವು, ಗಂಡ್ಯಗ್ರತಃ—ಕುಂಭಮಧ್ಯದಲ್ಲಿರುವ ಗಂಡಿಕೆಯ ತುದಿಯಲ್ಲಿ, ಅಬ್ಜಾಂಕಿತಂ—ಕಮಲದ ಚಿಹ್ನದಿಂದ ಅಂಕಿತವಾಗಿರಬೇಕು. ||೬೮||

**ಅವತರಣಿಕೆ—** ವಿಷ್ಟರ-ಪರಿಧಿ-ಇಧ್ಮ-ಸಮಿತ್ತು-ಇವುಗಳ ಲಕ್ಷಣಗಳನ್ನು ಅರವತ್ತೊಂಬತ್ತನೆಯ ಶ್ಲೋಕದಲ್ಲ ಹೇಳುತ್ತಾರೆ.—

**ಶ್ಯಾಮೈರ್ದರ್ಭದಳೈಃ ಖರಾಮುಗಣಿತೈರ್ಬಾಹುಪ್ರಮಾಣಾಃ ಕೃತಾಃ**
**ವೇಣ್ಯೋವಾಥ ಸುವರ್ತಿತಾಃ ಸಮಶಿಖಾಸ್ಸದ್ಗ್ರಂಥಯೋ ವಿಷ್ಟರಾಃ ।**
**ತನ್ಮಾನಾ ಋಜವಃ ಪಲಾಶತರುಜಾಃ ಶ್ಯಾಮಾಃ ಪರಿಧ್ಯಾಹ್ವಯಾಃ**
**ಇಧ್ಮಾಃ ಷೋಡಶಕಾಂಗುಳಾಸ್ಸಮಿದಪಿ ಪ್ರಾದೇಶಮಾತ್ರಾವ್ರಣಾಃ ||೬೯||**

**ಟೀಕೆ—** ವಿಷ್ಟರಾಃ—ಅಗ್ನಿಕುಂಡದ ನಾಲ್ಕು ಪಾರ್ಶ್ವಗಳಲ್ಲಿಯೂ ಹಾಕಬೇಕಾದ ಪರಿಸ್ತರಣದರ್ಭಗಳು, ಬಾಹುಪ್ರಮಾಣಾಃ—ಇಪ್ಪತ್ತುನಾಲ್ಕು ಅಂಗುಲ ಉದ್ದವುಳ್ಳವುಗಳಾಗಿಯೂ, ಶ್ಯಾಮೈಃ—ಆಗತಾನೇ ಕೊಯ್ದುದರಿಂದ ಹಸುರಾಗಿರುವ, ಖರಾಮುಗಣಿತೈರ್ದರ್ಭದಳೈಃ—ಮೂವತ್ತು ದರ್ಭೆಗಳಿಂದ, ವೇಣ್ಯಃ ಕೃತಾಃ—ಹೆಂಗಸರ ಜಡೆಯಂತೆ ಹೆಣೆಯಲ್ಪಟ್ಟುವುಗಳಾಗಿಯೂ, ಅಥವಾ—ಹಾಗಿ

ಲ್ಲದಿದ್ದರೆ, ಸುವರ್ತಿತಾಃ—ಚನ್ನಾಗಿ ತಿರುವಲ್ಪಟ್ಟುವುಗಳಾಗಿಯೂ, ಸದ್ಗ್ರಂಥಯಃ—ಒಂದಂಗುಲದ ಅಳತೆಯಲ್ಲಿ ಪ್ರದಕ್ಷಿಣವಾಗಿ ಹಾಕಲ್ಪಟ್ಟ ಒಂದು ಗಂಟುಳ್ಳುವುಗಳಾಗಿಯೂ, ಸಮಶಿಖಾಃ—ಗಂಟಿನ ಮುಂಭಾಗದಲ್ಲಿ ನಾಲ್ಕು ಅಂಗುಲ ಅಳತೆಯಾಗಿ ಹೆಚ್ಚುಕಡಮೆಯಾಗದ ತುದಿಯುಳ್ಳುವುಗಳಾಗಿಯೂ, (ಸ್ಯುಃ)—ಇರಬೇಕು. ಪರಿಧ್ಯಾಹ್ವಯಾಃ—ಪರಿಧಿಯೆಂದು ಹೆಸರುಳ್ಳುವುಗಳಾಗಿಯೂ, ಅಗ್ನಿಕುಂಡದ ನಾಲ್ಕು ಪಾರ್ಶ್ವಗಳಲ್ಲಿಯೂ ಹಾಕಲ್ಪಟ್ಟಿರುವುವುಗಳಾಗಿಯೂ ಇರುವ ಸಮಿತ್ತುಗಳು, ತನ್ಮಾನಾಃ—ಪರಿಸ್ತರಣಗಳಂತೆ ಇಪ್ಪತ್ತುನಾಲ್ಕು ಅಂಗುಲ ಉದ್ದವುಳ್ಳುವುಗಳಾಗಿಯೂ, ಋಜವಃ—ಡೊಂಕಿಲ್ಲದುವುಗಳಾಗಿಯೂ, ಶ್ಯಾಮಾಃ—ಹಸುರಾಗಿರುವಂಥವುಗಳಾಗಿಯೂ, ಪಲಾಶತರುಜಾಃ—ಮುತ್ತುಗದ ಮರದಿಂದ ಉಂಟಾದುವುಗಳಾಗಿಯೂ, (ಸ್ಯುಃ)—ಇರಬೇಕು. ಇಧ್ಮಾಃ—ಆಧಾನಕಾರ್ಯಕ್ಕೆ ಉಪಯೋಗಿಸಲ್ಪಡುವ ಸಮಿತ್ತುಗಳು, ಷೋಡಶಕಾಂಗುಲಾಃ—ಹದಿನಾರು ಅಂಗುಲ ಉದ್ದವುಳ್ಳುವುಗಳಾಗಿರಬೇಕು. ಸಮಿದಪಿ—ಹೋಮಸಮಿತ್ತೂ, ಪ್ರಾದೇಶಮಾತ್ರಾ—ಹನ್ನೆರಡು ಅಂಗುಲ ಉದ್ದವುಳ್ಳುದಾಗಿರಬೇಕು. ಅವ್ರಣಾಃ—ಇಲ್ಲಿ ಹೇಳಿದ-ವಿಷ್ಟರ-ಪರಿಧಿ-ಇಧ್ಮ-ಸಮಿತ್ತು ಇವುಗಳೆಲ್ಲವೂ-ಹುಳುಕಿಲ್ಲದುವುಗಳಾಗಿಯೂ ಗಂಟಿಲ್ಲದುವುಗಳಾಗಿಯೂ ಇರಬೇಕು. ||೬೯||

**ಅವತರಣಿಕೆ**— ಜ್ಞಾನಖಡ್ಗವೇ ಮೊದಲಾದ ಯಾಗೋಪಕರಣಹೋಮೋಪಕರಣದ್ರವ್ಯಗಳನ್ನು ಮೊದಲು ಸಂಗ್ರಹಿಸಿ ಇಡಬೇಕೆಂದು ಎಪ್ಪತ್ತನೆಯ ಮತ್ತು ಎಪ್ಪತ್ತೊಂದನೆಯ ಶ್ಲೋಕದಲ್ಲಿ ಉಪದೇಶಿಸುತ್ತಾರೆ.—

**ದರ್ಭಾಗ್ರೈಸ್ತ್ರಿಸಂಖ್ಯೈಸ್ಸಮಶಿಖಕಲಿತಗ್ರಂಥಿವೇಣೀಕಲೋಚ್ಚೈ-**
**ರ್ಜ್ಞಾನಾಸಿಃ ಕ್ಷೇಪಣೀಯಾಶ್ಶಿವಘುಟಿಮುಭಿತಸ್ಸಪ್ತವಿಂಶದ್ಘಟಾಸ್ತೇ ।**
**ಧಾನ್ಯಸ್ಥಾಸ್ತಂತುಜಾಲಾಸ್ಸುವಸನಫಲಯುಕ್ತಾತಪತ್ರಾಸ್ತಿಲಾಜ್ಯೇ**
**ಪಾತ್ರೇ ಚರ್ವರ್ಘಪಾತ್ರಂ ಕರಕಜಲಧಯೋಪ್ಯೇಲಧೂಪಾರ್ಘ್ಯ**
**ಯೋಗ್ಯಾಃ ||೭೦||**

**ಪುಷ್ಪಾಪ್ಯೋರಚಿತಾಂ ಚ ಪಾಯಿತಪಯೋಮಧ್ವಾಜ್ಯಕಾಂ ಕರ್ತರೀಂ**
**ಸಿದ್ಧಾರ್ಥಾದಿಕಭಸ್ಮಲಾಜವಿಕಿರಾ ಕುಂಭಾಂಸ್ತ್ರಿಕಾಲಾರುಣಾ ।**
**ಕನ್ಯಾವರ್ತಿತವಹ್ನಿವಹ್ನಿಗುಣಿತಂ ಸೂತ್ರಂ ಚ ಪಾಶಾಹ್ವಯಂ**
**ಕರ್ಪೂರಾಗುರುಸಾರಚಂದನಯುತಂ ಪುಷ್ಪಾದಿಕಂ ಚಾಹರೇತ್ ||೭೧||**

ಟೀಕೆ= ತತ್ತ್ವಸಂಖ್ಯೈಃ—ಮೂವತ್ತಾರು ಸಂಖ್ಯೆಯುಳ್ಳವುಗಳಾಗಿಯೂ, ಸಮಶಿಖಕಲಿತಗ್ರಂಥಿವೇಣೀಕಲೋಚ್ಚೈಃ—ಹೆಚ್ಚುಕಡಮೆಯಿಲ್ಲದೆ ಜೋಡಿಸಲ್ಪಟ್ಟ ತುದಿಯುಳ್ಳವುಗಳಾಗಿಯೂ, ಪ್ರದಕ್ಷಿಣವಾಗಿ ಸುತ್ತಿ ಗಂಟು ಹಾಕಲ್ಪಟ್ಟವುಗಳಾಗಿಯೂ, ಹೆಂಗಸರ ಜಡೆಯಂತೆ ಹೆಣೆಯಲ್ಪಟ್ಟವುಗಳಾಗಿಯೂ, ಹದಿನಾರು ಅಂಗುಲ ಉದ್ದವುಳ್ಳವುಗಳಾಗಿಯೂ ಇರುವ, ದರ್ಭಾಗ್ರೈಃ—ದರ್ಭೆಗಳಿಂದ, (ನಿರ್ಮಿತಃ)—ಮಾಡಲ್ಪಟ್ಟ, ಜ್ಞಾನಾಸಿಃ—ಜ್ಞಾನಖಡ್ಗವು, (ಸಂಗ್ರಾಹ್ಯಃ)—ಸಂಗ್ರಹಿಸಲ್ಪಡಬೇಕು. ಶಿವಘಟಮಭಿತಃ—ಅಷ್ಟವಿದ್ಯೇಶ್ವರಕುಂಭಗಳ ಮಧ್ಯದಲ್ಲಿ ಸ್ಥಾಪಿಸಲ್ಪಟ್ಟಿರುವ ಶಿವಕುಂಭದ ಸುತ್ತಲೂ ನಾಲ್ಕು ಪಾರ್ಶ್ವಗಳಲ್ಲಿಯೂ, ಸಪ್ತವಿಂಶದ್ಘಟಾಃ—ನಂದಿ-ಶಾಂತಿ-ಮೊದಲಾದ ಇಪ್ಪತ್ತೇಳು ಕುಂಭಗಳು, ಕ್ಷೇಪಣೀಯಾಃ—ಸ್ಥಾಪಿಸಲ್ಪಡತಕ್ಕವುಗಳು. ತೇ—ಆ ಕುಂಭಗಳು, ಧಾನ್ಯಸ್ಥಾಃ—ಬತ್ತ-ಅಕ್ಕಿ-ಎಳ್ಳು ಇವುಗಳ ಮೇಲೆ ಸ್ಥಾಪಿತಗಳಾಗಿಯೂ, ತಂತುಜಾಲಾಃ—ಸೂತ್ರವೇಷ್ಟಿತಗಳಾಗಿಯೂ, ಸುವಸನಫಲಯುಕ್ತಾತಪತ್ರಾಶ್ಚ—ನೂತನವಸ್ತ್ರ, ತೆಂಗಿನಕಾಯಿ, ಮಾವಿನ ಎಲೆ ಇವುಗಳೊಡನೆ ಕೂಡಿದಂಥವುಗಳಾಗಿಯೂ, (ಸ್ಯುಃ)—ಇರಬೇಕು. ತಿಲಾಜ್ಯೇಪಾತ್ರೇ—ಎಳ್ಳು-ತುಪ್ಪ-ಇವುಗಳನ್ನು ಇಟ್ಟುಕೊಳ್ಳುವ ಪಾತ್ರೆಗಳೂ, ಚರ್ವರ್ಥಪಾತ್ರಂ—ಹೋಮಕ್ಕಾಗಿ ಚರುವನ್ನು ಮಾಡುವ ಪಾತ್ರೆಯೂ, ಕರಕಜಲಧಯಃ—ಕರಗಗಳೂ, ತೀರ್ಥಘಟಗಳೂ, ಏಲಧೂಪಾರ್ಘ್ಯಯೋಗ್ಯಾಃ—ಏಲಕ್ಕಿ ಮೊದಲಾದ ಸುಗಂಧವಸ್ತುಗಳನ್ನು ಇಟ್ಟುಕೊಳ್ಳುವುದಕ್ಕೂ ಧೂಪವನ್ನು ಕೊಡುವುದಕ್ಕೂ ಅರ್ಘ್ಯವನ್ನು ಕೊಡುವುದಕ್ಕೂ ಯೋಗ್ಯವಾಗಿರುವ ಪಾತ್ರೆಗಳೂ, (ಸರ್ವೇ ಸಂಗ್ರಾಹ್ಯಾಃ)—ಇವುಗಳೆಲ್ಲವೂ ಸಂಗ್ರಹಿಸಲ್ಪಡತಕ್ಕವುಗಳು. (ಕಿಂಚ)—ಮತ್ತು, ಪುಷ್ಪಾಯೋರಚಿತಾಂ—ಪುಷ್ಪದಂತೆ ಮೃದುವಾಗಿರುವ ಕಬ್ಬಿಣದಿಂದ ಮಾಡಲ್ಪಟ್ಟುದಾಗಿಯೂ, ಪಾಯಿತಪಯೋಮಧ್ವಾಜ್ಯಕಾಂ—ಹಾಲು, ಜೇನುತುಪ್ಪ-ತುಪ್ಪ-ಇವುಗಳಿಂದ ನೆನೆಸಲ್ಪಟ್ಟುದಾಗಿಯೂ ಇರುವ, ಕರ್ತರೀಂ—ಪಾಶಸೂತ್ರಗಳನ್ನು ಛೇದಿಸುವ ಜ್ಞಾನಖಡ್ಗಕ್ಕೆ ಆಧಾರವಾಗಿರುವ ಕತ್ತರಿಯನ್ನೂ, ಸಿದ್ಧಾರ್ಥಾದಿಕಭಸ್ಮಲಾಜವಿಕಿರಾ—ಬಿಳೀ ಸಾಸುವೆ, ವಿಭೂತಿ, ಬತ್ತದಅರಳು ಇವೇ ಮೊದಲಾಗಿ ಮಂಟಪದಲ್ಲಿ ಎರಚಬೇಕಾದ ವಿಕಿರದ್ರವ್ಯಗಳನ್ನೂ, ಅಕಾಲಾರುಣಾ-ಕುಂಭಾ—ಕಪ್ಪಾಗಿರದೆ ಕೆಂಪಾಗಿರುವ ಘಟಗಳನ್ನೂ, ಕನ್ಯಾವರ್ತಿತವಹ್ನಿವಹ್ನಿಗುಣಿತಂ—ದ್ವಿಜಾತಿಕನ್ಯೆಯರಿಂದ ನೂಲಿಸ

ಲ್ಪಟ್ಟೊ, ಒಂಬತ್ತು ಎಳೆಗಳಾಗಿ ಜೋಡಿಸಲ್ಪಟ್ಟೊ, ಪಾಶಾಹ್ವಯಂ—ಮಲಾದಿಪಾಶತ್ರಯಸ್ವರೂಪವಾಗಿಯೂ ಇರುವ, ಸೂತ್ರಂ ಚ—ಹತ್ತಿಯದಾರವೇ ಮೊದಲಾದ ಪಾಶಸೂತ್ರವನ್ನೂ, ಕರ್ಪೂರಾಗುರುಸಾರಚಂದನಯುತಂ—ಕರ್ಪೂರ-ಅಗಿಲುಕೊರಡು-ಚಂದನ ಇವುಗಳೊಡನೆ ಕೂಡಿರುವ, ಪುಷ್ಪಾದಿಕಂ ಚ—ಹೂವು-ಲಾವಂಚ-ಬಿಲ್ವದಳ-ಇವೇ ಮೊದಲಾದ ಪರಿಮಳವಸ್ತುಗಳನ್ನೂ, ಆಹರೇತ್—ತಂದಿಟ್ಟುಕೊಳ್ಳಬೇಕು. ||೭೦—೭೧||

**ಅವತರಣಿಕೆ**— ಕುಂಭದಲ್ಲಿ ಶಿವಪೂಜೆಯನ್ನು ಮಾಡುವುದಕ್ಕೋಸ್ಕರ ಕುಂಭವೇ ಶಿವದೇಹವೆಂಬುದನ್ನು ಸಿದ್ಧಪಡಿಸುವುದಕ್ಕಾಗಿ ಎಪ್ಪತ್ತೆರಡನೆಯ ಶ್ಲೋಕದಲ್ಲಿ ಕುಂಭದ ವಸ್ತ್ರಾದಿಗಳನ್ನು ದೇಹದ ಚರ್ಮಾದಿಗಳಾಗಿ ರೂಪಣಮಾಡಿ ತೋರಿಸುತ್ತಾರೆ.—

**ವಸ್ತ್ರಂ ಚರ್ಮ ವಿಲಿಪ್ತಮೃಚ್ಚ ರುಧಿರಂ ಮಾಂಸಂ ಘಟೇ ಮೃತ್ತಿಕಾ**
**ಮೇದಸ್ತೋಯಮಥಾಸ್ಥಿ ಕೂರ್ಚಮಭಿತಸ್ಸಂವೀತಸೂತ್ರಂ ಸಿರಾ ।**
**ಶುಕ್ಲಂ ಮಧ್ಯಗರತ್ನಹೇಮಕುಸುಮಂ ನ್ಯಸ್ತೋ ಮನುರ್ಜೀವಿತಂ**
**ಧಾನ್ಯಂ ಸಪ್ತಕಮಾಸನಂ ಮಖವಿಧೌ ಶಂಭೋರಿದಂ ಪೂಜನಂ ||೭೨||**

**ಟೀಕೆ**— ವಸ್ತ್ರಂ—ಕುಂಭಕ್ಕೆ ಹೊದ್ದಿಸಿರುವ ವಸ್ತ್ರವು, ಚರ್ಮ—ದೇಹಕ್ಕೆ ಆಚ್ಛಾದನವಾಗಿರುವ ದೇಹದ ಚರ್ಮವಾಗಿಯೂ, ವಿಲಿಪ್ತಮೃತ್—ಕುಂಭವು ಕೆಂಪಗೆ ಕಾಣಿಸುವುದಕ್ಕಾಗಿ ಮೇಲೆ ಹಚ್ಚಿರುವ ಕೆಂಪು ಮಣ್ಣು, ರುಧಿರಂ—ದೇಹದ ರಕ್ತವಾಗಿಯೂ, ಘಟೇ ಮೃತ್ತಿಕಾ—ಘಟದ ಒಳಗಡೆಯಲ್ಲಿರುವ ಮಣ್ಣು, ಮಾಂಸಂ—ದೇಹದ ಮಾಂಸವಾಗಿಯೂ, ತೋಯಂ—ಕುಂಭದಲ್ಲಿ ತುಂಬಿರುವ ನೀರು, ಮೇದಃ—ದೇಹದ ಮೇದಸ್ಸಾಗಿಯೂ, ಕೂರ್ಚಂ—ದರ್ಭಮಯವಾದ ಕೂರ್ಚವು, ಅಸ್ಥಿ—ದೇಹದ ಮೂಳೆಯಾಗಿಯೂ, ಅಭಿತಸ್ಸಂವೀತಸೂತ್ರಂ—ಕುಂಭದ ಸುತ್ತಲೂ ಸುತ್ತಿರುವ ಸೂತ್ರವು, ಸಿರಾ—ನರವಾಗಿಯೂ, ಮಧ್ಯಗ ರತ್ನ ಹೇಮ ಕುಸುಮಂ—ಕುಂಭಮಧ್ಯದಲ್ಲಿ ಮಡಗಿರುವ ನವರತ್ನ-ಸುವರ್ಣ-ಪುಷ್ಪ-ಇವುಗಳ ಸಮಷ್ಟಿಯು, ಶುಕ್ಲಂ—ದೇಹದ ರೇತಸ್ಸಾಗಿಯೂ, ನ್ಯಸ್ತಃ ಮನುಃ—ನ್ಯಾಸಮಾಡಲ್ಪಟ್ಟ ಮಂತ್ರವು, ಜೀವಿತಂ—ಪ್ರಾಣವಾಗಿಯೂ, ಧಾನ್ಯಂ-ಸಪ್ತಕಂ—ಕುಂಭದ ಕೆಳಗೆ ಹಾಕಲ್ಪಟ್ಟ ಬತ್ತ-ಅಕ್ಕಿ-ಎಳ್ಳು-ಹೆಸರು-ಉದ್ದು-ತೊಗರಿ-ಗೋದಿ ಈ ಏಳು ಧಾನ್ಯಗಳ ಸಮಷ್ಟಿಯು, ಆಸನಂ— ಕುಂಭ ಮೂರ್ತಿಯಾದ ಶಿವನಿಗೆ ಆಸನವಾಗಿಯೂ, (ಭವೇದಿತಿ ಜ್ಞಾತ್ವಾ)—ಆಗುವು

ದೆಂದು ತಿಳಿದು, ಮುಖವಿಧೌ (ಸತಿ)—ಯಾಗವನ್ನು ನಡೆಯಿಸಿದರೆ, ಇದಂ—ಈ ಸಮಸ್ತವೂ, ಶಂಭೋಃ ಪೂಜನಂ ಸ್ಯಾತ್—ಪರಮೇಶ್ವರನ ಪೂಜೆಯಾಗುವುದು.

**ಅವತರಣಿಕೆ**— ವೇದಿನಿರ್ಮಾಣಕ್ಕಾಗಿ ಚತುರಶ್ರಕ್ಷೇತ್ರನಿರ್ಮಾಣಕ್ರಮವನ್ನು ಎಪ್ಪತ್ತುಮೂರನೆಯ ಶ್ಲೋಕದಲ್ಲಿ ತೋರಿಸುತ್ತಾರೆ.—

**ಪೂರ್ವಾದಾಪರಗಂ ಸುಮಧ್ಯಗಮಿತಂ ಸೂತ್ರಂ ಚ ಧಾಮ್ನ್ಯುತ್ತರೇ**
**ಮತ್ಸ್ಯೇ ತತ್ರ ಚ ಮಧ್ಯತೋಽರ್ಧವಿಲಯೈರ್ಮಾನೈಶ್ಚ ಕೋಣೇಷ್ವಪಿ ।**
**ಕುರ್ಯಾನ್ಮತ್ಸ್ಯಚತುಷ್ಟಯಂ ತ್ವಿಹ ಚತುಸ್ಸೂತ್ರಂ ಚ ವೇದ್ಯಾಂ ಭವೇತ್**
**ವೇದಾಶ್ರಂ ಕೃತಕರ್ಣಸೂತ್ರಗಮಿದಂ ತತ್ರೋಕ್ತಮಾನಾತ್ಕಜಂ ॥೭೩॥**

**ಟೀಕೆ**— ಧಾಮ್ನಿ—ವೇದಿನಿರ್ಮಾಣಕ್ಕಾಗಿ ಉನ್ನತವಾಗಿಯೂ ವಿಶಾಲವಾಗಿಯೂ ಏರ್ಪಡಿಸಲ್ಪಟ್ಟ ಚತುಷ್ಕೋಣಕ್ಷೇತ್ರದಲ್ಲಿ, ಪೂರ್ವಾತ್—ಪೂರ್ವದಿಂದ, ಆಪರಗಂ—ಪಶ್ಚಿಮಕ್ಕೆ ಹೋಗುವಂಥದಾಗಿಯೂ, ಸುಮಧ್ಯಗಮಿತಂ—ಡೊಂಕಾಗದಂತೆಯೂ, ಹೆಚ್ಚುಕಡಮೆಯಿಲ್ಲದಂತೆಯೂ ಮಧ್ಯಭಾಗಕ್ಕೆ ಸರಿಯಾಗಿ ಇರಿಸಲ್ಪಟ್ಟುದಾಗಿಯೂ ಇರುವ, ಸೂತ್ರಂ (ಕೃತ್ವಾ)—ಪೂರ್ವಪಶ್ಚಿಮವಾಗಿ ದಾರವೊಂದನ್ನು ಹೊಡೆದು, ಉತ್ತರೇ—ಉತ್ತರದಿಕ್ಕಿನಲ್ಲಿ, ಮತ್ಸ್ಯೇ (ಕೃತೇ ಸತಿ)—ಮತ್ಸ್ಯಾಕಾರವಾದ ಗುರುತು ಮಾಡಲ್ಪಟ್ಟ ಮೇಲೆ, ತತ್ರ ಚ—ಅಲ್ಲಿ, ಮಧ್ಯತಃ—ಮಧ್ಯಭಾಗದಿಂದ, ಅರ್ಧವಿಲಯೈಃ—ಪೂರ್ವಪಶ್ಚಿಮ ಸೂತ್ರಗಳಲ್ಲಿ ಅರ್ಧಾಂಶ ಕಡಮೆಮಾಡಲ್ಪಟ್ಟ, ಮಾನೈಃ—ಅಳತೆಗಳಿಂದ, ಕೋಣೇಷ್ವಪಿ—ಆಗ್ನೇಯ ಮೊದಲಾದ ನಾಲ್ಕು ಮೂಲೆಗಳಲ್ಲಿಯೂ, ಮತ್ಸ್ಯಚತುಷ್ಟಯಂ—ಮತ್ಸ್ಯಾಕಾರವಾದ ನಾಲ್ಕು ಚಿಹ್ನಗಳನ್ನು, ಕುರ್ಯಾತ್—ಮಾಡಬೇಕು. ಇಹ—ಹೀಗೆ ರೇಖೆಗಳ ಸಂಧಿಸ್ಥಾನದಲ್ಲಿ ಮಾಡಿದ ಮತ್ಸ್ಯಚಿಹ್ನಗಳಲ್ಲಿ, ಚತುಸ್ಸೂತ್ರಂ—ನಾಲ್ಕು ಪಾರ್ಶ್ವಗಳಲ್ಲಿಯೂ ನಾಲ್ಕು ಸೂತ್ರಗಳ ರೇಖೆಯು, (ಕೃತಂ ಚೇತ್)—ಮಾಡಲ್ಪಟ್ಟುದಾದರೆ, ವೇದ್ಯಾಂ—ವೇದಿಕೆಯಲ್ಲಿ, ವೇದಾಶ್ರಂ—ಚತುಷ್ಕೋಣವು, ಭವೇತ್—ಆಗುವುದು. ಇದಂ—ಇಂಥ ಚತುಷ್ಕೋಣಕ್ಷೇತ್ರವನ್ನು, ಕೃತಕರ್ಣಸೂತ್ರಗಂ (ಕೃತ್ವಾ)—ವಾಯುವ್ಯದಿಂದ ಆಗ್ನೇಯದವರೆಗೂ ನೈಋತ್ಯದಿಂದ ಈಶಾನ್ಯದವರೆಗೂ ಸ್ಥಾಪಿತವಾದ ಎರಡು ಕರ್ಣಸೂತ್ರಗಳುಳ್ಳುದನ್ನಾಗಿ ಮಾಡಿ, ತತ್ರ—ಅಂಥಕರ್ಣಸೂತ್ರಗಳೊಡನೆ ಕೂಡಿದ ಆ ಚತುಷ್ಕೋಣಕ್ಷೇತ್ರದಲ್ಲಿ, ಉಕ್ತಮಾನಾತ್—ಶಾಸ್ತ್ರೋಕ್ತಪ್ರಮಾಣವನ್ನು ಅನುಸರಿಸಿ, ಕಜಂ-ಕುರ್ಯಾತ್—ಪದ್ಮವನ್ನು ರಚಿಸಬೇಕು. ॥೭೩॥

**ಅವತರಣಿಕೆ**— ಪದ್ಮವನ್ನು ರಚಿಸಬೇಕೆಂದು ಹಿಂದಿನ ಶ್ಲೋಕದಲ್ಲಿ ಹೇಳಲಾಯಿತು; ಅಂಥ ಪದ್ಮದ ರಚನಾಕ್ರಮವನ್ನು ಈಗ ಎಪ್ಪತ್ತುನಾಲ್ಕನೆಯ ಶ್ಲೋಕದಲ್ಲಿ ತೋರಿಸುತ್ತಾರೆ.—

**ಕ್ಷೇತ್ರೇ ವೃತ್ತಚತುಷ್ಟಯಾಂಗುಳಮಿತಂ ವೃತ್ತಂ ಚ ಕೃತ್ವಾ ತತೋ**
**ದ್ವಾತ್ರಿಂಶತ್ಪರಿತೋ ವಿಭಜ್ಯ ಚ ಬಹಿರ್ವೃತ್ತೇ ಚ ತುರ್ಯೇ ಭ್ರಮೇತ್ ।**
**ಚಂದ್ರಾರ್ಧಾನಿ ಚ ಷೋಡಶದ್ವಿಪದತೋಽಪ್ಯಂತಸ್ತೃತೀಯೇ ತಥಾ**
**ಕುರ್ಯಾದಷ್ಟದಳಾನಿ ಚಂದ್ರದಳಯೋರಿಂದ್ರಾದಿದಿಕ್ಷ್ವಗ್ರಕಂ ॥೭೪॥**

**ಟೀಕೆ**— ಕ್ಷೇತ್ರೇ—ಮೊದಲು ಹೇಳಿದಂತೆ ಕರ್ಣಸೂತ್ರವಿಶಿಷ್ಟವಾದ ಚತುರಶ್ರಕ್ಷೇತ್ರದಲ್ಲಿ, ವೃತ್ತಚತುಷ್ಟಯಾಂಗುಳಮಿತಂ—ನಾಲ್ಕು ವೃತ್ತಗಳಿಗೆ ಸರಿಯಾದ ಅಂಗುಲಪ್ರಮಾಣದಿಂದ ಅಳೆಯಲ್ಪಟ್ಟ, ವೃತ್ತಂಕೃತ್ವಾ—ವರ್ತುಳಾಕಾರರೇಖೆಯನ್ನು ಮಾಡಿ, ತತಃ—ಅನಂತರದಲ್ಲಿ, ಬಹಿಃ—ಹೊರಭಾಗದಲ್ಲಿ, ಪರಿತಃ—ನಾಲ್ಕು ಪಾರ್ಶ್ವಗಳಲ್ಲಿಯೂ, ದ್ವಾತ್ರಿಂಶತ್-ವಿಭಜ್ಯ—ಮೂವತ್ತೆರಡು ಭಾಗಗಳಾಗುವಂತೆ ವಿಭಾಗಮಾಡಿ, ತುರ್ಯೇ ವೃತ್ತೇ—ನಾಲ್ಕನೆಯದಾದ ಹೊರಗಿನವೃತ್ತದಲ್ಲಿಯೂ, ತಥಾ—ಹಾಗೆಯೇ, ತೃತೀಯೇ ಚ—ಮೂರನೆಯ ವೃತ್ತದಲ್ಲಿಯೂ, ಅಂತಃ—ಪೂರ್ವಾದಿ ಎಂಟು ದಿಕ್ಕುಗಳಲ್ಲಿಯೂ ಇರುವ ಸೂತ್ರಗಳ ಎರಡು ಪಾರ್ಶ್ವಗಳಲ್ಲಿರುವ, ದ್ವಿಪದತಃ—ಎರಡು ಪದಗಳಲ್ಲಿ, ಷೋಡಶ-ಚಂದ್ರಾರ್ಧಾನಿ—ಹದಿನಾರು ಅರ್ಧಚಂದ್ರಾಕಾರ ರೇಖೆಗಳನ್ನು, ಭ್ರಮೇತ್—ಅರ್ಧಮಂಡಲವಾಗುವಂತೆ ಗೀಚಬೇಕು. ಇಂದ್ರಾದಿದಿಕ್ಷು—ಪೂರ್ವಾದಿ ಎಂಟುದಿಕ್ಕುಗಳಲ್ಲಿ, ಅಗ್ರಕಂ (ಯಥಾ ತಥಾ)—ತುದಿ ಇರುವಂತೆ, ಚಂದ್ರದಳಯೋಃ—ಅರ್ಧಚಂದ್ರದಳಗಳೆರಡರಲ್ಲಿ, ಅಷ್ಟದಳಾನಿ—ಎಂಟು ದಳಗಳನ್ನು, ಕುರ್ಯಾತ್—ಮಾಡಬೇಕು. ॥೭೪॥

**ಅವತರಣಿಕೆ**— ಪದ್ಮದ ರಚನಾಕ್ರಮವನ್ನು ಹಿಂದಿನ ಶ್ಲೋಕದಲ್ಲಿ ಹೇಳಲಾಯಿತು; ಅಂಥ ಪದ್ಮದಲ್ಲಿ ಆ ಆ ಭಾಗಗಳಿಗೆ ಆ ಆ ಬಣ್ಣವನ್ನುಂಟು ಮಾಡುವ ಕ್ರಮವನ್ನು ಎಪ್ಪತ್ತೈದನೆಯ ಪದ್ಯದಲ್ಲಿ ತೋರಿಸುತ್ತಾರೆ. —

**ಪೀತೇನೋಜ್ಜ್ವಲಕರ್ಣಿಕಾಂ ಚ ರಜಸಾ ಶ್ವೇತೇನ ರಕ್ತೇನ ವೈ**
**ಪೀತೇನಾಪಿ ಚ ಕೇಸರಾಣಿ ರಜಸಾ ಶುಕ್ಲೇನ ಪತ್ರಾಣಿ ಚ ।**
**ಶ್ಯಾಮೇನಾಬ್ಜದಳಾಂತರಂ ಸಿತವೃತಂ ರಕ್ತೇಷು ಕೋಣೇಷ್ವಥೋ**
**ಶುಕ್ಲಾಸೃಕ್ಕಪಿಲಾಸಿತಾಭಕಲಿತಾಃ ಕೀಲಾಸ್ಸಪುಷ್ಪಾ ಬಹಿಃ ॥೭೫॥**

**ಟೀಕೆ**— ಪೀತೇನ—ಹಳದಿಯಬಣ್ಣವಾದ, ರಜಸಾ—ಧೂಳಿಯಿಂದ, ಉಜ್ಜ್ವಲಕರ್ಣಿಕಾಂ ಚ—ಪ್ರಕಾಶಮಾನವಾದ ಕರ್ಣಿಕೆಯನ್ನೂ, ಶ್ವೇತೇನ—ಬಿಳುಪಾಗಿಯೂ, ರಕ್ತೇನ—ಕೆಂಪಾಗಿಯೂ, ಪೀತೇನಾಪಿ ಚ—ಹಳದಿ ಬಣ್ಣವಾಗಿಯೂ ಇರುವ, ರಜಸಾ—ಧೂಳಿಯಿಂದ, ಕೇಸರಾಣಿ ಚ—ಕ್ರಮವಾಗಿ ಕೇಸರಗಳ ಅಗ್ರಭಾಗಗಳನ್ನೂ ಮಧ್ಯಭಾಗಗಳನ್ನೂ ಮೂಲಭಾಗಗಳನ್ನೂ, ಶುಕ್ಲೇನ ರಜಸಾ—ಬಿಳಿಧೂಳಿಯಿಂದ, ಪತ್ರಾಣಿ ಚ—ದಳಗಳನ್ನೂ, ಶ್ಯಾಮೇನ ರಜಸಾ— ಕಪ್ಪುಧೂಳಿಯಿಂದ, ಅಬ್ಜದಳಾಂತರಂ ಚ—ಕಮಲದಳಗಳ ಮಧ್ಯಭಾಗವನ್ನೂ, ಕುರ್ಯಾತ್—ಮಾಡಬೇಕು. ಮತ್ತು ಸಿತವೃತಂ—ವೃತ್ತಾಕಾರವು ಬಿಳುಪಾಗಿರಬೇಕು. ಅಥೋ—ಅನಂತರವಲ್ಲ, ರಕ್ತೇಷು—ಕೆಂಪು ಬಣ್ಣವಾಗಿ ಮಾಡಲ್ಪಟ್ಟ, ಕೋಣೇಷು—ನಾಲ್ಕು ಮೂಲೆಗಳಲ್ಲಿ, ಕೀಲಾಃ—ದಳಗಳ ಸಂಧಿ ಕೀಲುಗಳು, ಶುಕ್ಲಾಸೃಕ್ಕಪಿಲಾಸಿತಾಭಕಲಿತಾಃ—ಬಿಳುಪುಬಣ್ಣ-ಕೆಂಪುಬಣ್ಣ-ಕಪಿಲವರ್ಣ-ಕಪ್ಪುಬಣ್ಣ-ಉಳ್ಳವುಗಳಾಗಿ ಮಾಡಲ್ಪಡಬೇಕು. ತೇ—ಅವುಗಳು, ಬಹಿಸ್ಸಪುಷ್ಪಾಃ—ಹೊರಗಡೆಯಲ್ಲಿ ಪುಷ್ಪಸಹಿತಗಳಾಗಿರಬೇಕು. ||೭೫||

**ಅವತರಣಿಕೆ**— ಅಂಥ ಪದ್ಮದ ಪೀಠಗಳ ವರ್ಣವಿಶೇಷಗಳನ್ನೂ ಸತ್ತ್ವರಜಸ್ತಮೋಮಯವಾದ ರೇಖೆಗಳ ವಿಸ್ತಾರವನ್ನೂ ಎಪ್ಪತ್ತಾರನೆಯ ಪದ್ಯದಲ್ಲಿ ತೋರಿಸುತ್ತಾರೆ.—

**ಗಾತ್ರಾಣಿ ಕೃಷ್ಣೇಂದುಭಮಿಂದುರಕ್ತಂ**
**ಸುರಕ್ತಹೇಮಾಭಸುಕೃಷ್ಣಮೈಂದ್ರಾತ್ ।**
**ಸತ್ತ್ವಾದಿರೇಖಾ ಯುವನಿಮ್ನಮಧ್ಯಾಃ**
**ಮಧ್ಯಾಂಗುಳಿಪ್ರಕ್ರಮವಿಸ್ತರಾಶ್ಚ ||೭೬||**

**ಟೀಕೆ**— ಗಾತ್ರಾಣಿ—ಮುಂದೆ ಹೇಳುವ ಕ್ರಮದಲ್ಲಿ ಪದ್ಮಕ್ಕೆ ನಾಲ್ಕು ಪಾರ್ಶ್ವಗಳಲ್ಲಿಯೂ ಮಾಡಬೇಕಾದ ಪೀಠಗಳು, ಐಂದ್ರಾತ್—ಪೂರ್ವದಿಕ್ಕಿನಿಂದ ಮೊದಲು ಮಾಡಿಕೊಂಡು ಕ್ರಮವಾಗಿ, ಕೃಷ್ಣೇಂದುಭಂ—ಕಪ್ಪೂ ಬಿಳುಪೂ ಮಿಶ್ರಿತವಾದುದಾಗಿಯೂ, ಇಂದುರಕ್ತಂ—ಬಿಳುಪೂ ಕೆಂಪೂ ಮಿಶ್ರಿತವಾದುದಾಗಿಯೂ, ಸುರಕ್ತಹೇಮಾಭಂ—ಕೆಂಪೂ ಹೊಂಬಣ್ಣವೂ ಮಿಶ್ರಿತವಾದುದಾಗಿಯೂ, ಹೇಮಾಭಸುಕೃಷ್ಣಂ—ಹೊಂಬಣ್ಣವೂ ಕಪ್ಪೂ ಮಿಶ್ರಿತವಾದುದಾಗಿಯೂ, (ಸ್ಯುಃ)—ಇರಬೇಕು. ಸತ್ತ್ವಾದಿರೇಖಾಃ—ಸತ್ತ್ವ-ರಜಸ್ಸು-ತಮಸ್ಸು-ಎಂಬ ಮೂರು ಗುಣಗಳನ್ನು ತೋರಿಸುವ ಬಿಳುಪು-ಕೆಂಪು-ಕಪ್ಪು-ಈ ಮೂರು ರೇಖೆ

ಗಳೂ, ಯವಸಿವ್ನಮಧ್ಯಾಃ—ಒಂದಕ್ಕಿಂತಲೂ ಮತ್ತೊಂದು ಯವಪ್ರಮಾಣ ದಷ್ಟು ಹಳ್ಳವಾಗಿರುವ ಮಧ್ಯಪ್ರದೇಶವುಳ್ಳುವುಗಳಾಗಿಯೂ, ಮಧ್ಯಾಂಗುಳಿ ಪ್ರಕ್ರಮವಿಸ್ತರಾಶ್ಚ—ನಡುಬೆರಳಿನಷ್ಟು ವಿಸ್ತಾರವುಳ್ಳವುಗಳಾಗಿಯೂ, (ಸ್ಯುಃ)— ಇರಬೇಕು. ||೭೬||

**ಅವತರಣಿಕೆ**— ಪೂರ್ವೋಕ್ತವಾದ ಪೀಠಗಳ ನಿರ್ಮಾಣಲಕ್ಷಣವನ್ನೂ ಪದ್ಮದ ವಿಸ್ತಾರವನ್ನೂ ಎಪ್ಪತ್ತೇಳನೆಯ ಶ್ಲೋಕದಲ್ಲಿ ಹೇಳುತ್ತಾರೆ.—

**ಸಪ್ತಾದೀನ್ ವಿಷಮಾನ್ ದಳಾಂಶ್ಚ ಧರಣೀದಿಕ್ಸ್ಥೈಶ್ಚ ಸೂತ್ರೈಃ ಪುರಾ**
**ತೈಸ್ಸಾರ್ಧಂ ದಳಸಂಖ್ಯಯಾ ಪ್ರತಿದಳಂ ಭಕ್ತ್ಯಾ ಚತುರ್ಭಿರ್ಲಿಖೇತ್ ।**
**ದಂತಾಂಗುಳ್ಯಪರಿಸ್ಥಪದ್ಮಮಪಿವಾ ನಾರ್ಕಾಂಶತೋ ನಾಪ್ಯಧೋ ।**
**ವೇದಾಧೋಽರ್ಕದಳಾತ್ಪರಂ ತ್ವನುಚಿತಂ ಪ್ರೋಕ್ತಂ ತಥಾ ದೇಶಿಕೈಃ||೭೭||**

**ಟೀಕೆ**— ಪುರಾ—ಮೊದಲು, ಧರಣೀದಿಕ್ಸ್ಥೈಃ—ಕ್ಷೇತ್ರದಲ್ಲಿ ಎರಡು ಪಾರ್ಶ್ವಗಳಲ್ಲಿಯೂ ಎಂಟೆಂಟಾಗಿ ಹಾಕಲ್ಪಟ್ಟ, ಸೂತ್ರೈಃ—ಸೂಲುಗಳಿಂದ, ಸಪ್ತಾದೀನ್ ವಿಷಮಾನ್ ದಳಾನ್-ಕೃತ್ವಾ—ಏಳು-ಒಂಬತ್ತು-ಹನ್ನೊಂದು ಎಂಬ ವಿಷಮಪದಗಳನ್ನು ಮಾಡಿಕೊಂಡು, ತೈಸ್ಸಾರ್ಧಂ—ಆ ಪದಗಳೊಡನೆ, ದಳ ಸಂಖ್ಯಯಾ—ಪದಸಂಖ್ಯೆಯಿಂದ, ಪ್ರತಿದಳಂ—ಪ್ರತಿಯೊಂದು ದಳದಲ್ಲಿಯೂ, ಭಕ್ತ್ಯಾ (ವಿಲಿಪ್ಯ)—ಚನ್ನಾಗಿ ಲೇಪಿಸಿ, ಚತುರ್ಭಿಃ—ನಾಲ್ಕುಪದಗಳಿಂದ (ನಾಲ್ಕುಪದಗಳವರೆಗೆ), ಲಿಖೇತ್—ಬರೆಯಬೇಕು, ದಂತಾಂಗುಳ್ಯಪರಿಸ್ಥಪದ್ಮ ಮಪಿ ವಾ ನ—ಮೂವತ್ತೆರಡು ಅಂಗುಳಕ್ಕೆ ಹೆಚ್ಚಿದ ಕಮಲವೂ ಇಲ್ಲ, ಅರ್ಕಾಂ ಶತಃ—ಹನ್ನೆರಡು ಅಂಗುಳಕ್ಕಿಂತಲೂ, ಅಧಃ ಪದ್ಮಮಪಿ ನ—ಕಡಮೆಯಾದ ಕಮಲವೂ ಇಲ್ಲ, ತಥಾ—ಹಾಗೆಯೇ, ವೇದಾಧಃ ಪದ್ಮಂ—ನಾಲ್ಕು ದಳಗಳಿಗಿಂ ತಲೂ ಕಡಮೆಯಾದ ದಳವುಳ್ಳ ಕಮಲವೂ, ಅರ್ಕದಳಾತ್ ಪರಂ ಪದ್ಮಮಪಿ— ಹನ್ನೆರಡು ದಳಗಳಿಗಿಂತಲೂ ಹೆಚ್ಚು ದಳಗಳುಳ್ಳ ಕಮಲವೂ, ಅನುಚಿತಂ— ಯುಕ್ತವಲ್ಲ. ಇತಿ—ಹೀಗೆ, ದೇಶಿಕೈಃ—ಆಚಾರ್ಯರಿಂದ, ಪ್ರೋಕ್ತಂ—ಹೇಳ ಲ್ಪಟ್ಟಿದೆ. ||೭೭||

**ಅವತರಣಿಕೆ**— ಲತಾಲಿಂಗವೆಂಬ ಮಂಡಲದಲ್ಲಿ ರಚಿಸಬೇಕಾದ ಪದ್ಮದ ಲಕ್ಷಣವನ್ನು ಎಪ್ಪತ್ತೆಂಟನೆಯ ಶ್ಲೋಕದಲ್ಲಿ ಹೇಳುತ್ತಾರೆ—

**ಭಕ್ತೇ ವಿಂಶತಿಧಾ ಬಹಿಶ್ಶಶಿಪದಾ ವೀಥಿಸ್ಸಿತಾ ದಿಕ್ಷುಜ್ಯೈಃ**
**ದ್ವಾರಾಣೀಶಮುಖದ್ಯುತೀನ್ಯುಭಯತೋ ಲಿಂಗಾನಿ ಪಾಂಡ್ವಿಂದುಗೈಃ ।**
**ಕೋಣೇಷ್ವಬ್ಧಿಪದೈರ್ಲತಾ ಹರಿತಭಾ ವೀಥಿಶ್ಚತುಷ್ಷಷ್ಟಿಭಿಃ**
**ಪದ್ಮಂ ಶಾಂತಿಕಲಾದಿಭಾನಿ ಚ ಲತಾಲಿಂಗೋದ್ಭವೇ ಮಂಡಲೇ ॥೭೮॥**

**ಟೀಕೆ—** ಲತಾಲಿಂಗೋದ್ಭವೇ—ಲತಾಕಾರವಾದ ಲಿಂಗಕ್ಕೆ ಆಧಾರವಾದುದರಿಂದ ಲತಾಲಿಂಗವೆಂಬ ಹೆಸರುಳ್ಳ, ಮಂಡಲೇ—ಮಂಡಲದಲ್ಲಿ, ಪದ್ಮಂ (ಯಥಾ)—ಕಮಲವನ್ನು ರಚಿಸುವ ಕ್ರಮವು ಹೇಗೆಂದರೆ-ವಿಂಶತಿಧಾ-ಭಕ್ತೇ—ಇಪ್ಪತ್ತುಕೋಷ್ಠಗಳುಳ್ಳದಾಗಿ ಭಾಗಿಸಲ್ಪಟ್ಟ, (ಕ್ಷೇತ್ರೇ)—ಕ್ಷೇತ್ರದಲ್ಲಿ, ವೀಥಿಃ—ಹೊರಗೆ ನಾಲ್ಕು ಪಾರ್ಶ್ವಗಳಲ್ಲಿಯೂ ಬೀದಿಯು, ಶಶಿಪದಾ—ಒಂದು ಕೋಷ್ಠದ ಸಾಲು ಉಳ್ಳದಾಗಿಯೂ, ಸಿತಾ-(ಸ್ಯಾತ್)—ಬಿಳುಪಾದುದಾಗಿಯೂ ಇರಬೇಕು. ದಿಕ್ಷುಜ್ಯೈಃ—ಪೂರ್ವಾದಿ ನಾಲ್ಕು ದಿಕ್ಕುಗಳಲ್ಲಿರುವ ಎಂಟು ಕೋಷ್ಠಗಳಿಂದ, ದ್ವಾರಾಣಿ—ನಾಲ್ಕು ದ್ವಾರಗಳೂ, ಪಾಂಡ್ವಿಂದುಗೈಃ—ಲಿಂಗ-ಪಟ್ಟಿ-ಕಂಠ-ಪೀಠ-ಇವುಗಳಿಗೋಸ್ಕರ ಕ್ರಮವಾಗಿ ೧-೩-೧-೩-ನಂತೆ ಬಿಡಲ್ಪಟ್ಟ ಕೋಷ್ಠಗಳಿಂದ, ಉಭಯತೋಲಿಂಗಾನಿ—ಎರಡು ಪಾರ್ಶ್ವಗಳಲ್ಲಿಯೂ ಮಡಗಲ್ಪಟ್ಟ ಲಿಂಗವುಳ್ಳವುಗಳಾಗಿಯೂ, ಈಶಮುಖದ್ಯುತೀನಿ—ಶಿವನ ತತ್ಪುರುಷಾದಿಮುಖಗಳಿಗೆ ಸಮಾನವಾದ ಕಾಂತಿಯುಳ್ಳವುಗಳಾಗಿಯೂ, ಕಾರ್ಯಾಣಿ—ಮಾಡಲ್ಪಡತಕ್ಕವು. ಕೋಣೇಷು—ಆಗ್ನೇಯ ಮೊದಲಾದ ನಾಲ್ಕು ಮೂಲೆಗಳಲ್ಲಿಯೂ, ಅಬ್ಧಿಪದೈಃ—ನಾಲ್ಕು ಕೋಷ್ಠಗಳಿಂದ, ಲತಾ (ಕಾರ್ಯಾ)—ಲತೆಯ ಆಕಾರವು ಮಾಡಲ್ಪಡಬೇಕು. ವೀಥಿಃ—ಲಿಂಗದ ಮೇಲೆ ನಾಲ್ಕು ಪಾರ್ಶ್ವಗಳಲ್ಲಿಯೂ ಒಂದು ಕೋಷ್ಠದ ಸಾಲಿನಲ್ಲಿ ಮಾಡಲ್ಪಟ್ಟ ಪಂಕ್ತಿಯು, ಹರಿತಭಾ—ಹಸುರುಬಣ್ಣವುಳ್ಳದಾಗಿರಬೇಕು. ಚತುಷ್ಷಷ್ಟಿಭಿಃ—ಮಧ್ಯದಲ್ಲಿ ಅರವತ್ತುನಾಲ್ಕು ಕೋಷ್ಠಗಳಿಂದ ಪದ್ಮಂ (ಕಾರ್ಯಂ)—ಕಮಲವು ಮಾಡಲ್ಪಡತಕ್ಕದು. (ತತ್ಪತ್ರಾಣಿ ಚ)—ಆ ಕಮಲದ ದಳಗಳು, ಶಾಂತಿಕಲಾದಿಭಾನಿ—ಶಾಂತಿ ಮೊದಲಾದ ಕಲೆಗಳ ಬಣ್ಣವುಳ್ಳವುಗಳಾಗಿ, (ಕಾರ್ಯಾಣಿ)—ಮಾಡಲ್ಪಡತಕ್ಕವು. ॥೭೮॥

**ಅವತರಣಿಕೆ—** ಈ ಲತಾಲಿಂಗಮಂಡಲದ ವಿಷಯವಾದ ಮತ್ತೊಂದು ವಿಶೇಷವನ್ನು ಎಪ್ಪತ್ತೊಂಬತ್ತನೆಯ ಪದ್ಯದಲ್ಲಿ ತೋರಿಸುತ್ತಾರೆ.—

**ಅಷ್ಟಾವಿಂಶತಿಭಾಜಿತೇ ವಸುಪದೈರ್ಮಧ್ಯೇಽಂಬುಜಂ ಭಾಗತಃ**
**ಪಟ್ಟಂ ಸ್ಯಾತ್ಸಿತವೀಥಿಕಾ ಶಶಿಪದಾತ್ಕೋಣೇ ಲತಾ ಸಪ್ತಭಿಃ ।**

ದ್ವಾರಂ ದಿಕ್ಷು ಮುನಿದ್ವಯೈರುಭಯತೋ ಲಿಂಗಂ ಚ ಷಟ್ಸಪ್ತಭಿ
ರ್ವೀಥಿರ್ಬಾಹ್ಯಪದೇನ ಮಂಡಲಮಿದಂ ತ್ವನ್ಯಲ್ಲತಾಲಿಂಗಜಂ ॥೭೯॥

ಟೀಕೆ— ಅಷ್ಟಾವಿಂಶತಿಭಾಜಿತೇ—ಇಪ್ಪತ್ತೆಂಟು ಕೋಷ್ಠಗಳಾಗಿ ಭಾಗಿಸಲ್ಪಟ್ಟ, (ಕ್ಷೇತ್ರೇ)—ಕ್ಷೇತ್ರದಲ್ಲಿ, ಮಧ್ಯೇ—ಮಧ್ಯಭಾಗದಲ್ಲಿ, ವಸುಪದೈಃ—ಎಂಟೆಂಟು ಅರವತ್ತುನಾಲ್ಕು ಪದಗಳಿಂದ, ಅಂಬುಜಂ—ಪದ್ಮವನ್ನು, (ಕುರ್ಯಾತ್) ಮಾಡಬೇಕು. ಭಾಗತಃ—ಅದರ ಸುತ್ತಲೂ ಒಂದು ಸಾಲಿನಿಂದ, ಪಟ್ಟಂ ಸ್ಯಾತ್-ಪಟ್ಟಿಕೆಯಿರಬೇಕು. ಶಶಿಪದಾತ್—ಪಟ್ಟಿಕೆಯ ಹೊರಗಡೆಯಲ್ಲಿ ಒಂದು ಸಾಲಿನಿಂದ, ಸಿತವೀಥಿಕಾ—ಬಿಳುಪುಬಣ್ಣದ ಬೀದಿಯಿರಬೇಕು. ಕೋಣೇ—ಆಗ್ನೇಯ ಮೊದಲಾದ ಪ್ರತಿಯೊಂದು ಮೂಲೆಯಲ್ಲಿಯೂ, ಸಪ್ತಭಿಃ—ಏಳುಪದಗಳಿಂದ, ಲತಾ ಸ್ಯಾತ್—ಲತಾಕಾರವು ಇರಬೇಕು. ದಿಕ್ಷು—ಪೂರ್ವ ಮೊದಲಾದ ನಾಲ್ಕು ದಿಕ್ಕುಗಳಲ್ಲಿ, ಮುನಿದ್ವಯೈಃ—ಅಗಲಕ್ಕೆ ಎರಡುಪದಗಳು, ಉದ್ದಕ್ಕೆ .ಏಳು ಪದಗಳು, ಅಂತು ಹದಿನಾಲ್ಕು ಪದಗಳಿಂದ, ದ್ವಾರಂ (ಭವೇತ್)—ನಾಲ್ಕು ಬಾಗಿಲುಗಳಿರಬೇಕು. ಉಭಯತಃ—ಆ ದ್ವಾರದ ಎರಡು ಪಕ್ಕಗಳಲ್ಲಿಯೂ, ಷಟ್ಸಪ್ತಭಿಃ-ಅಗಲದಲ್ಲಿ ಆರುಪದಗಳು ಉದ್ದದಲ್ಲಿ ಏಳುಪದಗಳವರೆಗೆ ನಲವತ್ತೆರಡುಪದಗಳಿಂದ, ಲಿಂಗಂ (ಸ್ಯಾತ್)—ಕ್ರಮವಾಗಿ-೪-೬-೪-೨-೪-೬ ಪದಗಳಂತೆ ಲಿಂಗ, ಪಟ್ಟಿಕೆ, ಕಮಲ, ಕಂಠ, ಕಮಲ, ಪೀಠ ಇವುಗಳೊಡನೆ ಎಂಟು ಲಿಂಗಸ್ವರೂಪವಿರಬೇಕು. ಬಾಹ್ಯಪದೇನ—ನಾಲ್ಕುಪಾರ್ಶ್ವಗಳಲ್ಲಿಯೂ ಉಳಿದಿರುವ ಒಂದು ಪದದಿಂದ, ವೀಥಿಃ (ಸ್ಯಾತ್) ಪಂಕ್ತಿ (ಬೀದಿ) ಯಿರಬೇಕು. ಇದಂ ಮಂಡಲಂ—ಹೀಗೆ ರಚಿಸಲ್ಪಟ್ಟ ಮಂಡಲವು, ಅನ್ಯತ್—ಪೂರ್ವೋಕ್ತವಾದ ಮಂಡಲಕ್ಕಿಂತಲೂ ಬೇರೊಂದಾದ, ಲತಾಲಿಂಗಂ—ಲತಾಲಿಂಗಮಂಡಲವಾಗಿ, (ಸ್ಯಾತ್)—ಆಗುವುದು.

ಅವತರಣಿಕೆ— ಶ್ರೇಷ್ಠವಾದ ಮತಂಗಾಗಮದಲ್ಲಿ ವಿಶೇಷವಾಗಿ ಹೊಗಳಲ್ಪಟ್ಟಿರುವ ನವನಾಭವೆಂಬ ಮಂಡಲದ ಲಕ್ಷಣವನ್ನು ಎಂಬತ್ತನೆಯ ಶ್ಲೋಕದಲ್ಲಿ ಹೇಳುತ್ತಾರೆ.—

ಕ್ಷೇತ್ರೇ ಸಪ್ತಪದೀಕೃತೇ ಶಶಿಪದಾದ್ವೀಥಿಸ್ಸಮಂತಾತ್ಪದೈಃ
ದಿಕ್ಷ್ವಷ್ಟಾಸು ಚ ಪಂಕಜಾನಿ ಪರಿತೋ ವೀಥೀಂದುಭಾಗೇನ ಚ ।
ದ್ವಾರಾಣ್ಯಷ್ಟ ಕಜಾಂತರಸ್ಥಿತಪದೈರಂತಸ್ಸ್ಥಿತೈರ್ಗಾತ್ರಕಂ
ಪದ್ಮಂ ಸ್ಯಾನ್ನವನಾಭಮಂಡಲಮಿದಂ ಶ್ರೀಮನ್ಮತಂಗೋದಿತಂ ॥೮೦॥

**ಟೀಕೆ—** ಸಪ್ತಪದೀಕೃತೇ—ಪಶ್ಚಿಮದಿಂದ ಪೂರ್ವಕ್ಕೂ, ದಕ್ಷಿಣದಿಂದ ಉತ್ತರಕ್ಕೂ ಎಂಟೆಂಟು ದಾರಗಳನ್ನು ಹೊಡೆದು ಏಳುಪದಗಳಾಗಿ ವಿಭಾಗಿಸಲ್ಪಟ್ಟ, ಕ್ಷೇತ್ರೇ—ಚತುಷ್ಕೋಣಭೂಮಿಯಲ್ಲಿ, ಶಶಿಪದಾತ್ (ಬಹಿಃ)—ಮಧ್ಯದಲ್ಲಿರುವ ಒಂದುಪದಕ್ಕಿಂತಲೂ ಹೊರಗಡೆಯಲ್ಲಿ, ಸಮಂತಾತ್—ನಾಲ್ಕುಪಾರ್ಶ್ವಗಳಲ್ಲಿಯೂ ಇರುವ, ಪದ್ಯೈಃ—ಎಂಟುಪದಗಳಿಂದ, ವೀಥಿಃ—ಬೀದಿಯೂ, ಅಷ್ಟಾಸು ಚ ದಿಕ್ಷು—ಬೀದಿಯ ಹೊರಭಾಗದಲ್ಲಿರುವ ಹದಿನಾರುಪದಗಳೊಳಗೆ ಪೂರ್ವಾದಿ ಎಂಟುದಿಕ್ಕುಗಳಲ್ಲಿರುವ ಎಂಟುಪದಗಳಲ್ಲಿ, ಪಂಕಜಾನಿ—ಎಂಟುಕಮಲಗಳೂ, ಇಂದುಭಾಗೇನ—ಇಂಥ ಕಮಲಗಳ ಹೊರಭಾಗದಲ್ಲಿ ಉಳಿದಿರುವ ಒಂದು ಪದದಿಂದ, ಪರಿತಃ ವೀಥೀ—ನಾಲ್ಕುಪಾರ್ಶ್ವಗಳಲ್ಲಿಯೂ ಬೀದಿಯೂ, ಕಜಾಂತರಸ್ಥಿತ ಪದ್ಯೈಃ—ಎಂಟುಕಮಲಗಳ ನಡುನಡುವೆ ಇರುವ ಎಂಟುಪದಗಳಿಂದ, ಅಷ್ಟ ದ್ವಾರಾಣಿ—ಎಂಟುದ್ವಾರಗಳೂ, ಅಂತಸ್ಸ್ಥಿತೈಃ—ಪೂರ್ವಾದಿನಾಲ್ಕುದಿಕ್ಕುಗಳಲ್ಲಿಯೂ ದ್ವಾರಗಳ ನಡನಡುವಿನಲ್ಲಿರುವ ನಾಲ್ಕುಪದಗಳಿಂದ, ಗಾತ್ರಕಂ—ಪೀಠವೂ, (ಕೃತಂ ಚೇತ್)—ಮಾಡಲ್ಪಟ್ಟದಾದರೆ, ಪದ್ಮಂ ಸ್ಯಾತ್—ಪದ್ಮಮಂಡಲವಾಗುವುದು. ಇದಂ—ಹೀಗೆ ರಚಿಸಲ್ಪಟ್ಟ ಈ ಪದ್ಮಮಂಡಲವು, ನವನಾಭಮಂಡಲಮಿತಿ— ನವನಾಭಮಂಡಲವೆಂಬ ಹೆಸರಿನಿಂದ ವ್ಯವಹರಿಸಲ್ಪಡುವುದೆಂದು, ಶ್ರೀಮನ್ಮತಂಗೋದಿತಂ—ಶ್ರೇಷ್ಠವಾದ ಮತಂಗಾಗಮದಲ್ಲಿ ಹೇಳಲ್ಪಟ್ಟಿರುವುದು.

**ಅವತರಣಿಕೆ—** ಸ್ವಾಯಂಭುವಾಗಮದಲ್ಲಿ ಉಕ್ತವಾಗಿರುವ ಅನಂತ ವಿಜಯವೆಂಬ ಮಂಡಲವಿಶೇಷದ ಲಕ್ಷಣವನ್ನು ಎಂಬತ್ತೊಂದು ಎಂಬತ್ತೆರಡನೆಯ ಶ್ಲೋಕಗಳಲ್ಲಿ ತೋರಿಸುತ್ತಾರೆ.—

**ಕ್ಷೇತ್ರೇ ಷಟ್ಪದಭಾಜಿತೇ ಶ್ರುತಿಪದ್ಯೈರ್ಮಧ್ಯೇಽಂಬುಜಂ ಭಾಗಯೋ**
**ರ್ವೀಥಿಸ್ಸ್ಯಾತ್ಪರಿತಸ್ತದರ್ಧವಿಲಯಾತ್ಪೀಠಾಯ ಗಾತ್ರಾಣಿ ಚ ।**
**ಬಾಹ್ಯೇ ದಿಕ್ಷ್ವಭಿತೋ ವಿದಿಕ್ಷು ಚ ಪದ್ಯೈರಿಂದ್ರಾದಿಭೈರಾವೃತಿ**
**ರ್ವೀಥೀವಕ್ತ್ರಗತೈಸ್ತಥಾಷ್ಟಪದಕೈರ್ದ್ವಾರಾಣಿ ಶಾಂತ್ಯಾದಿಭೈಃ ॥೮೧॥**

**ಶಿಷ್ಟೈರಷ್ಟಪದ್ಯೈಶ್ಚ ದಿಕ್ಸ್ಥಪದಯೋಸ್ಸವ್ಯಾಪಸವ್ಯಸ್ಥಿತೈಃ**
**ಶ್ವೇತಾರ್ಕಾಸಿತಲೋಹಿತಾಭಶಶಭೃಚ್ಛ್ವೇತಾಸಿತಸ್ವರ್ಣಭೈಃ ।**
**ವರ್ಣೈರಷ್ಟಭಿರಾದಿಕೈಶ್ಚ ಲಿಖಿತೈರ್ಯುಕ್ತಂ ಚ ಸತ್ತ್ವಾದಿಕಾ**
**ರೇಖಾ ಬಾಹ್ಯಕೃತಾತ್ವನಂತವಿಜಯಂ ಸ್ವಾಯಂಭುವಂ ಮಂಡಲಂ॥೮೨॥**

**ಟೀಕೆ**— ಷಟ್ಪದಭಾಜಿತೇ—ಪಶ್ಚಿಮದಿಂದ ಪೂರ್ವಕ್ಕೂ ದಕ್ಷಿಣದಿಂದ ಉತ್ತರಕ್ಕೂ ಏಳೇಳು ದಾರಗಳನ್ನು ಹೊಡೆದು ಆರುಪದಗಳಾಗಿ ವಿಭಾಗಿಸಲ್ಪಟ್ಟ, ಕ್ಷೇತ್ರೇ—ಚತುಷ್ಕೋಣಭೂಮಿಯಲ್ಲಿ, ಮಧ್ಯೇ—ಮಧ್ಯಭಾಗದಲ್ಲಿ, ಶ್ರುತಿಪದೈಃ—ನಾಲ್ಕುಪದಗಳಿಂದ, ಅಂಬುಜಂ (ಕುರ್ಯಾತ್)—ಕಮಲವನ್ನು ಮಾಡಬೇಕು. ಭಾಗಯೋಃ—ಉಳಿದ ಎರಡು ಪದಗಳಲ್ಲಿ, ಪರಿತಃ— ನಾಲ್ಕು ಪಾರ್ಶ್ವಗಳಲ್ಲಿಯೂ, ವೀಥಿಸ್ಸ್ಯಾತ್—ಪಂಕ್ತಿಯಿರಬೇಕು. ತದರ್ಧವಿಲಯಾತ್—ಪೂರ್ವಾದಿ ನಾಲ್ಕು ದಿಕ್ಕುಗಳಲ್ಲಿಯೂ ಕಮಲದ ಹೊರಭಾಗದಲ್ಲಿ ಬೀದಿಯ ಮಧ್ಯದಲ್ಲಿರುವ ಎರಡು ಪದಗಳಲ್ಲಿ ಮಧ್ಯಪದವನ್ನು ಮಾಡುವುದಕ್ಕಾಗಿ ಅರ್ಧಪದಕ್ಕೆ ಲೋಪಮಾಡುವುದರಿಂದ, ಪೀಠಾಯ—ವಿದ್ಯೇಶ್ವರಪೀಠಕ್ಕಾಗಿ ಪದವನ್ನು ಏರ್ಪಡಿಸಬೇಕು. ಗಾತ್ರಾಣಿ ಚ—ನಾಲ್ಕು ಪೀಠಗಳನ್ನೂ ಏರ್ಪಡಿಸಬೇಕು. ಬಾಹ್ಯೇ—ಪದ್ಮಕ್ಕೆ ಹೊರಭಾಗದಲ್ಲಿ, ದಿಕ್ಷು—ಪೂರ್ವಾದಿ ನಾಲ್ಕು ದಿಕ್ಕುಗಳಲ್ಲಿಯೂ, ವಿದಿಕ್ಷು ಚ—ಆಗ್ನೇಯಾದಿ ನಾಲ್ಕು ಮೂಲೆಗಳಲ್ಲಿಯೂ, ಇಂದ್ರಾದಿಭಿಃ—ಇಂದ್ರ-ಅಗ್ನಿ ಮೊದಲಾದವರ ಬಣ್ಣದಂತೆ ಬಣ್ಣವುಳ್ಳ, ಪದೈಃ—ಎಂಟು ದಿಕ್ಕುಗಳಲ್ಲಿರುವ ಎಂಟು ಪದಗಳಿಂದ, ಅಭಿತಃ—ಸುತ್ತಲೂ, ಆವೃತಿಃ-(ಕಾರ್ಯಾ)—ದೇವಾವರಣವು ಮಾಡಲ್ಪಡತಕ್ಕದು. ತಥಾ—ಹಾಗೆಯೇ, ಶಾಂತ್ಯಾದಿಭಿಃ—ಶಾಂತಿ ಮೊದಲಾದುವುಗಳ ಬಣ್ಣವಾದ ಹೊಂಬಣ್ಣ-ಕಪ್ಪುಬಣ್ಣ-ಬಿಳುಪುಬಿಣ್ಣ-ಕೆಂಪು ಬಣ್ಣಗಳುಳ್ಳ, ವೀಥೀವಕ್ತ್ರಗತೈಃ—ಪಂಕ್ತಿಯ ಮುಖಗಳಲ್ಲಿರುವ, ಅಷ್ಟಪದಕೈಃ—ನಾಲ್ಕು ದಿಕ್ಕುಗಳಲ್ಲಿರುವ ಎಂಟು ಪದಗಳಿಂದ, ದ್ವಾರಾಣಿ (ಸ್ಯುಃ)—ಎಂಟು ದ್ವಾರಗಳಾಗುವುವು. (ಅಥ)—ಅನಂತರದಲ್ಲಿ, ದಿಕ್ಸ್ಥಪದಯೋಃ—ನಾಲ್ಕು ದಿಕ್ಕುಗಳಲ್ಲಿಯೂ ದ್ವಾರವಾಗಿರುವ ಎರಡು ಪದಗಳಿಗೂ, ಸವ್ಯಾಪಸವ್ಯಸ್ಥಿತೈಃ—ಎಡಪಾರ್ಶ್ವ ಬಲಪಾರ್ಶ್ವಗಳಲ್ಲಿರುವ, ಶ್ವೇತಾರ್ಕಾಸಿತಲೋಹಿತಾಭಶಶಭೃಚ್ಛ್ವೇತಾಸಿತಸ್ವರ್ಣಭೈಃ—ಬಿಳುಪು, ಕೆಂಪು, ಕಪ್ಪು, ಕೆಂಪು, ಬಿಳುಪು, ಬಿಳುಪು, ಕಪ್ಪು, ಹೊಂಬಣ್ಣ, ಎಂಬ ಆದಿಕೈಃ—ಬಿಳುಪೇ ಮೊದಲಾದ, ಅಷ್ಟಭಿರ್ವರ್ಣೈಃ—ಎಂಟು ಬಣ್ಣಗಳಿಂದ, ಲಿಖಿತೈಃ—ರೇಖಾಕಾರವಾಗಿ ಬರೆಯಲ್ಪಟ್ಟ, ಶಿಷ್ಟೈಃ—ಅವಶಿಷ್ಟಗಳಾದ, ಅಷ್ಟಪದೈಃ—ಎಂಟು ಪದಗಳೊಡನೆ,ಯುಕ್ತಂ (ಕೃತ್ವಾ)—ಕೂಡಿದುದಾಗಿ ಮಾಡಿ, ಸತ್ತ್ವಾದಿಕಾ ರೇಖಾ ಬಾಹ್ಯಕೃತಾ (ಚೇತ್)—ಹೊರಗಡೆಯಲ್ಲಿ ಸತ್ತ್ವಾದಿಗುಣಗಳ ಬಣ್ಣಗಳುಳ್ಳ, ರೇಖೆಯೂ ಮಾಡಲ್ಪಟ್ಟದಾದರೆ, ಇದಂ—ಈ ಮಂಡಲವು, ಅನಂತವಿಜಯಂ—ಅನಂತವಿಜಯವೆಂಬ ಹೆಸರುಳ್ಳ,

ಮಂಡಲಮಿತಿ— ಮಂಡಲವೆಂಬುದಾಗಿ, ಸ್ವಾಯಂಭುವಂ—ಸ್ವಾಯಂಭುವಾಗಮದಲ್ಲಿ ಹೇಳಲ್ಪಟ್ಟಿದೆ. ||೮೯||೮೨||

**ಅವತರಣಿಕೆ**— ಷಟ್ಸಹಸ್ರವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಭದ್ರಮಂಡಲವೆಂಬ ಮಂಡಲವಿಶೇಷದ ಲಕ್ಷಣವನ್ನು ಎಂಬತ್ತುಮೂರನೆಯ ಶ್ಲೋಕದಲ್ಲಿ ತೋರಿಸುತ್ತಾರೆ.—

**ವೇದ್ಯೈಶ್ಚತುಷ್ಷಷ್ಟಿಪದೇಷು ಮಧ್ಯೇ**
**ಪದ್ಮಂ ಚ ವೀಥಿಃ ಪರಿತೋಽಬ್ಜಭಾಗೈಃ ।**
**ದ್ವಾರಾಣಿ ದಿಕ್ಷು ದ್ವಿಪದಂ ಕಪೋಲಂ**
**ಸ್ಯಾತ್ಕೋಣಬಂಧೋಽನ್ಯಪದ್ಯೈಶ್ಚ ಭದ್ರಂ ||೮೩||**

**ಟೀಕೆ**— ಚತುಷ್ಷಷ್ಟಿಪದೇಷು—ಪೂರ್ವಪಶ್ಚಿಮವಾಗಿಯೂ ದಕ್ಷಿಣೋತ್ತರವಾಗಿಯೂ ಒಂಬೊಂಬತ್ತು ನೂಲುಗಳನ್ನು ಹೊಡೆದು ಎಂಟೆಂಟು ಅರವತ್ತನಾಲ್ಕು ಪದಗಳಾಗಿ ವಿಭಾಗಿಸಲ್ಪಟ್ಟಿರುವ ಕ್ಷೇತ್ರದ ಪದಗಳಲ್ಲಿ, ಮಧ್ಯೇ— ಮಧ್ಯದಲ್ಲಿ, ವೇದ್ಯೈಃ—ನಾಲ್ಕುಪದಗಳಿಂದ, ಪದ್ಮಂ—ಕಮಲವೂ, ಪರಿತಃ— ಕಮಲದ ಸುತ್ತಲೂ ಒಂದುಪದದಿಂದ, ವೀಥಿಃ—ಪಂಕ್ತಿಯೂ, ದಿಕ್ಷು—ಪೂರ್ವಾದಿನಾಲ್ಕುದಿಕ್ಕುಗಳಲ್ಲಿಯೂ, ಅಬ್ಜಭಾಗೈಃ—ಮಧ್ಯದಲ್ಲಿರುವ ಕಮಲದ ಪದಗಳಿಗೆ ಸರಿಯಾದ ನಾಲ್ಕುಪದಗಳಿಂದ, ದ್ವಾರಾಣಿ—ನಾಲ್ಕುದ್ವಾರಗಳೂ, ದ್ವಿಪದಂ—ದ್ವಾರದ ಎರಡುಪಾರ್ಶ್ವಗಳಲ್ಲಿಯೂ ಎರಡುಪದಗಳವರೆಗೆ, ಕಪೋಲಂ— ದ್ವಾರಪಾರ್ಶ್ವಭಾಗವೂ, ಅನ್ಯಪದ್ಯೈಃ—ಉಳಿದ ಇತರಪದಗಳಿಂದ, ಕೋಣಬಂಧಃ —ನಾಲ್ಕುಮೂಲೆಗಳ ಪದಬಂಧನವೂ, ಸ್ಯಾತ್—ಆಗಬೇಕು. (ಏವಂ ಕೃತಂ-ಇದಂ) ಈ ರೀತಿ ಮಾಡಲ್ಪಟ್ಟ ಈ ಮಂಡಲವು, ಭದ್ರಂ ಸ್ಯಾತ್-ಭದ್ರಮಂಡಲವೆನಿಸಿಕೊಳ್ಳುವುದು. ||೮೩||

**ಅವತರಣಿಕೆ**— ಕಿರಣಾಗಮದಲ್ಲಿ ಉಕ್ತವಾಗಿರುವ ಪುರಾಕಾರಮಂಡಲಕ್ಕೆ ಲಕ್ಷಣವನ್ನು ಎಂಬತ್ತುನಾಲ್ಕನೆಯ ಮತ್ತು ಎಂಬತ್ತೈದನೆಯ ಶ್ಲೋಕಗಳಲ್ಲಿ ಹೇಳುತ್ತಾರೆ.—

**ಕ್ಷೇತ್ರೇ ವಿಂಶತಿವೇದಭಾಗರಚಿತೇ ಮಧ್ಯೇ ಕಲಾಭಿಃ ಕಜಂ**
**ದ್ವಾಭ್ಯಾಂ ಗಾತ್ರಕವೀಥಿಕೇ ಶ್ರುತಿಪದೈರ್ವಿದ್ಯೇಶ್ವರಾದ್ಯಾವೃತೀಃ ।**
**ತತ್ರಾಬ್ಜೋತ್ಪಲಸ್ವಸ್ತಿಕಾನಿ ಚ ತಥಾ ವಜ್ರಾದಿಕ್ಲೃಪ್ತೀರ್ಬಹಿ**
**ರ್ದ್ವಾರಂ ಪದ್ಮಸಮಂ ಕಪೋಲಗಲಕಾದ್ಯೇಕೈಕತಃ ಪಾರ್ಶ್ವಯೋಃ ||೮೪||**

**ಶಿಷ್ಟೈಃ ಕೋಣಮಥೇಂದುಭಚ್ಛದವೃತಂ ಪೀತಂ ಚ ಮಧ್ಯಂ ಶಶಿ**
**ರಕ್ತಸ್ವರ್ಣಭಕೇಸರಂ ಹರಿತಭಂ ಕೋಣಾಂಶ್ಚ ಧರ್ಮಾದಿಭಾನ್ ।**
**ಚಿತ್ರಂ ಗಾತ್ರಕಮಿಂದುವೀಥಿ ಚ ಸಿತಂ ಪದ್ಮಂ ಚ ಪಾಂಡೂತ್ಪಲಂ**
**ರಕ್ತಂ ಸ್ವಸ್ತಿಕಮಸ್ತ್ರಕಾಣಿ ಮುಖಭಂ ದ್ವಾರಂ ಪುರಂ ಕೈರಣಂ ॥೮೫॥**

**ಟೀಕೆ**— ವಿಂಶತಿವೇದಭಾಗರಚಿತೇ—ಪೂರ್ವಪಶ್ಚಿಮವಾಗಿಯೂ ದಕ್ಷಿಣೋತ್ತರವಾಗಿಯೂ ಇಪ್ಪತ್ತೈದು ದಾರಗಳನ್ನು ಹೊಡೆದು ಇಪ್ಪತ್ತುನಾಲ್ಕು ಪದಗಳಾಗಿ ವಿಭಾಗಿಸಲ್ಪಟ್ಟ, ಕ್ಷೇತ್ರೇ—ಚತುರಶ್ರಕ್ಷೇತ್ರದಲ್ಲಿ, ಮಧ್ಯೇ—ಮಧ್ಯಭಾಗದಲ್ಲಿ, ಕಲಾಭಿಃ—ಹದಿನಾರುಪದಗಳಿಂದ, ಕಜಂ—ಪದ್ಮವನ್ನೂ, ದ್ವಾಭ್ಯಾಂ—ಪದ್ಮದ ಹೊರಗೆ ಎರಡುಪದಗಳಿಂದ, ಗಾತ್ರಕವೀಥಿಕೇ—ಪೀಠವನ್ನೂ, ಪಂಕ್ತಿಯನ್ನೂ, ಶ್ರುತಿಪದೈಃ—ನಾಲ್ಕುಪದಗಳಿಂದ, ವಿದ್ಯೇಶ್ವರಾದ್ಯಾವೃತೀಃ—ಅನಂತೇಶ್ವರನೇ ಮೊದಲಾದವರಿಗೆ ಆವರಣವನ್ನೂ, ತತ್ರ-ಆ ವಿದ್ಯೇಶ್ವರಾದಿಗಳಲ್ಲಿ, ಅಬ್ಜೋತ್ಪಲಸ್ವಸ್ತಿಕಾನಿ—ಕಮಲ-ನೈದಿಲೆ-ಇವುಗಳ ಸ್ವಸ್ತಿಕಾಕಾರಗಳನ್ನೂ, ತಥಾ—ಹಾಗೆಯೇ, ವಜ್ರಾದಿಕ್ಲೃಪ್ತೀಃ—ವಜ್ರ ಮೊದಲಾದ ಆಯುಧಗಳ ಸ್ವಸ್ತಿಕಾಕಾರ ರಚನೆಗಳನ್ನೂ, ಬಹಿಃ-ಹೊರಭಾಗದಲ್ಲಿ, ಪದ್ಮಸಮಂ ದ್ವಾರಂ—ಪದ್ಮಕ್ಕೆ ಸರಿಯಾದ ದ್ವಾರವನ್ನೂ, ಪಾರ್ಶ್ವಯೋಃ—ದ್ವಾರದ ಎರಡು ಪಕ್ಕಗಳಲ್ಲಿಯೂ, ಏಕೈಕತಃ—ಒಂದೊಂದು ಪದದಲ್ಲಿ, ಕಪೋಲಗಲಕಾದಿ—ಪಾರ್ಶ್ವವನ್ನೂ, ಕಂಠವನ್ನೂ, ಉಪಕಂಠವನ್ನೂ, ಶಿಷ್ಟೈಃ—ಉಳಿದಿರುವ ಪದಗಳಿಂದ, ಕೋಣಂ ಚ—ನಾಲ್ಕು ಮೂಲೆಗಳನ್ನೂ, (ಕೃತ್ವಾ)—ಮಾಡಿ, ಮಧ್ಯಂ—ಮಧ್ಯದಲ್ಲಿರುವ ಪದವನ್ನು, ಇಂದುಭಚ್ಛದವೃತಂ—ಬಿಳುಪಾದ ದಳಗಳಿಂದ ಆವರಿಸಲ್ಪಟ್ಟುದಾಗಿಯೂ. ಪೀತಂ—ಕರ್ಣಿಕೆಯಲ್ಲಿ ಹೊಂಬಣ್ಣವುಳ್ಳುದಾಗಿಯೂ, ಶಶಿರಕ್ತಸ್ವರ್ಣಭಕೇಸರಂ— ತುದಿಯಲ್ಲಿ ಬಿಳುಪಾಗಿಯೂ-ಮಧ್ಯದಲ್ಲಿ ಕೆಂಪಾಗಿಯೂ-ಬುಡದಲ್ಲಿ ಹೊಂಬಣ್ಣವಾಗಿಯೂ ಇರುವ ಕೇಸರಗಳುಳ್ಳುದಾಗಿಯೂ, ಹರಿತಭಂ ಚ—ದಳಗಳ ಒಳಭಾಗದಲ್ಲಿ ಹಸರುಬಣ್ಣವುಳ್ಳುದಾಗಿಯೂ, ಕೃತ್ವಾ—ಮಾಡಿ, ಕೋಣಾನ್—ಮೂಲೆಗಳಲ್ಲಿರುವ ಪದಗಳನ್ನು, ಧರ್ಮಾದಿಭಾನ್—ಧರ್ಮ-ಜ್ಞಾನ-ವೈರಾಗ್ಯ-ಐಶ್ವರ್ಯ-ಇವುಗಳ ಬಣ್ಣವಾದ ಬಿಳುಪು-ಕೆಂಪು-ಹೊಂಬಣ್ಣ-ಕಪ್ಪು ಈ ಬಣ್ಣಗಳುಳ್ಳುವುಗಳಾಗಿಯೂ, ಗಾತ್ರಕಂ—ಪೀಠವನ್ನು, ಚಿತ್ರಂ—ನಾನಾಬಣ್ಣವುಳ್ಳುದಾಗಿಯೂ, ಇಂದುವೀಥಿ—ವೀಥಿಯನ್ನು ಬಿಳುಪಾಗಿಯೂ, ಪದ್ಮಂ—ಹೊರಗಿನ ವ್ಯೂಹದಲ್ಲಿರುವ ಕಮಲವನ್ನು, ಸಿತಂ—ಬಿಳುಪಾಗಿಯೂ, ಉತ್ಪಲಂ

—ನೈದಿಲೆಯನ್ನು, ಪಾಂಡು—ಬಿಳುಪಾಗಿಯೂ, ಸ್ವಸ್ತಿಕಂ—ಸ್ವಸ್ತಿಕವನ್ನು ರಕ್ತಂ—ಕೆಂಪಾಗಿಯೂ, ಅಸ್ತ್ರಕಾಣಿ—ದ್ವಾರದಲ್ಲಿರುವ ಪಾಶುಪತವೇ ಮೊದಲಾದ ಅಸ್ತ್ರಗಳನ್ನು, (ಪೀತಾನಿ)—ಹೊಂಬಣ್ಣವುಳ್ಳವುಗಳಾಗಿಯೂ, ದ್ವಾರಂ—ನಾಲ್ಕು ಪಾರ್ಶ್ವಗಳಲ್ಲಿರುವ ಪ್ರತಿಯೊಂದು ದ್ವಾರವನ್ನು, ಮುಖಭಂ ಚ—ತತ್ಪುರುಷ ಮೊದಲಾದ ಮುಖಗಳ ಬಣ್ಣವುಳ್ಳದಾಗಿಯೂ, (ಕೃತ್ವಾ)—ಮಾಡಿ, (ನಿರ್ಮಿತಂ)—ಹೀಗೆ ಏರ್ಪಡಿಸಲ್ಪಟ್ಟ, (ಇದಂ)—ಈ ಮಂಡಲವು, ಪುರಂ—ಪುರಾಕಾರವಾದ ಪದ್ಮಮಂಡಲವೆಂದು, ಕೈರಣಂ—ಕಿರಣಾಗಮದಲ್ಲಿ ಉಕ್ತವಾಗಿರುವುದು. ||೮೪||೮೫||

**ಅವತರಣಿಕೆ**— ಮೃಗೇಂದ್ರಾಗಮದಲ್ಲಿ ಉಕ್ತವಾಗಿರುವ ಪುರಾಕಾರ ಮಂಡಲಕ್ಕೆ ಲಕ್ಷಣವನ್ನು ಎಂಬತ್ತಾರು ಮತ್ತು ಎಂಬತ್ತೇಳನೆಯ ಪದ್ಯಗಳಲ್ಲಿ ತೋರಿಸುತ್ತಾರೆ.—

**ಕ್ಷೇತ್ರೇ ಷಣ್ಣವತೀಕೃತೇ ಸ್ವರಪದೈರ್ಮಧ್ಯೇಽಂಬುಜಂ ಬಾಹ್ಯತೋ**
**ರೇಖಾ ಗಾತ್ರಕವೀಥಿಕೇಽಷ್ಟಭಿರಥೋದಿಕ್ಪಂಕಜಾನ್ಯಷ್ಟಭಿಃ ।**
**ದ್ವಾರಾಣ್ಯಷ್ಟ ಕಜಾಂತರಸ್ಥಿತಪದೈಸ್ಸಾಂಗಾ ಹ್ಯಥೋ ವೀಥಿಕಾ**
**ವೇದ್ಯೈಶ್ಚಾಥ ಕಜಾನಿ ದಿಕ್ಷು ಮುನಿಭಿರ್ದ್ವಾರಾಣಿ ಚಾಭ್ಯಂತರೈಃ ||೮೬||**

**ವೀಥೀ ಪೂರ್ವವದಷ್ಟದಿಕ್ಷು ಕಮಲಂ ಸಪ್ತಾಂಶಕೈರಂತರೈ**
**ರ್ದ್ವಾರಾಣ್ಯಷ್ಟಪದೈಃ ಸ್ಥಿತೈರಪಿ ಬಹಿಸ್ಸ್ಯಾಲ್ಲೋಕಪಾಲಾರ್ಚನಂ ।**
**ದ್ವಾಭ್ಯಾಂ ಸ್ವಸ್ತಿಕಮಷ್ಟದಿಕ್ಷು ಯದಿ ವಾ ಬಿಂದೂತ್ಪಲಂ ಚಾಂತರೈ**
**ರ್ದ್ವಾರಾಣೀಶಪಲಾಶದಿಗ್ವಿಥಿಹರಿಸ್ಥಾನಂ ಮೃಗೇಂದ್ರೇ ಪುರಂ ||೮೭||**

**ಟೀಕೆ**— ಕ್ಷೇತ್ರೇಷಣ್ಣವತೀಕೃತೇ—ತೊಂಬತ್ತಾರು ಭಾಗವಾಗಿ ಮಾಡಲ್ಪಟ್ಟ ಚತುಷ್ಕೋಣಕ್ಷೇತ್ರದಲ್ಲಿ, ಮಧ್ಯೇ—ಮಧ್ಯಭಾಗದಲ್ಲಿ, ಸ್ವರಪದೈಃ—ಹದಿನಾರುಪದಗಳಿಂದ ಅಂಬುಜಂ—ಕಮಲವು,(ಸ್ಯಾತ್)—ಇರಬೇಕು. ಬಾಹ್ಯತಃ—ಅದರ ಹೊರಭಾಗದಲ್ಲಿ, ಅಷ್ಟಭಿಃ—ಎಂಟುಪದಗಳಿಂದ, (ಸಮಂತಾತ್)—ನಾಲ್ಕುಪಾರ್ಶ್ವಗಳಲ್ಲಿಯೂ, ರೇಖಾಃ—ಬಿಳುಪು ಮೊದಲಾದ ರೇಖೆಗಳನ್ನೂ, ಗಾತ್ರಕವೀಥಿಕೇ—ಪೀಠವನ್ನೂ ಬೀದಿಯನ್ನೂ, (ಕುರ್ಯಾತ್)—ಮಾಡಬೇಕು. ಅಥೋ—ಅನಂತರದಲ್ಲಿ, ಅಷ್ಟಭಿಃ—ಎಂಟೆಂಟು ಅರವತ್ತುನಾಲ್ಕು ಪದಗಳಿಂದ, ದಿಕ್ಪಂಕಜಾನಿ—ಎಂಟುದಿಕ್ಕುಗಳಲ್ಲಿಯೂ ಕಮಲಗಳನ್ನು, (ಕುರ್ಯಾತ್)—ಮಾಡ

ಬೇಕು. ಕಜಾಂತರಸ್ಥಿತಪದೈಃ—ಕಮಲಗಳ ಮಧ್ಯದಲ್ಲಿರುವ ಹದಿನಾರುಪದಗಳಿಂದ, ಅಷ್ಟ ದ್ವಾರಾಣಿ—ಒಂದೊಂದು ಪಾರ್ಶ್ವಕ್ಕೆ ಎರಡೆರಡರಂತೆ ನಾಲ್ಕುಪಕ್ಕಗಳಲ್ಲಿಯೂ ಸೇರಿ ಎಂಟು ದ್ವಾರಗಳನ್ನು,(ಕುರ್ಯಾತ್)—ಮಾಡಬೇಕು. ಅಥೋ—ಅನಂತರದಲ್ಲಿ, ವೇದೈಃ—ನಾಲ್ಕುಪದಗಳಿಂದ, ಸಾಂಗಾ—ಶುಕ್ಲಾದಿರೇಖೆಗಳೊಡನೆಯೂ ಪೀಠದೊಡನೆಯೂ ಕೂಡಿದ, ವೀಥಿಕಾ (ಸ್ಯಾತ್)—ಬೀದಿಯು ಇರಬೇಕು. ಅಥ—ಅನಂತರದಲ್ಲಿ, ದಿಕ್ಷು—ಎಂಟುದಿಕ್ಕುಗಳಲ್ಲಿಯೂ, ಮುನಿಭಿಃ—ಏಳೇಳು-ನಲವತ್ತೊಂಬತ್ತು ಪದಗಳಿಂದ, ಕಜಾನಿ (ಸ್ಯುಃ)—ಕಮಲಗಳಿರಬೇಕು. ಅಭ್ಯಂತರೈಃ—ಕಮಲಗಳ ಮಧ್ಯದಲ್ಲಿರುವ ಪದಗಳಿಂದ, ದ್ವಾರಾಣಿ (ಸ್ಯುಃ)—ಎಂಟುದ್ವಾರಗಳಿರಬೇಕು. ವೀಥೀ-ಪೂರ್ವವತ್—ಬೀದಿಯು ಮೊದಲಿನಂತೆಯೇ ನಾಲ್ಕುಪದಗಳುಳ್ಳುದಾಗಿರಬೇಕು. ಸಪ್ತಾಂಶಕೈಃ—ಏಳೇಳುಪದಗಳಿಂದ, ಅಷ್ಟ ದಿಕ್ಷು—ಎಂಟುದಿಕ್ಕುಗಳಲ್ಲಿಯೂ, ಕಮಲಂ (ಸ್ಯಾತ್)—ಎಂಟುಕಮಲಗಳಿರಬೇಕು. ಅಂತರೈಃ—ಕಮಲಗಳ ಮಧ್ಯದಲ್ಲಿರುವ ಪದಗಳಿಂದ, ದ್ವಾರಾಣಿ (ಸ್ಯುಃ) —ಎಂಟುದ್ವಾರಗಳಿರಬೇಕು. ಬಹಿಃ—ಅವುಗಳ ಹೊರಗಡೆಯಲ್ಲಿ, ಸ್ಥಿತೈಃ—ಇರುವ, ಅಷ್ಟಪದೈಃ—ಎಂಟುಪದಗಳಿಂದ, ಲೋಕಪಾಲಾರ್ಚನಂ—ಇಂದ್ರಾದಿ ದಿಕ್ಪಾಲಕರ ಮತ್ತು ವಜ್ರಾಯುಧಗಳ ಪೂಜೆಯು, ಸ್ಯಾತ್—ಆಗಬೇಕು. ದ್ವಾಭ್ಯಾಂ—ಅದರ ಹೊರಗಡೆಯಲ್ಲಿ ಎರಡುಪದಗಳಿಂದ, ಅಷ್ಟದಿಕ್ಷು—ಎಂಟುದಿಕ್ಕುಗಳಲ್ಲಿ, ಸ್ವಸ್ತಿಕಂ (ಸ್ಯಾತ್)—ಸ್ವಸ್ತಿಕವಿರಬೇಕು. ಯದಿವಾ-ಬಿಂದೂತ್ಪಲಂ—ಬಿಂದುವಾಗಲಿ, ಉತ್ಪಲಸ್ವರೂಪವಾಗಲಿ ಇರಬೇಕು. ಸ್ವಸ್ತಿಕಕ್ಕೆ ಹೊರಗಡೆಯಲ್ಲಿರುವ ಪದಗಳೊಡನೆ ಸೇರಿಸಿ ಒಳಗಿರುವ ನಾಲ್ಕುಪದಗಳಿಂದ, ದ್ವಾರಾಣಿ (ಸ್ಯುಃ) ಎಂಟು ದ್ವಾರಗಳಿರಬೇಕು. ಈಶಪಲಾಶದಿಕ್—ಈಶಾನಕೋಣವೂ ನಿರ್ಋತಿಕೋಣವೂ, ವಿಧಿಹರಿಸ್ಥಾನಂ—ಕ್ರಮವಾಗಿ ಬ್ರಹ್ಮನಿಗೂ ವಿಷ್ಣುವಿಗೂ ಸ್ಥಾನವಾಗಿರಬೇಕು. (ಇದಂ)—ಹೀಗೆ ನಿರ್ಮಿಸಿದ ಈ ಮಂಡಲವು, ಮೃಗೇಂದ್ರೇ—ಮೃಗೇಂದ್ರಾಗಮದಲ್ಲ (ಉಕ್ತವಾಗಿರುವ), ಪುರಂ—ಪುರಾಕಾರಮಂಡಲವಾಗುವುದು.

**ಅವತರಣಿಕೆ**— ಗೌರೀಲತಾಕಾರಲಿಂಗವೆಂಬ ಮಂಡಲವಿಶೇಷದ ಲಕ್ಷಣವನ್ನು ಎಂಬತ್ತೆಂಟನೆಯ ಶ್ಲೋಕದಲ್ಲಿ ಹೇಳುತ್ತಾರೆ.—

**ಸೂತ್ರೈಸ್ಸಪ್ತದಶಾತ್ಮಕೈರುಭಯತೋ ಗೌರೀಲತಾ ಸಾಹ್ವಯಂ**
**ಮಧ್ಯೇ ವೇದಪದೈರ್ವಿದಿಕ್ಷು ಷಪದೈರ್ಭೂತಾಂಬುಜಾನಿ ನ್ಯಸೇತ್ ।**

**ಲಿಂಗಂ ಪಟ್ಟಿಸರೋಜಕಂಠಕಮಲಂ ಪೀಠಂ ಕ್ರಮಾದ್ದಿಕ್ಪದೈಃ**
**ವರ್ಷಾಭೂರಿವಿಷೈಶ್ಚ ಕೋಣಕಲಿತೈರ್ಭೂತೈಃ ಪದೈಸ್ಸ್ಯುರ್ಲತಾಃ||೮೮||**

**ಟೀಕೆ**— ಉಭಯತಃ—ಪೂರ್ವಪಶ್ಚಿಮವಾಗಿಯೂ, ದಕ್ಷಿಣೋತ್ತರವಾಗಿಯೂ, ಎರಡು ಪಾರ್ಶ್ವಗಳಲ್ಲಿಯೂ (ಹೊಡೆಯಲ್ಪಟ್ಟ), ಸಪ್ತದಶಾತ್ಮಕೈಃ ಸೂತ್ರೈಃ—ಹದಿನೇಳುದಾರಗಳಿಂದ, (ಷೋಡಶಪದೀಕೃತೇ ಕ್ಷೇತ್ರೇ)—ಹದಿನಾರುಪದಗಳುಳ್ಳುದಾಗಿ ಮಾಡಲ್ಪಟ್ಟ ಚತುಷ್ಕೋಣಕ್ಷೇತ್ರದಲ್ಲಿ, ಮಧ್ಯೇ—ಮಧ್ಯಭಾಗದಲ್ಲಿ, ವೇದಪದೈಃ—ನಾಲ್ಕುಪದಗಳಿಂದಲೂ, ವಿದಿಕ್ಷು—ಆಗ್ನೇಯಾದಿ ನಾಲ್ಕು ಕೋಣಗಳಲ್ಲಿ, ಘಪದೈಃ—ನಾಲ್ಕು ಪದಗಳಿಂದಲೂ, ಭೂತಾಂಬುಜಾನಿ—ಐದು ಕಮಲಗಳನ್ನು, ನ್ಯಸೇತ್—ಸ್ಥಾಪಿಸಬೇಕು. ವರ್ಷಾಭೂರಿವಿಷೈಃ—೪-೬-೪-೨-೪-೬-ಈ ಲೆಕ್ಕಗಳುಳ್ಳ, ದಿಕ್ಪದೈಃ—ನಾಲ್ಕುದಿಕ್ಕುಗಳಲ್ಲಿಯೂ ಇರುವ ಪದಗಳಿಂದ, ಕ್ರಮಾತ್—ಕ್ರಮವಾಗಿ, ಲಿಂಗಂ—ಲಿಂಗವನ್ನೂ, ಪಟ್ಟಿಸರೋಜಕಂಠಕಮಲಂ—ಪಟ್ಟಿಯನ್ನೂ, ಕಮಲವನ್ನೂ, ಕಂಠವನ್ನೂ, ಕಮಲವನ್ನೂ, ಪೀಠಂ ಚ—ಪೀಠವನ್ನೂ, ನ್ಯಸೇತ್—ಸ್ಥಾಪಿಸಬೇಕು. ಕೋಣಕಲಿತೈಃ—ನಾಲ್ಕುಮೂಲೆಗಳಲ್ಲಿರುವ, ಭೂತೈಃ ಪದೈಃ—ಐದುಪದಗಳಿಂದ, ಲತಾಃ ಸ್ಯುಃ—ಲತಾಕಾರಗಳಿರಬೇಕು. (ಇದಂ)—ಹೀಗೆ ರಚಿಸಿದ ಮಂಡಲವು, ಗೌರೀಲತಾಸಾಹ್ವಯಂ—ಗೌರೀಲತಾಕಾರಲಿಂಗವೆಂಬ ಹೆಸರುಳ್ಳ ಮಂಡಲವಾಗಿ, (ಸ್ಯಾತ್)—ಆಗುವುದು. ||೮೮||

**ಅವತರಣಿಕೆ**— ಸುಭದ್ರವೆಂಬ ಮಂಡಲವಿಶೇಷದ ಲಕ್ಷಣವನ್ನು ಎಂಬತ್ತೊಂಬತ್ತನೆಯ ಶ್ಲೋಕದಲ್ಲಿ ಹೇಳುತ್ತಾರೆ.—

**ಕ್ಷೇತ್ರೇ ರುದ್ರಪದೀಕೃತೇ ಗೃಹಪದೈರ್ಮಧ್ಯೇ ಸಿತಂ ಪಂಕಜಂ**
**ಕುರ್ಯಾತ್ ಕೋಣಚತುಷ್ಟಯೇಷ್ಟಿಪದಕೈಃ ಸ್ವರ್ಣಪ್ರಭಾಸ್ ಸ್ವಸ್ತಿಕಾನ್ ।**
**ದಿಕ್ಷ್ವಾದಿತ್ಯಪದೇಷ್ವಘೋ ಲಯಲಯೈರ್ಲಿಂಗಾನಿ ಪೀಠಾನಿ ತ**
**ಚ್ಛೇಷಂ ಭಿನ್ನರಜೋ ವಿಲೇಪ್ಯಮತುಲಂ ಭದ್ರಂ ಸುಪೂರ್ವಂಪುರಂ||೮೯||**

**ಟೀಕೆ**— ರುದ್ರಪದೀಕೃತೇ—ಪೂರ್ವಪಶ್ಚಿಮವಾಗಿಯೂ, ದಕ್ಷಿಣೋತ್ತರವಾಗಿಯೂ ಹನ್ನೆರಡು ದಾರಗಳನ್ನು ಹೊಡೆದು ಹನ್ನೊಂದು ಪದಗಳುಳ್ಳುದಾಗಿ ಮಾಡಲ್ಪಟ್ಟ, ಕ್ಷೇತ್ರೇ—ಚತುಷ್ಕೋಣಕ್ಷೇತ್ರದಲ್ಲಿ, ಮಧ್ಯೇ—ಮಧ್ಯಭಾಗದಲ್ಲಿ, ಗೃಹಪದೈಃ—ಒಂಬತ್ತು ಪದಗಳಿಂದ, ಸಿತಂಪಂಕಜಂ—ಬಿಳುಪಾದ ಕಮಲವನ್ನು, ಕುರ್ಯಾತ್—ಮಾಡಬೇಕು. ಕೋಣಚತುಷ್ಟಯೇಷ್ಟಿಪದಕೈಃ—ನಾಲ್ಕು

ಮೂಲೆಗಳಲ್ಲಿಯೂ ಹದಿನಾರು ಹದಿನಾರು ಪದಗಳಿಂದ, ಸ್ವರ್ಣಪ್ರಭಾಃ— ಹೊಂಬಣ್ಣವುಳ್ಳ, ಸ್ವಸ್ತಿಕಾಃ—ಸ್ವಸ್ತಿಕಾಕಾರಗಳನ್ನು, ಕುರ್ಯಾತ್—ಮಾಡ ಬೇಕು. ಅಥೋ—ಅನಂತರದಲ್ಲಿ, ದಿಕ್ಷು— ನಾಲ್ಕುದಿಕ್ಕುಗಳಲ್ಲಿಯೂ, ಆದಿತ್ಯ ಪದೇಷು—ಹನ್ನೆರಡುಪದಗಳಲ್ಲಿ, ಲಯಲಯೈಃ—೩—೧—೩—೧ ಈ ಲೆಕ್ಕ ವುಳ್ಳ ಪದಗಳಿಂದ, ಪೀಠಾನಿ-ಲಿಂಗಾನಿ ಚ—ಕ್ರಮವಾಗಿ ಪೀಠಗಳನ್ನೂ ಲಿಂಗಗ ಳನ್ನೂ, ಕುರ್ಯಾತ್—ಮಾಡಬೇಕು. ತಚ್ಛೇಷಂ—ಅವಶಿಷ್ಟವಾದ ಪದವನ್ನು, ಭಿನ್ನರಜಃ—ಬೇರೆ ಬಣ್ಣವುಳ್ಳುದಾಗುವಂತೆ, ವಿಲೇಪ್ಯಂ—ಬಳಿಯಬೇಕು. (ಇದಂ)—ಹೀಗೆ ರಚಿಸುವ, ಈ ಮಂಡಲವು, ಅತುಲಂ—ಉಪಮಾನವಿಲ್ಲದ, ಸುಪೂರ್ವಂ ಭದ್ರಂ ಪುರಂ—ಸುಭದ್ರವೆಂಬ ಮಂಡಲವಾಗಿ ಸ್ಯಾತ್—ಆಗುವುದು.

**ಅವತರಣಿಕೆ**— ಉಮಾಕಾಂತವೆಂಬ ಮಂಡಲವಿಶೇಷದ ಲಕ್ಷಣವನ್ನು ತೊಂಬತ್ತನೆಯ ಶ್ಲೋಕದಲ್ಲಿ ಹೇಳುತ್ತಾರೆ.—

**ದ್ವಾತ್ರಿಂಶತ್ಪದಭಾಜಿತೇ ಚ ನಳಿನಂ ಮಧ್ಯೇ ಚತುಷ್ಷಷ್ಟಿಭಿ**
**ಸ್ತದ್ಬಾಹ್ಯೇ ತ್ರಿಪದೈಶ್ಚ ಪೀಠಮಥ ತತ್ರೈಕೇನ ವೀಥಿರ್ಹರಿತ್ ।**
**ದಿಕ್ಷು ದ್ವಾರಮೃಷಿದ್ವಯೈರುಭಯತೋ ವಾಚಾವರೈರ್ವರ್ಷಯುಕ್**
**ಗ್ಲಿಂಗಂ ಬಾಹ್ಯಪದೇನ ವೀಥಿರಿತರಚ್ಚಿತ್ರಂ ಹ್ಯುಮಾಕಾಂತಕಂ ॥೯೦॥**

**ಟೀಕೆ**— ದ್ವಾತ್ರಿಂಶತ್ಪದಭಾಜಿತೇ—ಪೂರ್ವಪಶ್ಚಿಮವಾಗಿಯೂ ದಕ್ಷಿ ಣೋತ್ತರವಾಗಿಯೂ ಮೂವತ್ತುಮೂರು ದಾರಗಳನ್ನು ಹೊಡೆದು ಮೂವತ್ತೆರಡು ಪದಗಳುಳ್ಳುದಾಗಿ ರಚಿಸಲ್ಪಟ್ಟ, ಕ್ಷೇತ್ರೇ—ಚತುಷ್ಕೋಣಕ್ಷೇತ್ರದಲ್ಲಿ, ಮಧ್ಯೇ— ಮಧ್ಯಭಾಗದಲ್ಲಿ, ಚತುಷ್ಷಷ್ಟಿಭಿಃ—ಅರವತ್ತುನಾಲ್ಕು ಪದಗಳಿಂದ, ನಳಿನಂ (ಸ್ಯಾತ್)—ಕಮಲವಿರಬೇಕು. ತದ್ಬಾಹ್ಯೇ—ಅದರ ಹೊರಭಾಗದಲ್ಲಿ, ಪೀಠಂ (ಸ್ಯಾತ್) —ನಾಲ್ಕು ಪಾರ್ಶ್ವಗಳಲ್ಲಿಯೂ ಗಾತ್ರದೊಡನೆ ಕೂಡಿದ ವೀಥೀಪೀಠವಿರ ಬೇಕು. ಅಥ— ಅನಂತರದಲ್ಲಿ, ತತ್ರ—ಆ ಪೀಠದ ಸಮೀಪದಲ್ಲಿ, ಏಕೇನ— ಒಂದು ಪದದಿಂದ, ಹರಿತ್-ವೀಥಿಃ-(ಸ್ಯಾತ್)—ಹಸರುಬಣ್ಣವುಳ್ಳ ಬೀದಿಯಿರ ಬೇಕು. ದಿಕ್ಷು—ಪೂರ್ವ ಮೊದಲಾದ ನಾಲ್ಕು ದಿಕ್ಕುಗಳಲ್ಲಿ, ಋಷಿದ್ವಯೈಃ— ಎರಡು ಪದಗಳ ಅಗಲವೂ ಏಳುಪದಗಳ ಉದ್ದವೂ ಉಳ್ಳ ಹದಿನಾಲ್ಕು ಪದಗ ಳಿಂದ, ದ್ವಾರಂ (ಸ್ಯಾತ್)—ನಾಲ್ಕು ಬಾಗಿಲುಗಳು ಇರಬೇಕು. ಉಭಯತಃ— ದ್ವಾರದ ಎರಡು ಪಾರ್ಶ್ವಗಳಲ್ಲಿಯೂ, ವಾಚಾವರೈರ್ವರ್ಷಯುಕ್—೪-೬-೪-೨- ೪-೬ ಎಂಬ ಈ ಪದಗಳ ಪ್ರಮಾಣವುಳ್ಳುದಾಗುವಂತೆ ಕ್ರಮವಾಗಿ ಮಾಡಲ್ಪಟ್ಟ

ಪೂರ್ವೋಕ್ತವಾದ ಲಿಂಗ-ಪಟ್ಟಿ-ಕಮಲ-ಕಂಠ-ಕಮಲ-ಪೀಠ-ಇವುಗಳೊಡನೆ ಕೂಡಿರುವ, ಲಿಂಗಂ (ಸ್ಯಾತ್)—ಲಿಂಗವಿರಬೇಕು. ಬಾಹ್ಯಪದೇನ—ಅದರ ಹೊರಗಡೆಯಲ್ಲಿ ಒಂದು ಪದದಿಂದ, ವೀಥಿಃ (ಸ್ಯಾತ್)—ಬೀದಿಯಿರಬೇಕು. ಇತರತ್—ಅವಶಿಷ್ಟವಾದ ಪದವೆಲ್ಲವೂ, ಚಿತ್ರಂ (ಸ್ಯಾತ್)—ನಾನಾಬಣ್ಣವುಳ್ಳುದಾಗಿರಬೇಕು. (ಇದಂ)—ಹೀಗೆ ರಚಿಸಿದ ಈ ಮಂಡಲವು, ಉಮಾಕಾಂತಕಂ—ಉಮಾಕಾಂತವೆಂಬ ಹೆಸರುಳ್ಳ ಮಂಡಲವಿಶೇಷವಾಗುವುದು. ||೯೦||

**ಅವತರಣಿಕೆ**— ಸ್ವಸ್ತಿಕವೆಂಬ ಹೆಸರುಳ್ಳ ಮಂಡಲವಿಶೇಷದ ಲಕ್ಷಣವನ್ನು ತೊಂಬತ್ತೊಂದನೆಯ ಶ್ಲೋಕದಲ್ಲಿ ಹೇಳುತ್ತಾರೆ.—

**ಸ್ಯಾತ್ಸ್ವಸ್ತಿಕಂ ಚೇಷ್ಟಿಪದೇಷು ಚೈಶಾತ್**
**ಕೋಣಾತ್ಸಮಾರಭ್ಯ ಪದತ್ರಯೇಷು ।**
**ಮಧ್ಯಸ್ಥಕೋಷ್ಠಾಂತಪದೇನ ವೇದ**
**ಕೋಷ್ಠಾರ್ವಿಲೋಪ್ಯಾನ್ಯಪದಾನಿ ಚೈವಂ ||೯೧||**

**ಟೀಕೆ**— ಇಷ್ಟಿಪದೇಷು—ಪೂರ್ವಪಶ್ಚಿಮವಾಗಿಯೂ ದಕ್ಷಿಣೋತ್ತರವಾಗಿಯೂ ಹದಿನೇಳು ದಾರಗಳನ್ನು ಹೊಡೆಯುವುದರಿಂದ ಏರ್ಪಡುವ ಹದಿನಾರು ಪದಗಳಲ್ಲಿ, ಐಶಾತ್ಕೋಣಾತ್ಸಮಾರಭ್ಯ—ಈಶಾನಮೂಲೆಯಿಂದ ಉಪಕ್ರಮಿಸಿ (ಪೂರ್ವಕ್ಕೆ), ಪದತ್ರಯೇಷು—ದಕ್ಷಿಣಾಭಿಮುಖವಾಗಿರುವ ಮೂರು ಪದಗಳಲ್ಲಿ, ಮಧ್ಯಸ್ಥಕೋಷ್ಠಾಂತಪದೇನ—ಮಧ್ಯದಲ್ಲಿರುವ ನಾಲ್ಕು ಪದಗಳೊಳಗೆ ಮೊದಲು ಹೇಳಿದ ಮೂರು ಪದಗಳನ್ನು ಪಕ್ಕದಲ್ಲಿರುವ ಒಂದು ಪದದೊಡನೆ ಸೇರಿಸಿ, ವೇದಕೋಷ್ಠಾನ್—ನಾಲ್ಕು ಪದಗಳನ್ನು, ವಿಲೋಪ್ಯ—ತೊಡೆದು (ಹೋಗಲಾಡಿಸಿ), ಅನ್ಯಪದಾನಿ ಚ—ಉಳಿದ ಮೂರು ಮೂಲೆಗಳಲ್ಲಿರುವ ಪದಗಳನ್ನೂ, ಏವಂ—ಹೀಗೆಯೇ ತೊಡೆದು ರಚಿಸಿದರೆ, ಸ್ವಸ್ತಿಕಂ ಸ್ಯಾತ್—ಸ್ವಸ್ತಿಕವೆಂಬ ಮಂಡಲವಾಗುವುದು. ||೯೧||

**ಅವತರಣಿಕೆ**— ಚಂಡೇಶ್ವರನ ಪೂಜಾನಿರ್ವಾಹಕ್ಕಾಗಿ ಕಿರಣಾಗಮದಲ್ಲಿ ಉಕ್ತವಾಗಿರುವ ಟಂಕವೆಂಬ ಹೆಸರನ್ನು ಪಡೆದಿರುವ ಅರ್ಧಚಂದ್ರಮಂಡಲದ ಲಕ್ಷಣವನ್ನು ತೊಂಬತ್ತೆರಡನೆಯ ಪದ್ಯದಲ್ಲಿ ಹೇಳುತ್ತಾರೆ.—

**ಕ್ಷೇತ್ರೇ ವೇದವಿಭಾಜಿತೇಽಧಿಕಮಿತಃ ಪ್ರಾಚೀಂದುಭಾಗಂ ನ್ಯಸೇತ್**
**ಮಧ್ಯೇ ಭಾಗಮಥ ತ್ಯಜನ್ನಧಿಪದೈರರ್ಧೇಂದುಮಂತರ್ಮುಖಂ ।**

**ಕೃತ್ವೋರ್ಧ್ವೇ ದ್ವಿಪದಂ ಗಳಂ ತು ಪರಿತಃ ಪಂಕ್ತಿಸ್ತು ಸೌಮ್ಯೇ ಪದಂ ವೃತ್ತಂ ತ್ರೀಣಿ ಯಮೇ ನ್ಯಸೇಚ್ಚ ಕಮಲಂ ಚಂಡಸ್ಯ ಟಂಕಂ ಮತಂ||೯೨||**

**ಟೀಕೆ=** ವೇದವಿಭಾಜಿತೇ—ಪೂರ್ವಪಶ್ಚಿಮವಾಗಿಯೂ, ದಕ್ಷಿಣೋತ್ತರವಾಗಿಯೂ ಐದು ದಾರಗಳನ್ನು ಹೊಡೆದು ನಾಲ್ಕುಪದಗಳುಳ್ಳದಾಗಿ ವಿಭಾಗಿಸಲ್ಪಟ್ಟ, ಕ್ಷೇತ್ರೇ—ಚತುಷ್ಕೋಣಭೂಮಿಯಲ್ಲಿ, ಇತೋಽಧಿಕಂ—ತಿರುಗಿಯೂ ಒಂದು ಪದ ಸಾಲು ಹೆಚ್ಚಾಗುವಂತೆ, ಪ್ರಾಚಿ—ಪೂರ್ವಭಾಗದಲ್ಲಿ, ಇಂದುಭಾಗಂ ನ್ಯಸೇತ್—ಒಂದುಭಾಗವನ್ನು ಇಡಬೇಕು. (ಸೇರಿಸಬೇಕು). ಅಥ—ಅನಂತರದಲ್ಲಿ, ಮಧ್ಯೇ ಭಾಗಂ—ಮಧ್ಯದಲ್ಲಿ ಎರಡುಪದಗಳ ಪರಿಮಾಣವನ್ನು, ತ್ಯಜನ್—ಬಿಡುತ್ತಿರುವವನಾಗಿ, ಅಧಿಪದೈಃ—ಹೆಚ್ಚಾದ ಪದಗಳೊಡನೆ, ಅಂತರ್ಮುಖಂ—ಒಳಮುಖವಾಗಿರುವ, ಅರ್ಧೇಂದುಂ—ಅರ್ಧಚಂದ್ರಮಂಡಲವನ್ನು, ಕೃತ್ವಾ—ಮಾಡಿ, ಊರ್ಧ್ವೇ ದ್ವಿಪದಂ—ಅದರಮೇಲೆ ಎರಡು ಪದಗಳನ್ನು, ಗಳಂ ಕೃತ್ವಾ—ಕಂಠವಾಗಿ ಮಾಡಿ, ಪರಿತಃ—ಹೊರಗೆ ಅಧಿಕಪದಗಳ ಹೊರಭಾಗದಲ್ಲಿ ನಾಲ್ಕುಪಾರ್ಶ್ವಗಳಲ್ಲಿಯೂ, ಪಂಕ್ತಿಃಕಾರ್ಯಾ—ಬೀದಿಯು ಮಾಡಲ್ಪಡತಕ್ಕುದು. ಸೌಮ್ಯೇ—ಅನಂತರದಲ್ಲಿ ಉತ್ತರಭಾಗದ ಮಧ್ಯದಲ್ಲಿರುವ ಒಂದು ಪದದಲ್ಲಿ, ವೃತ್ತಂಪದಂ—ವೃತ್ತಾಕಾರವಾದ ಪದವನ್ನು, ತ್ರೀಣಿ (ಕೃತ್ವಾ)—ಮೂರನ್ನು ಮಾಡಿ, ಯಮೇ—ದಕ್ಷಿಣಭಾಗದ ಒಂದುಪದದಲ್ಲಿ, ಕಮಲಂ ನ್ಯಸೇತ್—ಪದ್ಮಾಕಾರವನ್ನು ಮಾಡಬೇಕು. (ಇದಂ)—ಹೀಗೆ ರಚಿಸಿದ ಈ ಮಂಡಲವು, ಚಂಡಸ್ಯ—ಚಂಡೇಶ್ವರನ (ಪೂಜೆಗಾಗಿ) ಟಂಕಂ—ಟಂಕವೆಂಬ ಹೆಸರುಳ್ಳ ಅರ್ಧಚಂದ್ರಾಕಾರಮಂಡಲವೆಂದು. ಮತಂ—ಕಿರಣಾಗಮಸಂಮತವಾಗಿರುವುದು ||೯೨||

**ಅವತರಣಿಕೆ=** ತೊಂಬತ್ತುಮೂರನೆಯ ಶ್ಲೋಕದಿಂದ ಉಪಕ್ರಮಿಸಿ ತೊಂಬತ್ತೇಳನೆಯ ಶ್ಲೋಕಗಳ ವರೆಗೆ ಸಮಯವಿಶೇಷದೀಕ್ಷಾವಿಧಿಗಳನ್ನು ತೋರಿಸುತ್ತಾರೆ.—

**ಪ್ರತ್ಯಗ್ದ್ವಾರಕಮಂಡಲೇ ಕುಶಯುತೇ ಸಂಸ್ಥಾಪ್ಯ ಶಿಷ್ಯಂ ಪದಾ**
**ದೂರ್ಧ್ವಂ ಪ್ರೋಕ್ಷ್ಯ ಸುತಾಡ್ಯ ವೀಕ್ಷ್ಯ ಭಸಿತೈಃ ಕೇಽಭ್ಯುಕ್ಷ್ಯನಾಭೇರಧಃ।**
**ಉಲ್ಲಿಖ್ಯಾಸ್ತ್ರಕುಶೈಃ ಪರಂ ಚ ಹೃದಯೇ ಸಂಸ್ಪೃಶ್ಯ ಸಂಚಿಂತ್ಯ ತಂ**
**ಮಂತ್ರಂ ನ್ಯಸ್ಯ ಪಟಾಕ್ಷಿಬಂಧನಮಥೋ ಗೃಹ್ಯಾತ್ತಪುಷ್ಪೌ ಕರೌ ||೯೩||**

**ಗತ್ವಾ ದಕ್ಷಿಣತೋಽಗ್ರಸಂಸ್ಥಿತಿರಥೋ ದೃಗ್ಬಂಧಹಾನಿಶ್ಶಿವೇ**
**ಪುಷ್ಪಕ್ಷೇಪಮಥಾಣುನಾಮ ಚ ಪುರಸ್ಸಂವೇಶನಂ ತದ್ಧೃದಿ।**



ಆತ್ಮಸ್ಥಾಪನಮಂತ್ರಭೂತವಿಷಯಾ ಶುದ್ಧಿರ್ಮನೂನಾಂ ಸ್ಥಿತಿ
ಸ್ತತ್ಕೇ ತ್ರೀಶಕರಸ್ಥಿತಿಶ್ಶಿವಘಟಾವರ್ಚಾಪಯೇತ್ತಂಪುನಃ ||೯೪||

ಕುಂಡಾಗ್ನೇಯಕಮಂಡಲೇ ಸ್ಥಿತಿರಥೋ ದರ್ಭೇಣ ನಾಡೀಸ್ಥಿತಿ
ಹೋರ್ಮೋ ಮೂರ್ಧ್ನ್ಯಣುಭಿಸ್ಸಪಾತಹವನಂ ಮೂಲಾಹುತೀಸ್ಸೋಽಶತ
ಉಕ್ತಿಶ್ಶೈವಮನೋಽಶ್ಚ ನಿಷ್ಕೃತಿರಥೋ ವಾಗೀಶಪೂಜಾಗ್ನಿಗಾ
ಶಿಷ್ಯಪ್ರೋಕ್ಷಣತಾಡನಾಂತರಗತಿಶ್ಛಿದ್ಭೇದಗೋಽಧ್ವಾ ಹೃದಿ ||೯೫||

ಸ್ವಾತ್ಮಸ್ಥಾಪನರೇಚನೇ ಬಹಿರಿತೋ ವಾಗೀಶಿಗರ್ಭಸ್ಥಿತಿ
ರ್ಗರ್ಭಸ್ಥಾತ್ಮಕಪಾಪವೀಕ್ಷಣಹುತಂ ಬೀಜಾಶಯಾಹಾರತಃ ।
ಯೋನೇಸ್ತದ್ಭವದೇಹತೋಽಪಿ ಹವನಂ ರುದ್ರಾಂಶಹೋಮಸ್ತತೋ
ಜಾತೀಶಾಣುಗಯಜ್ಞಸೂತ್ರಧರಣಂ ಮೂಲಾಹುತೀನಾಂ ಶತಂ ||೯೬||

ಬ್ರಹ್ಮಾಂಗಾಹುತಿಪಂಚಸಂಸ್ಕೃತಿಹುತೇ ಪೂರ್ವಾತ್ಮಯೋಗಶ್ಶಿಶೋ
ರ್ವಾಗೀಶ್ಯಾದಿವಿಸೃಷ್ಟಿಪೂರ್ತಿಹವನಂ ಪುಷ್ಪಸ್ಯ ವಿಕ್ಷೇಪಣಂ ||
ವಹ್ನ್ಯಾದೌ ಸಮಯಶ್ರುತಿಶ್ಚ ಸಮಯಾದ್ಯಾಚಾರಶುದ್ಧೌ ಹುತಂ
ಬಾಲಾದಾವಿತರಶ್ಶಿವಾರ್ಚನಶಿವಜ್ಞಾನಾದಿಯೋಗ್ಯೋ ಭವೇತ್ ||೯೭||

**ಟೀಕೆ**= ಪ್ರತ್ಯಗ್ದ್ವಾರಕಮಂಡಲೇ—ಮಂಟಪದ ಪಶ್ಚಿಮದ್ವಾರದ ಹೊರಗಡೆಯಲ್ಲಿ ಮಂಟಪಾಭಿಮುಖವಾಗಿ ಗೋಮಯದಿಂದ ಅಸ್ತ್ರಮಂತ್ರದಿಂದ ಚಚ್ಚೌಕವಾಗಿ ಸಾರಿಸಲ್ಪಟ್ಟ ಮಂಡಲದಲ್ಲಿ, ಕುಶಯುತೇ—ಶಿಷ್ಯನ ಮುಖಕ್ಕೆ ಅನುಕೂಲವಾಗಿ ಅಥವಾ ಪೂರ್ವಾಗ್ರವಾಗಿ ಹಾಕಲ್ಪಟ್ಟ ದರ್ಭಪುಷ್ಪಾಕ್ಷತೆಗಳೊ ಡನೆ ಕೂಡಿದ ಪ್ರಣವಾಸನದಲ್ಲಿ, ಶಿಷ್ಯಂಸಂಸ್ಥಾಪ್ಯ—ಶಿಷ್ಯನನ್ನು ನಿಲ್ಲಿಸಿ, (೧) ಪದಾದೂರ್ಧ್ವಂ—ಪಾದದಿಂದ ಹಿಡಿದು ಶಿರಸ್ಸಿನವರೆಗೆ, ಪ್ರೋಕ್ಷ್ಯ—ಪ್ರೋಕ್ಷಿಸಿ, (೨) ಸುತಾಡ್ಯ—ಅಸ್ತ್ರಮಂತ್ರವನ್ನುಚ್ಚರಿಸುತ್ತ ಭಸ್ಮದಿಂದ ಹೃದಯದಲ್ಲಿ ತಾಡನಮಾಡಿ, (೩) ವೀಕ್ಷ್ಯ—ಪ್ರಾಸಾದಮಂತ್ರವನ್ನುಚ್ಚರಿಸುತ್ತ ದಿವ್ಯದೃಷ್ಟಿ ಯಿಂದ ನೋಡಿ, (೪) ಭಸಿತೈಃ—ವಿಭೂತಿಗಳಿಂದ, ಕೇ—ಶಿರಸ್ಸಿನಲ್ಲಿ, ಅಭ್ಯು ಕ್ಷ್ಯ—ಭಸ್ಮಸ್ನಾನಸಿದ್ಧಿಗಾಗಿ ಅಸ್ತ್ರಮಂತ್ರದಿಂದ ಪ್ರೋಕ್ಷಿಸಿ, (೫) ಹೀಗೆ ಸ್ಥಾಪನ-ಪ್ರೋಕ್ಷಣ-ತಾಡನ-ನಿರೀಕ್ಷಣ-ಅಭ್ಯುಕ್ಷಣ ಎಂಬ ಐದು ಸಂಸ್ಕಾರಗಳನ್ನು ಕ್ರಮವಾಗಿ ಮಾಡಬೇಕೆಂದು ಅಭಿಪ್ರಾಯವು. ನಾಭೇರಧಃ—ಅನಂತರದಲ್ಲಿ ನಾಭಿಸ್ಥಾನ ಮೊದಲುಗೊಂಡು ಪಾದದವರೆಗೆ, ಅಸ್ತ್ರಕುಶೈಃ—ಅಸ್ತ್ರಮಂತ್ರದಿಂದ

ಅಭಿಮಂತ್ರಿಸಲ್ಪಟ್ಟ ದರ್ಭೆಗಳಿಂದ, ಉಲ್ಲಿಖ್ಯ—ಅಘಮರ್ಷಣಸ್ನಾನಕ್ಕಾಗಿ ಮೂರು ಸಾರೆ ಉಲ್ಲೇಖನವನ್ನು ಮಾಡಿ, (೭) ಪರಂ ಚ—ಇದರಂತೆಯೇ ಮುಂದಿನ ಕೆಲಸವನ್ನೂ ನಡೆಯಿಸಿ ಎಂದರೆ—ನಾಭಿಯಿಂದ ಹಿಡಿದು ಶಿರಸ್ಸಿನವರೆಗೆ ಅಸ್ತ್ರಮಂತ್ರದಿಂದ ಅದೇ ದರ್ಭೆಗಳಿಂದ ಮಾರ್ಜನಕ್ಕಾಗಿ ಮೂರು ಸಾರೆ ಉಲ್ಲೇಖನವನ್ನು ಮಾಡಿ, (೭) ಹೃದಯೇ—ಹೃದಯಪ್ರದೇಶದಲ್ಲಿ, ಸಂಸ್ಪೃಶ್ಯ—ಅಸ್ತ್ರಮಂತ್ರವನ್ನು ಉಚ್ಚರಿಸುತ್ತ ಚನ್ನಾಗಿ ಸ್ಪರ್ಶಿಸಿ, (೮) ಸಂಚಿಂತ್ಯ—ಅಲ್ಲಿಯೇ ಮೂರ್ತಿಮಂತ್ರದಿಂದ ಆತ್ಮಸ್ವರೂಪವನ್ನು ಧ್ಯಾನಿಸಿ, (೯) ತಂ—ಆ ಶಿಷ್ಯನನ್ನು ಉದ್ದೇಶಿಸಿ, ಮಂತ್ರಂ ನ್ಯಸ್ಯ—ಸಂಹಿತಾಮಂತ್ರನ್ಯಾಸವನ್ನು ಮಾಡಿ, (೧೦) ಪಟಾಕ್ಷಿಬಂಧನಂ-(ಕೃತ್ವಾ)—ಅಸ್ತ್ರದಿಂದ ಪ್ರೋಕ್ಷಿಸಿ, ಕವಚದಿಂದ ಅವಕುಂಠನಮಾಡಿ, ಮೂಲದಿಂದ ಅಭಿಮಂತ್ರಿಸಲ್ಪಟ್ಟ ಬಿಳೀಬಟ್ಟೆಯಿಂದ ಪಾಪಿಗಳನ್ನು ನೋಡದಿರುವುದಕ್ಕಾಗಿ ನೇತ್ರಮಂತ್ರವನ್ನುಚ್ಚರಿಸುತ್ತ ಕಣ್ಣುಗಳನ್ನು ಕಟ್ಟಿ, (೧೧) ಆತ್ತಪುಷ್ಪೌ—ಅಂಜಲಿಯಲ್ಲಿ ಪುಷ್ಪಗಳನ್ನು ಪಡೆದಿರುವ, ಕರೌ—ಕೈಗಳನ್ನು, ಗೃಹ್ಯ—ಹಿಡಿದು (ಕರೆದುಕೊಂಡು ಬಂದು) (೧೨) ||೯೩||

**ಟೀಕೆ**= ದಕ್ಷಿಣತೋ ಗತ್ವಾ—ಮಂಟಪವನ್ನು ಪ್ರದಕ್ಷಿಣವಾಗಿ ಸುತ್ತಿ, (೧೩) (ಅಂತಃ ಪ್ರವಿಶ್ಯ)—ಒಳಗೆ ಪ್ರವೇಶಿಸಿ, (೧೪) ಅಗ್ರಸಂಸ್ಥಿತಿಃ—ಸ್ವಾಮಿಗೆ ಎದುರಾಗಿ ನಿಲ್ಲುವಿಕೆಯೂ, (೧೫) ಅಥೋ—ಅನಂತರದಲ್ಲಿ, ದೃಗ್ಬಂಧಹಾನಿಃ—ಕಣ್ಣುಕಟ್ಟಿನ ವಿಮೋಚನವೂ, (೧೬) ಅಥ—ಅನಂತರದಲ್ಲಿ, ಶಿವೇ—ಶಿವನ ಸಮೀಪದಲ್ಲಿ, ಪುಷ್ಪಕ್ಷೇಪಂ—ಪುಷ್ಪಸಮರ್ಪಣೆಯೂ, (೧೭) ಅಥ—ಅನಂತರದಲ್ಲಿ, ಅಣುನಾಮ—ಈಶಾನಾದಿಮಂತ್ರಗಳಿಂದ ಬ್ರಾಹ್ಮಣಾದಿವರ್ಣಕ್ರಮವಾಗಿ ಶಿವದೇವಗಣಾಂತವಾದ ನಾಮಧೇಯವನ್ನಿಟ್ಟು, (೧೮) ಪುರಃ—ಎದುರುಗಡೆಯಲ್ಲಿ ಸ್ವಾಮಿಯ ದಕ್ಷಿಣಪಾರ್ಶ್ವದ ಪ್ರಣವಾಸನದಲ್ಲಿ, ಸಂವೇಶನಂ—ಶಿಷ್ಯನನ್ನು ಕುಳ್ಳಿರಿಸುವಿಕೆಯೂ, (೧೯) ತದ್ಧೃದಿ—ಅಸ್ತ್ರಮಂತ್ರೋಚ್ಚಾರಣಪೂರ್ವಕವಾಗಿ ತಾಡಿಸಲ್ಪಟ್ಟ ಶಿಷ್ಯನ ಹೃದಯಪ್ರದೇಶದಲ್ಲಿ, ಆತ್ಮಸ್ಥಾಪನಂ—ಕಮಲಕರ್ಣಿಕೆಯಲ್ಲಿ ಆತ್ಮಮಂತ್ರವನ್ನುಚ್ಚರಿಸುತ್ತ ಸಂಹಾರಮುದ್ರೆಯಿಂದ ಶಿಷ್ಯನ ಚೈತನ್ಯವನ್ನು ನಿರೋಧಿಸಿ ರಕ್ಷಿಸುವಿಕೆಯೂ, (೨೦) ಮಂತ್ರಭೂತವಿಷಯಾಶುದ್ಧಿಃ—ನಿವೃತ್ತ್ಯಾದಿಮಂತ್ರಗಳಿಂದ ಭೂತಶುದ್ಧಿಮಾಡುವಿಕೆಯೂ, (ಇದೇ ಆಪ್ಲಾವನವು) (೨೧) ಮನೂನಾಂ ಸ್ಥಿತಿಃ—ಮಂತ್ರಗಳ ನ್ಯಾಸವನ್ನು ಮಾಡುವಿಕೆಯೂ, (ಇದೇ ಸಕಲೀಕರಣವು) (೨೨) ತತ್ಕೇ—ಶಿಷ್ಯನ ಶಿರಸ್ಸಿನಲ್ಲಿ,

ಈಶಕರಸ್ಥಿತಿಃ—ಶಿವಹಸ್ತಸ್ಥಾಪನವೂ, (ಗುರುವು ತನ್ನ ಬಲಗೈಯನ್ನು ತೇಜೋರೂಪವಾಗಿ ಧ್ಯಾನಿಸುವುದರಮೂಲಕ ಶಿವಹಸ್ತವಾಗಿ ಭಾವಿಸಿ, ಮೂಲಮಂತ್ರವನ್ನು ಲಯಾಂತವಾಗಿ ಉಚ್ಚರಿಸಿ ಪಾಶಸಮೂಹವು ನೀಗಿದಂತೆ ಧ್ಯಾನಿಸಿ ಶಿಷ್ಯನ ಶಿರಸ್ಸಿನಲ್ಲಿ ಇಡುವಿಕೆಯೇ ಶಿವಹಸ್ತಸ್ಥಾಪನವಾಗುವುದು.) (೨೩) ಪುನಃ—ತಿರುಗಿಯೂ, ತಂ—ಆ ಶಿಷ್ಯನನ್ನು, ಶಿವಘಟೌ—ಮಂಡಲದಲ್ಲಿಯೂ ಕುಂಭದಲ್ಲಿಯೂ ಆವಾಹಿಸಲ್ಪಟ್ಟ ಶಿವಮೂರ್ತಿಗಳನ್ನು, ಅರ್ಚಾಪಯೇತ್—ಪೂಜಿಸುವಂತೆ ಮಾಡಬೇಕು. (೨೪) ||೯೪||

ಕುಂಡಾಗ್ನೇಯಕಮಂಡಲೇ—ಅಗ್ನಿಕುಂಡಕ್ಕೆ ಆಗ್ನೇಯಭಾಗದಲ್ಲಿ ಪ್ರಣವಾಸನಸಹಿತವಾದ ಮಂಡಲದಲ್ಲಿ, ಸ್ಥಿತಿಃ—ಶಿಷ್ಯನನ್ನು ನಿಲ್ಲಿಸುವಿಕೆಯೂ, (ಇದರಿಂದ ಗುರುವು ಪೂರ್ವಾಭಿಮುಖನಾಗಿಯೂ ಶಿಷ್ಯನು ಉತ್ತರಾಭಿಮುಖನಾಗಿಯೂ ಇರಬೇಕೆಂಬುದು ಸೂಚಿತವಾಗುವುದು.) (೨೫) ಅಥೋ—ನಿಲ್ಲಿಸಿದ ಅನಂತರದಲ್ಲಿ, ದರ್ಭೇಣ—ಮೂಲಮಂತ್ರದಿಂದ ಅಭಿಮಂತ್ರಿಸಲ್ಪಟ್ಟ ದರ್ಭದಿಂದ, ನಾಡೀಸ್ಥಿತಿಃ—ನಾಡೀಸಂಧಾನಮಾಡುವಿಕೆಯೂ, (೨೬) ಹೋಮಃ—ಮೂರು ಆಹುತಿಗಳನ್ನು ನಡೆಯಿಸುವಿಕೆಯೂ, (೨೭) ಮೂರ್ಧ್ನಿ—ಶಿಷ್ಯನ ಶಿರಸ್ಸಿನಲ್ಲಿ, ಅಣುಭಿಃ-ಸಂಹಿತಾಮಂತ್ರಗಳಿಂದ, ಸಪಾತಹವನಂ—ಸಂಪಾತಾಹುತಿಯನ್ನು ನಡೆಯಿಸುವಿಕೆಯೂ, (೨೮) ಮೂಲಾಹುತೀನಾಂ ಶತಂ—ಮೂಲಮಂತ್ರದಿಂದ ನೂರು ಆಹುತಿಗಳನ್ನು ನಡೆಯಿಸುವಿಕೆಯೂ, (೨೯) ಶೈವಮನೋಃ—ಶಿವಾದಿಬ್ರಹ್ಮಪಂಚಕದ ಷಡಂಗಮಂತ್ರದ, ಉಕ್ತಿಃ—ಉಪದೇಶವೂ, (೩೦) ಅಥೋ—ಅನಂತರದಲ್ಲಿ, ನಿಷ್ಕೃತಿಃ—ಮೂಲಮಂತ್ರದಿಂದ ನೂರೆಂಟುಪ್ರಾಯಶ್ಚಿತ್ತಾಹುತಿಗಳನ್ನು ನಡೆಯಿಸುವಿಕೆಯೂ, (೩೧) ಅಥೋ—ಹೀಗೆ ಶಿಷ್ಯಸ್ಥಾಪನೆಮೊದಲುಗೊಂಡು ಪ್ರಾಯಶ್ಚಿತ್ತದವರೆಗೆ ಹೇಳಿದ ಮೂವತ್ತೊಂದು ಸಂಸ್ಕಾರಗಳ ಕ್ರಿಯಾಕಲಾಪವು ಸಮಯದೀಕ್ಷಾವಿಧಿಯೆನಿಸಿಕೊಳ್ಳುವುದು ; ಮುಂದೆ ವಿಶೇಷದೀಕ್ಷಾವಿಧಿಗೆ ಈ ಮೂವತ್ತೊಂದು ಸಂಸ್ಕಾರಗಳನ್ನು ಮಾಡಿದಮೇಲೆ, ಅಗ್ನಿಗಾ ವಾಗೀಶಪೂಜಾ—ಕುಂಡಾಗ್ನಿಯಲ್ಲಿ ಆಧಾರಶಕ್ತಿನ್ಯಾಸವನ್ನು ಮಾಡಿ, ವಾಗೀಶ್ವರೀವಾಗೀಶ್ವರರಿಗೆ ಆಸನವನ್ನು ಸಮರ್ಪಿಸಿ ಅದರಲ್ಲಿ ಅವರನ್ನು ಆವಾಹಿಸಿ ಪೂಜೆಯನ್ನೂ, ತರ್ಪಣವನ್ನೂ ನಡೆಯಿಸುವಿಕೆಯೂ, ಶಿಷ್ಯಪ್ರೋಕ್ಷಣತಾಡನಾಂತರಗತಿಃ—ಅಸ್ತ್ರಮಂತ್ರದಿಂದ ಶಿಷ್ಯನನ್ನು ಪ್ರೋಕ್ಷಿಸುವಿಕೆಯೂ, ಹುಫಡಂತವಾದ ಅಸ್ತ್ರಮಂತ್ರದಿಂದ ಶಿಷ್ಯನ ವಕ್ಷಸ್ಥಲದಲ್ಲಿ ಪುಷ್ಪದಿಂದ ಹೊಡೆಯುವಿಕೆಯೂ, ಇಷ್ಟಾದಮೇಲೆ ನಡೆಯಿಸಬೇಕಾದ

ಕೆಲಸಗಳ ಕ್ರಮವು, ಚಿದ್ಭೇದಗೋಽಥ್ವಾ—ಚೈತನ್ಯಭೇದದಿಂದ ಮಾಡುವ ಕೆಲಸಗಳ ಕ್ರಮವು, (ಇದೆಲ್ಲವನ್ನೂ) ಹೃದಿ—(ಆಚಾರ್ಯನಾದವನು) ತನ್ನ ಹೃದಯದಲ್ಲಿ (ಕುರ್ಯಾತ್) ಮಾಡಬೇಕು. ||೯೫||

(ಇದರಿಂದ—ಹುಂಫಡಂತವಾದ ಅಸ್ತ್ರಮಂತ್ರದಿಂದ ಭೇದನವನ್ನೂ, ಜ್ಯೇಷ್ಠೆಯಿಂದ ವಿಯೋಜನವನ್ನೂ, ತಿರುಗಿ ಆತ್ಮಮಂತ್ರದಿಂದ ಅಂಕುಶಮುದ್ರೆಯಿಂದ ಉತ್ಕರ್ಷಣವನ್ನೂ, ಶಿಷ್ಯನ ದ್ವಾದಶಾಂತಸ್ಥಾನದಲ್ಲಿ ಸಂಯೋಜನವನ್ನೂ, ಅದರ ಮೇಲೆ ತೃಣಾಗ್ರದ ಬಿಂದುವಿನಂತೆ ಜೀವಭಾವನೆಯನ್ನೂ, ಆತ್ಮಮಂತ್ರೋಚ್ಚಾರಣಪೂರ್ವಕವಾಗಿ ಸಂಹಾರಮುದ್ರೆಯಿಂದ ಸಂಗ್ರಹಣವನ್ನೂ (ಇದೆಲ್ಲವನ್ನೂ) ತನ್ನ ಹೃದಯದಲ್ಲಿ ಮಾಡಬೇಕೆಂದು ಹೇಳಿದಂತಾಯಿತು.)

**ಟೀಕೆ—** ಅನಂತರದಲ್ಲಿ ಶಿಷ್ಯಚೈತನ್ಯವನ್ನು ತನ್ನ ಆತ್ಮದಲ್ಲಿ ಪೂರಕದಿಂದ ಪ್ರವೇಶಗೊಳಿಸಿ ಕುಂಭಕದಿಂದ, ಸ್ವಾತ್ಮಸ್ಥಾಪನರೇಚನೇ—ತನ್ನ ಆತ್ಮದೊಡನೆ ಸಮರಸವಾಗಿರುವಂತೆ ಸ್ಥಾಪಿಸುವಿಕೆ, ಅನಂತರದಲ್ಲಿ ಮೂಲಮಂತ್ರವನ್ನು ಲಯಾಂತವಾಗಿ ಉಚ್ಚರಿಸಿ ಆತ್ಮಮಂತ್ರೋಚ್ಚಾರಣಪೂರ್ವಕವಾಗಿ ಉದ್ಭವಮುದ್ರೆಯಿಂದ ಬ್ರಹ್ಮಾದಿಕಾರಣೇಶ್ವರರನ್ನು ತ್ಯಾಗಮಾಡುವ ಕ್ರಮದಲ್ಲಿಯೇ ದ್ವಾದಶಾಂತದಲ್ಲಿ ಸ್ಥಾಪಿಸಿ, ಅನಂತರದಲ್ಲಿ ಸೃಷ್ಟಿಕ್ರಮದಿಂದ ಭ್ರೂಮಧ್ಯಕ್ಕೆ ತಂದು ದಕ್ಷಿಣನಾಡಿಯಿಂದ ಹೊರಗೆ ಬಿಡುವಿಕೆ, ಎಂಬ ಈ ಎರಡು ಕ್ರಿಯೆಗಳನ್ನೂ, (ಕೃತ್ವಾ)—ಮಾಡಿ, ಇತಃ (ಪರಂ)—ಇದರ ಮೇಲೆ, ಬಹಿಃ—ಹೊರಗಡೆಯಲ್ಲಿ, ವಾಗೀಶಿಗರ್ಭಸ್ಥಿತಿಃ—ವಾಗೀಶ್ವರೀವಾಗೀಶ್ವರರ ಸಂಯೋಗವನ್ನು ಸ್ಮರಿಸಿ, ಆತ್ಮಮಂತ್ರದಿಂದ ವಾಗೀಶ್ವರಿಯ ಯೋನಿಯಲ್ಲಿ ವಾಗೀಶ್ವರರಿಂದ ಬಿಡಲ್ಪಟ್ಟದಾಗಿ ಭಾವಿಸಿ, ಅನಂತರದಲ್ಲಿ ವಾಗೀಶ್ವರಿಯ ಗರ್ಭದಲ್ಲಿ ಸ್ಥಾಪಿಸುವಿಕೆಯೆಂಬ ಸಂಸ್ಕಾರವಾದ ಮೇಲೆ ಗರ್ಭಾಧಾನಾದಿ ಸಂಸ್ಕಾರಗಳು ನಡೆಯಿಸಲ್ಪಡತಕ್ಕುವು. ಗರ್ಭಸ್ಥಾತ್ಮಕಪಾಪವೀಕ್ಷಣಹುತಂ—ಅದರ ಮೇಲೆ ಗರ್ಭದಲ್ಲಿ ಸ್ಥಾಪಿಸಲ್ಪಟ್ಟ ಆತ್ಮದ ಹಿಂದೆ ಮಾಡಿರುವ ಬ್ರಹ್ಮಹತ್ಯಾದಿಪಾಪರಾಶಿಯ ಚಿಹ್ನವನ್ನು ಕಾಣುವುದರಿಂದ ಅದಕ್ಕೆ ಪ್ರಾಯಶ್ಚಿತ್ತರೂಪವಾಗಿ ಹೋಮವನ್ನು, (ಕುರ್ಯಾತ್)—ಮಾಡಬೇಕು. ಅದರ ಮೇಲೆ, ಬೀಜಾಶಯಾಹಾರತಃ—ಇಂದ್ರಿಯ-ಭಾವ-ಆಹಾರ ಇವುಗಳಿಂದ ಉಂಟಾಗಿರುವ ದೋಷಗಳ ಪರಿಹಾರಕ್ಕಾಗಿಯೂ, ಯೋನೇಃ—ಗುಹ್ಯೇಂದ್ರಿಯಜನ್ಯವಾದ ದೋಷದ ಶಾಂತಿಗಾಗಿಯೂ, ತದ್ಭವದೇಹತೋಽಪಿ—ಅದರಿಂದ ಉತ್ಪನ್ನವಾಗಿರುವ ದೇಹದ ದೋಷಗಳ ಶಾಂತಿಗಾ

ಗಿಯೂ, ಹವನಂ (ಕುರ್ಯಾತ್)—ಹೋಮವನ್ನು ಮಾಡಬೇಕು. ಅದರ ಮೇಲೆ ರುದ್ರಾಂಶಹೋಮಃ (ಕಾರ್ಯಃ)—ರುದ್ರಾಂಶನಾಗುವುದಕ್ಕಾಗಿ ಹೋಮವು ಮಾಡಲ್ಪಡತಕ್ಕದು. ಎಂದರೆ ಶಿಷ್ಯಾತ್ಮನಿಗೆ ಶಕ್ತಿಗರ್ಭದಲ್ಲಿ ಸೇರಿಕೊಳ್ಳುವ ಯೋಗ್ಯತೆಯುಂಟಾಗುವುದಕ್ಕೋಸ್ಕರ ರುದ್ರಾಂಶವಾಗುವಂತೆ ಮಾಡುವುದಕ್ಕಾಗಿ ಮೂಲಮಂತ್ರದಿಂದ "ಭೋ ಆತ್ಮನ್ ರುದ್ರಾಂಶೋ ಭವ" ಎಂದು ಮೂರು ಆಹುತಿಗಳನ್ನು ಮಾಡಬೇಕು. ತತಃ—ಹೀಗೆ ರುದ್ರಾಂಶನಾದ ಮೇಲೆ, ಜಾತೀಶಾಣುಗಯಜ್ಞಸೂತ್ರಧರಣಂ—ಬ್ರಾಹ್ಮಣ-ಕ್ಷತ್ರಿಯ-ವೈಶ್ಯ-ಶೂದ್ರರೆಂಬ ನಾಲ್ಕು ಜಾತಿಯವರಿಗೆ ಕ್ರಮವಾಗಿ ಅಧಿಪತಿಗಳೆನಿಸಿಕೊಂಡಿರುವ ತತ್ಪುರುಷ-ಅಘೋರ-ವಾಮದೇವ-ಸದ್ಯೋಜಾತರೆಂಬ ನಾಲ್ವರ ಮಂತ್ರವನ್ನು ಪಡೆದಿರುವ ಯಜ್ಞೋಪವೀತಧಾರಣವನ್ನು ಮಾಡಬೇಕು. ಎಂದರೆ—ಮೂರು ಎಳೆಗಳುಳ್ಳ ಸೂತ್ರವನ್ನು ಮೂರಾಗಿ ಮಡಿಸಿ ಮುರುಕಲ್ಪಟ್ಟಿರುವ ಒಂದು ಸೂತ್ರವನ್ನು ಶೂದ್ರನೂ, ಅಂಥ ಎರಡು ಸೂತ್ರಗಳನ್ನು ವೈಶ್ಯನೂ, ಅಂಥ ಮೂರು ಸೂತ್ರಗಳನ್ನು ಕ್ಷತ್ರಿಯನೂ, ಅಂಥ ಏಳು ಸೂತ್ರಗಳನ್ನು ಬ್ರಾಹ್ಮಣನೂ ಧರಿಸಬೇಕೆಂದು ಅಭಿಪ್ರಾಯವು. ಮೂಲಾಹುತೀನಾಂ ಶತಂ (ಕುರ್ಯಾತ್)—ಇಂಥ ಸೂತ್ರಧಾರಣವು ಧೃಢವಾಗಿರುವುದಕ್ಕಾಗಿ ಮೂಲಮಂತ್ರದಿಂದ ನೂರು ಆಹುತಿಗಳನ್ನು ಅನಂತರದಲ್ಲಿ ಮಾಡಬೇಕು. ಮತ್ತು ಅದರ ದಶಾಂಶತರ್ಪಣವನ್ನೂ ಬ್ರಹ್ಮಾಂಗಗಳಿಗೆ ಮಾಡಬೇಕು. ||೯೬||

**ಟೀಕೆ**— ಅನಂತರದಲ್ಲಿ ವಾಗೀಶ್ವರೀಗರ್ಭದಲ್ಲಿರುವ ಆತ್ಮನಿಗೆ ಗರ್ಭಾಧಾನ-ಪುಂಸವನ-ಸೀಮಂತೋನ್ನಯನ-ಜಾತಕರ್ಮ-ನಾಮಕರಣ ಎಂಬ ಈ, ಪಂಚಸಂಸ್ಕೃತಿಹುತೇ ಬ್ರಹ್ಮಾಂಗಾಹುತಿ—ಐದು ಸಂಸ್ಕಾರಗಳಿಗಾಗಿ ಹೋಮವನ್ನು ಮಾಡುವಾಗ ಸದ್ಯೋಜಾತಬ್ರಹ್ಮವೇ ಮೊದಲಾದ ಪಂಚಬ್ರಹ್ಮಗಳ ಮಂತ್ರಗಳಿಂದ ಪಂಚಸಂಸ್ಕಾರಗಳಿಗೂ ಕ್ರಮವಾಗಿ ಅವರನ್ನು ಪೂಜಿಸಿ, ನೇತ್ರಮಂತ್ರವೊಂದು ಹೊರತು ಉಳಿದ ಐದು ಅಂಗಮಂತ್ರಗಳಿಂದಲೂ ಐದು ಸಂಸ್ಕಾರಗಳಿಗೆ ಕ್ರಮದಿಂದ ಪ್ರತ್ಯೇಕವಾಗಿ ಐದೈದು ಆಹುತಿಗಳನ್ನು ಮಾಡಬೇಕು. ಮತ್ತು ಸೀಮಂತೋನ್ನಯನಕರ್ಮದಲ್ಲಿ ವಕ್ತ್ರವೆಂಬ ಅಂಗದ ಕಲ್ಪನೆಗಾಗಿ ಶಿಖಾಮಂತ್ರದಿಂದಲೇ ಪಂಚಬ್ರಹ್ಮನ್ಯಾಸವನ್ನೂ, ಮೂವತ್ತೆಂಟು ಕಲೆಗಳ ನ್ಯಾಸವನ್ನೂ ಮಾಡಬೇಕು. ಉಳಿದ ಸಂಸ್ಕಾರಗಳ ಸಿದ್ಧಿಗಾಗಿ ಪೂರ್ಣಾಹುತಿಯನ್ನು ಮಾಡಬೇಕು. ಇಲ್ಲಿ—ಗರ್ಭದಲ್ಲಿರುವ ಆತ್ಮನನ್ನು ಮಾಯೆಯು ಗರ್ಭದಿಂದ ಹಿರಿದು ಎತ್ತಿ ಶಕ್ತಿಗರ್ಭ

ದಲ್ಲಿ ಶಿವಬೀಜವನ್ನಾಗಿ ಸ್ಥಾಪಿಸುವಿಕೆಯೇ "ಗರ್ಭಾಧಾನ" ವೆನಿಸಿಕೊಳ್ಳುವುದು; ಆತ್ಮನ ನಿರ್ಮಲಗುಣಪ್ರಕಾಶವೇ "ಪುಂಸವನ"ವೆನಿಸಿಕೊಳ್ಳುವುದು. ಶಿವನ ಪುತ್ರನಾಗಿ ಹುಟ್ಟುವಿಕೆಯೇ "ಜಾತಕರ್ಮ"ವೆನಿಸಿಕೊಳ್ಳುವುದು; ಆತ್ಮನಲ್ಲಿ ಅವನ ಪರಮಸಾಮ್ಯವೆಂಬ ಶಿವತ್ವವನ್ನುಂಟುಮಾಡಿ 'ಶಿವನೇ ಇವನು' ಎಂದು ನಾಮಧೇಯವನ್ನಿಡುವಿಕೆಯೇ "ನಾಮಕರಣ"ವೆನಿಸಿಕೊಳ್ಳುವುದು; ಎಂದು ತಿಳಿಯಬೇಕು. ಶಿಶೋಃ—(ಅನಂತರದಲ್ಲಿ) ಶಿಷ್ಯನಿಗೆ, ಪೂರ್ವಾತ್ಮಯೋಗಃ—ಪೂರ್ವದಂತೆ ನಿರ್ಮಲವಾದ ಆತ್ಮಸ್ವರೂಪದಲ್ಲಿ ಸಂಯೋಗವು, (ಕಾರ್ಯಃ)—ಮಾಡಲ್ಪಡತಕ್ಕದು. ವಾಗೀಶ್ಯಾದಿವಿಸೃಷ್ಟಿಪೂರ್ತಿಹವನಂ—ವಾಗೀಶ್ವರಿ ವಾಗೀಶ್ವರ ಇವರೇ ಮೊದಲಾದವರಿಗೆ ತರ್ಪಣಾನಂತರದಲ್ಲಿ ಉದ್ವಾಸನವನ್ನು ಮಾಡಿ ಅನಂತರದಲ್ಲಿ ಪ್ರಾಯಶ್ಚಿತ್ತಕ್ಕಾಗಿ ಮೂಲಮಂತ್ರದಿಂದ ಸಾವಿರ ಅಥವಾ ಐದುನೂರು ಅಥವಾ ನೂರಾದರೂ ಆಹುತಿಗಳನ್ನು, (ಕುರ್ಯಾತ್) ಮಾಡಬೇಕು. ವಹ್ನ್ಯಾದೌ (ಶಿವೇ)—ಅಗ್ನಿಯಲ್ಲಿಯೂ ಮಂಡಲದಲ್ಲಿಯೂ ಕುಂಭದಲ್ಲಿಯೂ ಆವಾಹಿತನಾಗಿರುವ ಶಿವನಲ್ಲಿ, ಪುಷ್ಪಸ್ಯ ವಿಕ್ಷೇಪಣಂ—ಶಿಷ್ಯನ ಕೈಯಿಂದ ಪುಷ್ಪಾರ್ಚನೆಯನ್ನು, (ಕಾರಯಿತ್ವಾ)—ಮಾಡಿಸಿ, ಸಮಯಶ್ರುತಿಃ—(ಅನಂತರದಲ್ಲಿ) ಸಿದ್ಧಾಂತದಲ್ಲಿ ವಿಧಿಸಿರುವ ಸಮಯಾಚಾರಗಳ ಶ್ರವಣವೂ ಮಾಡಿಸಲ್ಪಡತಕ್ಕುದು. ಸಮಯಾಚಾರಗಳೆಂದರೆ—ಶಿವ-ಶಿವಶಾಸ್ತ್ರ-ಶಿವಾಗ್ನಿ-ಗುರು-ಇವರನ್ನು ನಿಂದಿಸಬಾರದು; ಇವರ ಛಾಯೆಯನ್ನು ದಾಟಬಾರದು; ನಿರ್ಮಾಲ್ಯವನ್ನು ಭುಜಿಸಬಾರದು; ಕೊಡಬಾರದು; ದಾಟಬಾರದು; ಶಿವ-ಅಗ್ನಿ-ಗುರು ಇವರನ್ನು ಪ್ರಾಣವಿರುವವರೆಗೆ ಪೂಜಿಸಲೇಬೇಕು; ಇವೇ ಮೊದಲಾದ ಆಚಾರಗಳು ಸಮಯಾಚಾರಗಳೆನಿಸಿಕೊಳ್ಳುವುವು. ಬಾಲಾದೌ—ಆದರೆ ಅಂಥ ಸಮಯಾಚಾರಗಳನ್ನು ಆಚರಿಸಲು ಸಾಮರ್ಥ್ಯವಿಲ್ಲದ ಬಾಲರು ವೃದ್ಧರು ವ್ಯಾಧಿಗ್ರಸ್ತರು ಇವರೇ ಮೊದಲಾದವರ ವಿಷಯದಲ್ಲಿ, ಸಮಯಾದ್ಯಾಚಾರಶುದ್ಧೌ—ಸಮಯಾಚಾರಗಳನ್ನು ಅನುಷ್ಠಿಸದಿದ್ದುದರಿಂದ ಉಂಟಾದ ದೋಷದ ಶುದ್ಧಿಗಾಗಿ, ಹುತಂ—ಹೋಮವನ್ನು, (ಕುರ್ಯಾತ್)—ವಿಧಿಗನುಸಾರವಾಗಿ ಮಾಡಬೇಕು. ಇತರಃ—ಸಮಯಾಚಾರಗಳನ್ನು ಅನುಷ್ಠಿಸಲು ಸಾಮರ್ಥ್ಯವುಳ್ಳವನು, ಶಿವಾರ್ಚನಶಿವಜ್ಞಾನಾದಿಯೋಗ್ಯಃ—ಶಿವಪೂಜೆಯನ್ನು ಮಾಡುವುದಕ್ಕೂ ಸಿದ್ಧಾಂತಶಾಸ್ತ್ರಗಳನ್ನು ಓದುವುದಕ್ಕೂ ಮಂತ್ರಗಳನ್ನು ಕೇಳುವುದಕ್ಕೂ ಅರ್ಹನಾಗಿ, ಭವೇತ್—ಆಗುವನು. ಹೀಗೆ ಸಮಯಾಚಾರಗಳನ್ನು ತಪ್ಪದೆ ನಡೆಯಿಸಬಲ್ಲವನಾದ ಸಮಯಿಯೆಂಬುವನು ಈಶ್ವರಪದವನ್ನೂ ರುದ್ರಪದವನ್ನೂ ಹೊಂದುವನೆಂದು ಕಾಮಿಕಾಗಮದಲ್ಲಿ ಉಕ್ತವಾಗಿರುವುದು॥೯೭॥

**ಅವತರಣಿಕೆ**— ಹೀಗೆ ಸಮಯದೀಕ್ಷೆಯು ಹೇಳಲ್ಪಟ್ಟನಂತರ ಮುಂದೆ ನಿರ್ವಾಣದೀಕ್ಷೆಯನ್ನು ಹೇಳುವುದಾಗಿ ಉಪಕ್ರಮಿಸಿ ಮೊದಲು ಷಡಧ್ವಾವಾಹನ ಕ್ರಮವನ್ನು ತೋರಿಸುವುದಕ್ಕಾಗಿ ಪ್ರಾರಂಭಿಸುತ್ತಾರೆ; ನಿವೃತ್ತಿಕಲೆ-ಪ್ರತಿಷ್ಠಾಕಲೆ-ವಿದ್ಯಾಕಲೆ-ಶಾಂತಿಕಲೆ-ಶಾಂತ್ಯತೀತಕಲೆ-ಎಂಬ ಐದುಕಲೆಗಳೊಳಗೆ ಪ್ರತಿಯೊಂದು ಕಲೆಯಲ್ಲಿಯೂ—೧ ತತ್ತ್ವ-೨-ಭುವನ-೩-ವರ್ಣ-೪-ಪದ-೫-ಮಂತ್ರ-೬-ಬೀಜ-೭-ಗುಣ-೮-ವಿಷಯ-೯-ವಾಯು-೧೦-ನಾಡಿ-೧೧-ಇಂದ್ರಿಯ-೧೨-ಕಾರಣೇಶ್ವರ-ಈ ಹನ್ನೆರಡು ಪದಾರ್ಥಗಳು ಅಡಗಿರುವುವೆಂದು ತೋರಿಸಬೇಕು; ಅದರಲ್ಲಿ ಮೊದಲು ನಿವೃತ್ತಿಕಲೆಯಲ್ಲಿ ಅಡಗಿರುವ ತತ್ತ್ವಾದಿ ಹನ್ನೆರಡು ಪದಾರ್ಥಗಳ ವಿವರವನ್ನು ತೊಂಬತ್ತೆಂಟನೆಯ ಶ್ಲೋಕದಲ್ಲಿ ಸಂಹಾರಕ್ರಮದಿಂದ ತೋರಿಸುತ್ತಾರೆ. ಹೇಗೆಂದರೆ—

**ಕ್ಷ್ಮಾ ತತ್ತ್ವಂ ತ್ವಜಹೃನ್ಮನುಃ ಪ್ರಣವತಶ್ಚಾಂತ್ಯಾದ್ಭವದ್ವ್ಯಂತಕಂ**
**ಲೋಕಾಃ ಕಾಲಕೃಶಾನುತಶ್ಶತಮಲಾವಷ್ಟೌ ಚ ಕಾಳ್ಯಂತಿಮಾಃ ।**
**ಗಂಧಾತ್ಪಂಚ ಗುಣಾಶ್ಚ ಗಂಧವಿಷಯಃ ಕ್ಷೋಣೋರ್ಣೋ ನಿವೃತೌ ವಿಧಿಃ**
**ಪ್ರಾಣಾಪಾನಮಿಡಾಖ್ಯಪಿಂಗಳಯುಗೋಪಸ್ಥಾಖ್ಯನಾಸಾಃ ಸ್ಮರೇತ್॥೯೮॥**

**ಟೀಕೆ**— ನಿವೃತೌ—ನಿವೃತ್ತಿಕಲೆಯಲ್ಲಿ, ೧ ತತ್ತ್ವಂ—ತತ್ತ್ವವು, ಕ್ಷ್ಮಾ—ಪೃಥಿವಿಯು ೧. ೨ ಲೋಕಾಃ—ಭುವನಗಳು ಕಾಲಕೃಶಾನುತಃ—ಕಾಲಾಗ್ನಿರುದ್ರಭುವನವನ್ನು ಆರಂಭಿಸಿ, ಕಾಳ್ಯಂತಿಮಾಃ—ಭದ್ರಕಾಳೀಭುವನದವರೆಗೆ, ಶತಮಷ್ಟೌ ಚ—ನೂರುಎಂಟು ಇರುವುವು ೧೦೮. ೩ ಅರ್ಣಃ—ವರ್ಣವು ಕ್ಷಃ—ಕ್ಷಕಾರವು ೧. ೪ (ಪದಾನಿ)—ಪದಗಳು, ಅಂತ್ಯಾತ್-ಪ್ರಣವತಃ—ಕೊನೆಯದಾದ ಓಂಕಾರವನ್ನು ಪ್ರಾರಂಭಿಸಿ, ಭವದ್ವ್ಯಂತಕಂ—'ಭವಭವ' ಎಂಬುವ ಪದದವರೆಗೆ ಇಪ್ಪತ್ತೆಂಟು ೨೮. ೫ ಮನುಃ—ಮಂತ್ರವು (ಮಂತ್ರಗಳು), ಅಜಹೃತ್—ಸದ್ಯೋಜಾತಮಂತ್ರ-ಹೃದಯಮಂತ್ರಗಳೆರಡು ೨. ೬ (ಬೀಜೇ)—ಬೀಜಾಕ್ಷರಗಳು, ಅಲೌ—ಅಕಾರಲಕಾರಗಳೆರಡು ೨. ೭ ಗುಣಾಃ—ಗುಣಗಳು, ಗಂಧಾತ್-ಪಂಚ—ಗಂಧದಿಂದ ಹಿಡಿದು ಶಬ್ದದವರೆಗೆ ಐದು ೫. ೮ ವಿಷಯಃ—ವಿಷಯವು, ಗಂಧಃ—ಗಂಧವೆಂಬುದೊಂದೇ ೧. ೯ (ವಾಯೂ)—ವಾಯುಗಳು, ಪ್ರಾಣಾಪಾನಂ—ಪ್ರಾಣಾಪಾನಗಳೆರಡು ೨. ೧೦ (ನಾಡೀ)—ನಾಡಿಯು (ನಾಡಿಗಳು), ಇಡಾಖ್ಯಪಿಂಗಳಯುಗಾ—ಇಡಾ-ಪಿಂಗಳಾ ಎಂಬ ಎರಡು ೨. ೧೧ (ಇಂದ್ರಿಯೇ)—ಇಂದ್ರಿಯಗಳು, ಉಪಸ್ಥಾಖ್ಯನಾಸೇ—ಉಪ

ಸ್ಥೇಂದ್ರಿಯ-ಘ್ರಾಣೇಂದ್ರಿಯಗಳೆಂಬ ಎರಡು ೨. ೧೨ (ಕಾರಣೇಶ್ವರಃ)—ಕಾರಣೇಶ್ವರನು, ವಿಧಿಃ—ಬ್ರಹ್ಮನು ೧. (ಇತ್ಥಂ) ಸ್ಮರೇತ್—ಈ ರೀತಿಯಾಗಿ ನಿವೃತ್ತಿಕಲೆಯಲ್ಲಿ ಅಡಗಿರುವ ತತ್ತ್ವ-ಭುವನ-ಮುಂತಾದುವುಗಳನ್ನು ಧ್ಯಾನಿಸಬೇಕು ಮತ್ತು ಪೂಜಿಸಬೇಕು.

ನಿವೃತ್ತಿಕಲೆಯಲ್ಲಿ—೧ ಪೃಥಿವಿಯೆಂಬ ಒಂದು ತತ್ತ್ವವೂ, ೨ ಕಾಲಾಗ್ನಿರುದ್ರನಿಂದ ಭದ್ರಕಾಳಿಯವರೆಗೆ ಆಗುವ ನೂರೆಂಟು ಭುವನಗಳೂ, ೩ ಕ್ಷ-ಎಂಬ ಒಂದು ವರ್ಣವೂ, ೪ ಕೊನೆಯ ಓಂಕಾರದಿಂದ ಭವ-ಭವ-ಎಂಬುವ ಪದದವರೆಗೆ ಆಗುವ ಇಪ್ಪತ್ತೆಂಟು ಪದಗಳೂ, ೫ ಸದ್ಯೋಜಾತಮಂತ್ರ— ಹೃದಯಮಂತ್ರಗಳೆಂಬ ಎರಡು ಮಂತ್ರಗಳೂ, ೬ ಅಕಾರಲಕಾರಗಳೆಂಬ ಎರಡು ಬೀಜಾಕ್ಷರಗಳೂ, ೭ ಗಂಧ-ರಸ-ರೂಪ-ಸ್ಪರ್ಶ-ಶಬ್ದಗಳೆಂಬ ಐದು ಗುಣಗಳೂ, ೮ ಗಂಧವೆಂಬುದೊಂದು ವಿಷಯವೂ, ೯ ಪ್ರಾಣಾಪಾನಗಳೆಂಬ ಎರಡು ವಾಯುಗಳೂ, ೧೦ ಇಡಾ-ಪಿಂಗಳಾ ಎಂಬ ಎರಡು ನಾಡಿಗಳೂ, ೧೧ ಉಪಸ್ಥಘ್ರಾಣಗಳೆಂಬ ಎರಡು ಇಂದ್ರಿಯಗಳೂ, ೧೨ ಚತುರ್ಮುಖಬ್ರಹ್ಮನೆಂಬ ಒಬ್ಬ ಕಾರಣೇಶ್ವರನೂ, ಅಡಗಿರುವುವು.

ಮತ್ತು—ಈ ಪಾರ್ಥಿವಮಂಡಲವು ಗೌರವರ್ಣವುಳ್ಳುದಾಗಿಯೂ, ವಜ್ರಚಿಹ್ನಾಂಕಿತವಾಗಿಯೂ, ಕಾಠಿನ್ಯಗುಣವುಳ್ಳುದಾಗಿಯೂ, ಭಾರವಾಗಿಯೂ, ಚತುರಶ್ರವಾಗಿಯೂ, ನೂರುಕೋಟಿ ಯೋಜನದ ಔನ್ನತ್ಯವುಳ್ಳುದಾಗಿಯೂ, ಬಲಿಷ್ಠವಾಗಿಯೂ, ಜಾಗ್ರದವಸ್ಥೆಯುಳ್ಳುದಾಗಿಯೂ, ಶುದ್ಧವಾದ ಸ್ವರ್ಣದ ಕಾಂತಿಯುಳ್ಳುದಾಗಿಯೂ ಇರುವುದೆಂದು ಧ್ಯಾನಿಸಿ ಶಿಷ್ಯನ ಜಾನುಪ್ರದೇಶಮೊದಲುಗೊಂಡು ಪಾದಪ್ರದೇಶದವರೆಗೆ ಪಾಶಸೂತ್ರದಲ್ಲಿ ಆಚಾರ್ಯನು ನ್ಯಾಸಮಾಡಬೇಕು. ||೯೮||

**ಅವತರಣಿಕೆ**— ಪ್ರತಿಷ್ಠಾಕಲೆಯಲ್ಲಿ ಅಡಗಿರುವ ತತ್ತ್ವಾದಿ ಹನ್ನೆರಡು ಪದಾರ್ಥಗಳ ವಿವರವನ್ನು ತೊಂಬತ್ತೊಂಬತ್ತನೆಯ ಶ್ಲೋಕದಲ್ಲಿ ಸಂಹಾರಕ್ರಮದಿಂದ ತೋರಿಸುತ್ತಾರೆ. ಹೇಗೆಂದರೆ—

**ತತ್ತ್ವಾಧ್ವಾ ಪ್ರಾಕೃತಾಂತಃ ಪ್ರಭೃತಿ ಸಲಿಲತಷ್ಟಾಂತಹಾದ್ಯಾಃ ಪ್ರತಿಷ್ಠಾ**
**ಶ್ರೀಕಂಠಾಂತಾಮರೇಶಾದ್ಭುವನಸರಣಿಕಾ ವಾಮದೇವಶ್ಶಿರೋಽಣುಃ ।**
**ವ್ಯಾಪಿನ್ನಂತಾನಿ ಶರ್ವದ್ವಿತಯಪದಕತಸ್ತ್ವಾಲುಪಾಯುಗೂ ಉವೌ ದ್ವೌ**
**ಗಾಂಧಾರೀ ಮಧ್ಯನಾಡೀ ಶ್ರುತಿಗುಣರಸಕೋದಾನನೂನೌ ಹರಿಶ್ಚ ||೯೯||**

**ಟೀಕೆ**= ಪ್ರತಿಷ್ಠಾ—ಪ್ರತಿಷ್ಠಾಕಲೆಯಲ್ಲಿ ಅಡಗಿರುವ ತತ್ತ್ವಾದಿಗಳಾವುವೆಂದರೆ, ೧ ತತ್ತ್ವಾಧ್ವಾ—ಷಡಧ್ವಗಳಿಗೆ ಒಳಪಟ್ಟ ತತ್ತ್ವಗಳು, ಸಲಿಲತಃ-ಪ್ರಭೃತಿ—ಜಲತತ್ತ್ವಮೊದಲುಗೊಂಡು, ಪ್ರಾಕೃತಾಂತಃ—ಪ್ರಕೃತಿತತ್ತ್ವದವರೆಗೆ ಆಗುವ ಇಪ್ಪತ್ತುಮೂರು ೨೩. ೨ ಭುವನಸರಣಿಕಾ—ಷಡಧ್ವಗಳಿಗೆ ಒಳಪಟ್ಟ ಭುವನಗಳು, ಅಮರೇಶಾತ್-(ಆರಭ್ಯ)—ಅಮರೇಶಭುವನಮೊದಲುಗೊಂಡು, ಶ್ರೀಕಂಠಾಂತಾ—ಶ್ರೀಕಂಠಭುವನದವರೆಗೆ ಆಗುವ ಐವತ್ತಾರು ೫೬. ೩ (ವರ್ಣಾಃ)—ಷಡಧ್ವಗಳಿಗೆ ಒಳಪಟ್ಟ ವರ್ಣಗಳು, ಹಾದ್ಯಾಃ—ಹಕಾರ ಮೊದಲುಗೊಂಡು, ಟಾಂತಾಃ—ಟಕಾರದವರೆಗೆ ಆಗುವ ಇಪ್ಪತ್ತಮೂರು ೨೩. ೪ (ಪದಾನಿ)—ಷಡಧ್ವಗಳಿಗೆ ಒಳಪಟ್ಟ ಪದಗಳು, ಶರ್ವದ್ವಿತಯಪದಕತಃ—ಶರ್ವ-ಶರ್ವ-ಎಂಬ ಪದವನ್ನು ಆರಂಭಿಸಿ, ವ್ಯಾಪಿನ್ನಂತಾನಿ—ವ್ಯಾಪಿನ್-ವ್ಯಾಪಿನ್-ಎಂಬ ಪದಗಳವರೆಗೆ ಆಗುವ ಇಪ್ಪತ್ತೊಂದು ೨೧. ೫ ಅಣುಃ—ಷಡಧ್ವಗಳಿಗೆ ಒಳಪಟ್ಟ ಮಂತ್ರಗಳು, ವಾಮದೇವಃ-ಶಿರಃ—ವಾಮದೇವಮಂತ್ರ-ಶಿರೋಮಂತ್ರಗಳೆಂಬ ಎರಡು ೨. ೬ (ಬೀಜೇ)—ಬೀಜಾಕ್ಷರಗಳು, ಉವೌ ದ್ವೌ—ಉಕಾರವಕಾರಗಳೆರಡು ೨. ೭ ಶ್ರುತಿಗುಣಃ—ರಸ-ರೂಪ-ಸ್ಪರ್ಶ-ಶಬ್ದಗಳೆಂಬ ನಾಲ್ಕು ಗುಣಗಳು ೪. ೮ ರಸಕಃ—ರಸವೇ ವಿಷಯವು ೧. ೯ ಉದಾನಸಮಾನೌ—ಉದಾನಸಮಾನಗಳೆಂಬ ಎರಡು ವಾಯುಗಳು ೨. ೧೦ ಗಾಂಧಾರೀ-ಮಧ್ಯನಾಡೀ ಗಾಂಧಾರೀ-ಸುಷುಮ್ನಾ ಎಂಬ ಎರಡು ನಾಡಿಗಳು ೨. ೧೧ ತಾಲುಪಾಯೂ—ಜಿಹ್ವೆ-ಪಾಯು-ಈ ಎರಡು ಇಂದ್ರಿಯಗಳು ೨. ೧೨ ಹರಿಃ—ವಿಷ್ಣು-ವೇ-ಕಾರಣೇಶ್ವರನು ೧, (ಇತ್ಥಂ-ಧ್ಯಾತ್ವಾ)—ಈ ರೀತಿಯಾಗಿ ತತ್ತ್ವಾದಿಗಳನ್ನೊಳಗೊಂಡಿರುವ ಪ್ರತಿಷ್ಠಾಕಲೆಯನ್ನು ಧ್ಯಾನಮಾಡಿ, (ಆವಾಹನಾದಿ)—ಆವಾಹನಮೊದಲಾದ ಉಪಚಾರಗಳನ್ನು, (ಕುರ್ಯಾತ್)—ಮಾಡಬೇಕು.

ಪ್ರತಿಷ್ಠಾಕಲೆಯಲ್ಲಿ—೧ ಜಲತತ್ತ್ವ ಮೊದಲುಗೊಂಡು ಪ್ರಕೃತಿತತ್ತ್ವದವರೆಗೆ ಆಗುವ ಇಪ್ಪತ್ತುಮೂರು ತತ್ತ್ವಗಳೂ, ೨ ಅಮರೇಶ ಮೊದಲುಗೊಂಡು ಶ್ರೀಕಂಠನವರೆಗೆ ಆಗುವ ಐವತ್ತಾರು ಭುವನಗಳೂ, ೩ ಹಕಾರ ಮೊದಲುಗೊಂಡು ಟಕಾರದವರೆಗೆ ಆಗುವ ಇಪ್ಪತ್ತುಮೂರು ವರ್ಣಗಳೂ, ೪ ಶರ್ವಪದದಿಂದ ವ್ಯಾಪಿನ್ ಪದದವರೆಗೆ ಆಗುವ ಇಪ್ಪತ್ತೊಂದು ಪದಗಳೂ, ೫ ವಾಮದೇವಮಂತ್ರ-ಶಿರೋಮಂತ್ರಗಳೆಂಬ ಎರಡು ಮಂತ್ರಗಳೂ, ೬ ಉಕಾರವಕಾರಗಳೆಂಬ ಎರಡು ಬೀಜಾಕ್ಷರಗಳೂ, ೮ ರಸ-ರೂಪ-ಸ್ಪರ್ಶ-ಶಬ್ದಗಳೆಂಬ ನಾಲ್ಕು ಗುಣಗಳೂ, ೯

ಉದಾನಸಮಾನಗಳೆಂಬ ಎರಡು ವಾಯುಗಳೂ, ೧೦ ಗಾಂಧಾರಿ-ಸುಷುಮ್ನೆ ಎಂಬ ಎರಡು ನಾಡಿಗಳೂ, ೧೧ ಜಿಹ್ವೆ-ಪಾಯು ಎಂಬ ಎರಡು ಇಂದ್ರಿಯಗಳೂ, ೧೨ ವಿಷ್ಣುವೆಂಬ ಕಾರಣೇಶ್ವರನೂ ಅಡಗಿರುವುವು.

ಮತ್ತು—ಈ ಜಲತತ್ತ್ವಮಂಡಲವು ಶ್ವೇತವರ್ಣವುಳ್ಳುದಾಗಿಯೂ, ಪದ್ಮ ಚಿಹ್ನಾಂಕಿತವಾಗಿಯೂ, ಅರ್ಧಚಂದ್ರಾಕಾರವಾಗಿಯೂ, ಹರಿಯುವ ಸ್ವಭಾವ ವುಳ್ಳುದಾಗಿಯೂ, ಶೈತ್ಯಗುಣವುಳ್ಳುದಾಗಿಯೂ, ಸಾವಿರಕೋಟಿಯೋಜನದ ಔನ್ನ ತ್ಯವುಳ್ಳುದಾಗಿಯೂ, ಸ್ವಪ್ನಾವಸ್ಥೆಯುಳ್ಳುದಾಗಿಯೂ, ಇರುವುದೆಂದು ಧ್ಯಾನಿಸಿ ಶಿಷ್ಯನ ನಾಭಿಪ್ರದೇಶಮೊದಲುಗೊಂಡು ಜಾನುಪ್ರದೇಶದವರೆಗೆ ಪಾಶಸೂತ್ರದಲ್ಲಿ ಆಚಾರ್ಯನು ನ್ಯಾಸಮಾಡಬೇಕು. ||೯೯||

**ಅವತರಣಿಕೆ**= ವಿದ್ಯಾಕಲೆಯಲ್ಲಿ ಅಡಗಿರುವ ತತ್ತ್ವಾದಿ ಹನ್ನೆರಡು ಪದಾರ್ಥಗಳ ವಿವರವನ್ನು ನೂರನೆಯ ಶ್ಲೋಕದಲ್ಲಿ ಸಂಹಾರಕ್ರಮದಿಂದ ತೋರಿ ಸುತ್ತಾರೆ. ಹೇಗೆಂದರೆ—

**ಮಾಯಾತತ್ತ್ವಾಂತಮಾದೌ ಪುರುಷಮಥ ಶಿಖಾರೂಪಿಣೌ ಇಾದಿಘಾಂತಂ**
**ವಾಮಾದ್ಯಂಗುಷ್ಠಮಾತ್ರಾಂತಸರಗಭುವನಂ ತಾರಕಾಂತಃ ಪದಾಧ್ವಾ ।**
**ವ್ಯೋಮಿನ್ನಾದಿರ್ಮರೌ ದ್ವೌ ಕರಿವರರಸನಾ ಪೂಷಸಂಜ್ಞ್ಯಾತ್ರನಾಗ**
**ವ್ಯಾನೌ ಪಾದಾಕ್ಷಿ ರೂಪಾಹ್ವಯವಿಷಯಗತಾ ರುದ್ರವಿದ್ಯಾ**
**ಗುಣಾಸ್ತ್ರಿಃ ||೧೦೦||**

**ಟೀಕೆ**= ಅತ್ರ—ಈ ವಿದ್ಯಾಕಲೆಯಲ್ಲಿ, ೧ ಪುರುಷಂ-ಆದೌ—ಪುರುಷ ತತ್ತ್ವವನ್ನು ಮೊದಲು ಮಾಡಿಕೊಂಡು, ಮಾಯಾತತ್ತ್ವಾಂತಂ—ಮಾಯಾ ತತ್ತ್ವದವರೆಗೆ ಆಗುವ ತತ್ತ್ವಗಳು ಏಳು ೭. ೨ ಶಿಖಾರೂಪಿಣೌ—ಅಘೋರ ಮಂತ್ರ ಶಿಖಾಮಂತ್ರಗಳೆಂಬ ಎರಡು ಮಂತ್ರಗಳು ೨. ೩ ಇಾದಿಘಾಂತಂ— ಇಕಾರ ಮೊದಲು ಘಕಾರದ ವರೆಗೆ ಆಗುವ ವರ್ಣಗಳು ಏಳು ೭. ೪ ವಾಮಾ ದ್ಯಂಗುಷ್ಠಮಾತ್ರಾಂತಸರಗಭುವನಂ—ವಾಮಭುವನ ಮೊದಲುಗೊಂಡು ಅಂ ಗುಷ್ಠಮಾತ್ರಭುವನದವರೆಗೆ ಆಗುವ ಭುವನಗಳು ಇಪ್ಪತ್ತೇಳು ೨೭. ೫ ವ್ಯೋಮಿ ನ್ನಾದಿಃ—ವ್ಯೋಮಿನ್-ವ್ಯೋಮಿನ್ ಎಂಬ ಪದಗಳನ್ನು ಉಪಕ್ರಮಿಸಿ, ತಾರಕಾಂ ತಃ-ಪದಾಧ್ವಾ—ಓಂಕಾರದವರೆಗೆ ಆಗುವ ಪದಗಳು ಇಪ್ಪತ್ತು ೨೦. ೬ ಮರೌ ದ್ವೌ—ಮಕಾರ-ರೇಫಗಳೆಂಬ ಎರಡು ಬೀಜಾಕ್ಷರಗಳು ೨. ೭ ಕರಿವರರಸನಾ

ಪೂಷಸಂಜ್ಞಾ—ಹಸ್ತಿಜಿಹ್ವಾ, ಪೂಷಾ ಎಂಬ ನಾಡಿಗಳೆರಡು ೨. ೮ ನಾಗ ವ್ಯಾನೌ— ನಾಗ-ವ್ಯಾನಗಳೆಂಬ ವಾಯುಗಳೆರಡು ೨. ೯ ಪಾದಾಕ್ಷಿ—ಪಾದೇಂದ್ರಿಯ-ಚಕ್ಷುರಿಂದ್ರಿಯಗಳೆಂಬ ಎರಡು ಇಂದ್ರಿಯಗಳು ೨. ೧೦ ರೂಪಾಹ್ವಯ ವಿಷಯಗತಾ—ರೂಪವೆಂಬ ಒಂದು ವಿಷಯವು ೧. ೧೧ ಗುಣಾಃ-ತ್ರಿಃ?—ರೂಪ-ಸ್ಪರ್ಶ-ಶಬ್ದಗಳೆಂಬ ಗುಣಗಳು ಮೂರು ೩. ೧೨ ರುದ್ರಃ—ರುದ್ರನೆಂಬ ಕಾರಣೇಶ್ವರನು, ಇತ್ಥಂ (ಧ್ಯಾತ್ವಾ)—ಈ ರೀತಿಯಾಗಿ ತತ್ತ್ವಾದಿಗಳನ್ನೊಳಗೊಂಡಿರುವ ವಿದ್ಯಾಕಲೆಯನ್ನು ಧ್ಯಾನಮಾಡಿ, (ಆವಾಹನಾದಿ)—ಆವಾಹನ ಮೊದಲಾದ ಉಪಚಾರಗಳನ್ನು, (ಕುರ್ಯಾತ್)—ಮಾಡಬೇಕು.

ವಿದ್ಯಾಕಲೆಯಲ್ಲಿ ೧ ಪುರುಷತತ್ತ್ವ ಮೊದಲುಗೊಂಡು ಮಾಯಾತತ್ತ್ವದ ವರೆಗೆ ಆಗುವ ಏಳು ತತ್ತ್ವಗಳೂ, ೨ ವಾಮಭುವನ ಮೊದಲುಗೊಂಡು ಅಂಗುಷ್ಠಮಾತ್ರಭುವನದವರೆಗೆ ಆಗುವ ಇಪ್ಪತ್ತೇಳು ಭುವನಗಳೂ, ೩ ಇಕಾರ ಮೊದಲು ಘಕಾರದವರೆಗೆ ಆಗುವ ಏಳು ವರ್ಣಗಳೂ, ೪ ವ್ಯೋಮ್ನೇ, ಎಂಬ ಪದದಿಂದ ಓಂಕಾರದವರೆಗೆ ಆಗುವ ಇಪತ್ತು ಪದಗಳೂ, ೫ ಅಘೋರಮಂತ್ರ ಶಿಖಾಮಂತ್ರಗಳೆಂಬ ಎರಡು ಮಂತ್ರಗಳೂ, ೬ ಮಕಾರರೇಫಗಳೆಂಬ ಎರಡು ಬೀಜಾಕ್ಷರಗಳೂ, ೭ ರೂಪ-ಸ್ಪರ್ಶ-ಶಬ್ದಗಳೆಂಬ ಮೂರು ಗುಣಗಳೂ, ೮ ರೂಪವೆಂಬ ಒಂದು ವಿಷಯವೂ, ೯ ನಾಗವ್ಯಾನಗಳೆಂಬ ಎರಡು ವಾಯುಗಳೂ, ೧೦ ಹಸ್ತಿಜಿಹ್ವಾ, ಪೂಷಾ ಎಂಬ ಎರಡು ನಾಡಿಗಳೂ, ೧೧ ಪಾದೇಂದ್ರಿಯ ಚಕ್ಷುರಿಂದ್ರಿಯಗಳೆಂಬ ಎರಡು ಇಂದ್ರಿಯಗಳೂ, ೧೨ ರುದ್ರನೆಂಬ ಕಾರಣೇಶ್ವರನೂ ಅಡಗಿರುವುವು.

ಮತ್ತು—ಈ ತೈಜಸಮಂಡಲವು ಕೆಂಪುಬಣ್ಣವುಳ್ಳದಾಗಿಯೂ, ದಹಿಸುವ ಸ್ವಭಾವವುಳ್ಳದಾಗಿಯೂ, ತ್ರಿಕೋಣಾಕಾರವಾಗಿಯೂ, ಸ್ವಸ್ತಿಕಚಿಹ್ನಾಂಕಿತವಾಗಿಯೂ, ಹತ್ತುಸಾವಿರಕೋಟಿಯೋಜನದ ಔನ್ನತ್ಯವುಳ್ಳದಾಗಿಯೂ, ಸುಷುಪ್ತ್ಯವಸ್ಥೆಯುಳ್ಳದಾಗಿಯೂ ಇರುವುದೆಂದು ಧ್ಯಾನಿಸಿ ಶಿಷ್ಯನ ದೇಹದಲ್ಲಿ ಹೃದಯಪ್ರದೇಶದಿಂದ ನಾಭಿಪ್ರದೇಶದವರೆಗೆ ಪಾಶಸೂತ್ರದಲ್ಲಿ ಆಚಾರ್ಯನು ನ್ಯಾಸಮಾಡಬೇಕು. ||೧೦೦||

**ಅವತರಣಿಕೆ**— ಶಾಂತಿಕಲೆಯಲ್ಲಿ ಅಡಗಿರುವ ತತ್ತ್ವಾದಿ ಹನ್ನೆರಡು ಪದಾರ್ಥಗಳ ವಿವರವನ್ನು ನೂರೊಂದನೆಯ ಶ್ಲೋಕದಲ್ಲಿ ಸಂಹಾರಕ್ರಮದಿಂದ ತೋರಿಸುತ್ತಾರೆ. ಹೇಗೆಂದರೆ—

**ವಿದ್ಯಾ ಈಶಸದಾಶಿವೌ ಚ ಗಖಕಾಶ್ಶಾಂತೌ ನೃವರ್ಮೇ ಮನೂ**
**ವಾಮಾಖ್ಯಾದಿಸದಾಶಿವಾಂತಭುವನಾನೀಶೋಽಧಿಪೋ ಬಿಂದುಯೌ।**
**ಧ್ಯಾನಾಹಾರಮುಖೋ ಯಶಾ ಚ ಗಗನವ್ಯಾಪ್ಯಂತಿಮೋಽಲಂಬುಸಾ**
**ಸ್ಪರ್ಶಾರಾವಗುಣೌ ಚ ಕೂರ್ಮಕೃಕರೌ ಸ್ಪರ್ಶಶ್ಚ ಪಾಣಿತ್ವಚೌ ॥೧೦೧॥**

**ಟೀಕೆ**— ಶಾಂತೌ—ಶಾಂತಿಕಲೆಯಲ್ಲಿ, ೧ ವಿದ್ಯಾ—ಶುದ್ಧವಿದ್ಯೆ, ಈಶ ಸದಾಶಿವೌ ಚ—ಈಶ್ವರ-ಸದಾಶಿವ ಎಂಬ ಮೂರು ತತ್ತ್ವಗಳು ೩. ೨ ಗಖಕಾಃ —ಗಕಾರ-ಖಕಾರ-ಕಕಾರಗಳೆಂಬ ಮೂರು ವರ್ಣಗಳು ೩. ೩ ನೃವರ್ಮೇ-ಮನೂ —ತತ್ಪುರುಷಮಂತ್ರ-ಕವಚಮಂತ್ರಗಳೆಂಬ ಎರಡು ಮಂತ್ರಗಳು ೨. ೪ ವಾಮಾ ಖ್ಯಾದಿಸದಾಶಿವಾಂತಭುವನಾನಿ—ವಾಮಾಭುವನಮೊದಲುಗೊಂಡು ಸದಾಶಿವ ಭುವನದವರೆಗೆ ಆಗುವ ಭುವನಗಳು ಹದಿನೆಂಟು ೧೮. ೫ ಈಶಃ-ಅಧಿಪಃ— ಈಶ್ವರನೆಂಬ ಕಾರಣೇಶ್ವರನೊಬ್ಬನು ೧. ೬ ಬಿಂದುಯೌ—ಬಿಂದುಯಕಾರಗ ಳೆಂಬ ಎರಡು ಬೀಜಾಕ್ಷರಗಳು ೨. ೭ ಧ್ಯಾನಾಹಾರಮುಖಃ—ಧ್ಯಾನಾಹಾರ ಪದಮೊದಲುಗೊಂಡು, ಗಗನವ್ಯಾಪ್ಯಂತಿಮಃ—ವ್ಯೋಮವ್ಯಾಪಿಪದದವರೆಗೆ ಆಗುವ ಪದಗಳು ಹನ್ನೊಂದು ೧೧. ೮ ಅಲಂಬುಸಾ ಯಶಾ ಚ—ಅಲಂಬುಸೆ ಯೆಂಬ ಮತ್ತು ಯಶಸ್ವಿನಿಯೆಂಬ ಎರಡು ನಾಡಿಗಳು ೨. ೯ ಸ್ಪರ್ಶಾರಾವಗುಣೌ —ಸ್ಪರ್ಶ-ಶಬ್ದಗಳೆಂಬ ಎರಡು ಗುಣಗಳು ೨. ೧೦ ಕೂರ್ಮಕೃಕರೌ—ಕೂರ್ಮ- ಕೃಕರ ಎಂಬ ಎರಡು ವಾಯುಗಳು ೨. ೧೧ ಸ್ಪರ್ಶಃ—ಸ್ಪರ್ಶವೆಂಬ ಒಂದು ವಿಷಯವು ೧. ೧೨ ಪಾಣಿತ್ವಚೌ—ಪಾಣೀಂದ್ರಿಯ-ತ್ವಗಿಂದ್ರಿಯ ಎಂಬ ಎರಡು ಇಂದ್ರಿಯಗಳು ೨. (ಇತ್ಥಂ ಧ್ಯಾತ್ವಾ)—ಈ ರೀತಿಯಾಗಿ ತತ್ತ್ವಾದಿಗಳನ್ನೊಳ ಗೊಂಡಿರುವ ಶಾಂತಿಕಲೆಯನ್ನು ಧ್ಯಾನಮಾಡಿ, (ಆವಾಹನಾದಿ)—ಆವಾಹನ ಮೊದಲಾದ ಉಪಚಾರಗಳನ್ನು, (ಕುರ್ಯಾತ್)—ಮಾಡಬೇಕು.

ಶಾಂತಿಕಲೆಯಲ್ಲಿ—೧ ಶುದ್ಧವಿದ್ಯಾತತ್ತ್ವ ಈಶ್ವರತತ್ತ್ವ, ಸದಾಶಿವ ತತ್ತ್ವಗಳೆಂಬ ಮೂರು ತತ್ತ್ವಗಳೂ, ೨ ವಾಮಾಭುವನಮೊದಲು ಸದಾಶಿವ ಭುವನದವರೆಗೆ ಆಗುವ ಹದಿನೆಂಟು ಭುವನಗಳೂ, ೩-ಗ-ಖ-ಕ-ಎಂಬ ಮೂರು ವರ್ಣಗಳೂ, ೪ ಧ್ಯಾನಾಹಾರಪದಮೊದಲುಗೊಂಡು ವ್ಯೋಮವ್ಯಾಪಿಪದದವರೆಗೆ ಆಗುವ ಹನ್ನೊಂದು ಪದಗಳೂ, ೫ ತತ್ಪುರುಷ-ಕವಚ ಎಂಬ ಎರಡು ಮಂತ್ರ ಗಳೂ, ೬ ಬಿಂದುಯಕಾರಗಳೆಂಬ ಎರಡು ಬೀಜಾಕ್ಷರಗಳೂ, ೭ ಸ್ಪರ್ಶಶಬ್ದಗ ಳೆಂಬ ಎರಡು ಗುಣಗಳೂ, ೮ ಸ್ಪರ್ಶವೆಂಬ ಒಂದು ವಿಷಯವೂ, ೯ ಕೂರ್ಮ

ಕೃಕರ ಎಂಬ ಎರಡು ವಾಯುಗಳೂ, ೧೦ ಅಲಂಬುಸಾ-ಯಶಸ್ವಿನೀ ಎಂಬ ಎರಡು ನಾಡಿಗಳೂ, ೧೧ ಪಾಣಿ-ತ್ವಕ್ ಎಂಬ ಎರಡು ಇಂದ್ರಿಯಗಳೂ, ೧೨ ಮಹೇಶ್ವರನೆಂಬ ಕಾರಣೇಶ್ವರನೂ ಅಡಗಿರುವುವು.

ಮತ್ತು ಈ ವಾಯವೀಯಮಂಡಲವು ಕಪ್ಪುಬಣ್ಣವುಳ್ಳದಾಗಿಯೂ, ಚಂಚಲವಾಗಿಯೂ, ಷಟ್ಕೋಣವಾಗಿಯೂ, ಆರು ಬಿಂದುಗಳ ಚಿಹ್ನದಿಂದ ಅಂಕಿತವಾಗಿಯೂ, ಲಕ್ಷಕೋಟಿಯೋಜನದ ಔನ್ನತ್ಯವುಳ್ಳದಾಗಿಯೂ, ತುರೀಯಾವಸ್ಥೆಯುಳ್ಳದಾಗಿಯೂ, ಶ್ಯಾಮಲವಾದ ಕಾಂತಿಯುಳ್ಳದಾಗಿಯೂ ಇರುವುದೆಂದು ಧ್ಯಾನಿಸಿ ಶಿಷ್ಯನ ದೇಹದಲ್ಲಿ ಭ್ರೂಮಧ್ಯಪ್ರದೇಶದಿಂದ ಹೃದಯಪ್ರದೇಶದವರೆಗೆ ಪಾಶಸೂತ್ರದಲ್ಲಿ ಆಚಾರ್ಯನು ನ್ಯಾಸಮಾಡಬೇಕು. ||೧೦೧||

**ಅವತರಣಿಕೆ**— ಶಾಂತ್ಯತೀತಕಲೆಯಲ್ಲಿ ಅಡಗಿರುವ ತತ್ತ್ವಾದಿ ಹನ್ನೆರಡು ಪದಾರ್ಥಗಳ ವಿವರವನ್ನು ನೂರುಎರಡನೆಯ ಶ್ಲೋಕದಲ್ಲಿ ಸಂಹಾರಕ್ರಮದಿಂದ ತೋರಿಸುತ್ತಾರೆ. ಹೇಗೆಂದರೆ—

**ತತ್ತ್ವೇ ಶಕ್ತಿಶಿವೇ ವಿಸರ್ಗತ ಉಭೇಽಕಾರಾಂತಿಮಾಶ್ಚ ಸ್ವರಾ**
**ಈಶಾನಾಸ್ತ್ರಶಿವಾ ನಿವೃತ್ತಿಭುವನಾಚ್ಚಾನಾಶ್ರಿತಾಂತಾಃ ಪುರಃ ।**
**ಆದ್ಯಂ ತಾರಪದಂ ಹನಾದಯುಗಳಾತ್ಯತೀತಾ ಸದೇಶಃ ಕುಹೂ**
**ಶಾಖೀ ದೇವಧನಂಜಯೌ ರವಗುಣಃ ಶಬ್ದಶ್ಚ ವಾಕ್ಶ್ರೋತ್ರಕೇ ||೧೦೨||**

**ಟೀಕೆ**— ಅತೀತಾ—ಶಾಂತ್ಯತೀತಕಲೆಯಲ್ಲಿ ಅಡಗಿರುವ ತತ್ತ್ವಾದಿಗಳಾವುವೆಂದರೆ—೧ ಶಕ್ತಿಶಿವೇ-ತತ್ತ್ವೇ ಉಭೇ—ಶಕ್ತಿ-ಶಿವ-ಎಂಬ ಎರಡು ತತ್ತ್ವಗಳು ೨. ೨ ವಿಸರ್ಗತಃ—ಅಃ ಎಂಬ ವಿಸರ್ಗ ಮೊದಲುಗೊಂಡು, ಅಕಾರಾಂತಿಮಾಃ—ಅಕಾರದವರೆಗೆ ಆಗುವ, ಸ್ವರಾಃ—ಹದಿನಾರು ಸ್ವರಗಳೆಂಬ ವರ್ಣಗಳು ೧೬. ೩ ಈಶಾನಾಸ್ತ್ರಶಿವಾಃ—ಈಶಾನಮಂತ್ರ-ಅಸ್ತ್ರಮಂತ್ರ-ಶಿವಮಂತ್ರಗಳೆಂಬ ಮೂರು ಮಂತ್ರಗಳು ೩. ೪ ನಿವೃತ್ತಿಭುವನಾತ್—ನಿವೃತ್ತಿಯೆಂಬ ಭುವನ ಮೊದಲುಗೊಂಡು, ಅನಾಶ್ರಿತಾಂತಾಃ—ಅನಾಶ್ರಿತ ಎಂಬ ಭುವನದವರೆಗೆ ಆಗುವ, ಪುರಃ—ಹದಿನೈದು ಭುವನಗಳು ೧೫. ೫ ಆದ್ಯಂ ತಾರಪದಂ—ಮೊದಲನೆಯ ಪ್ರಣವವೆಂಬ ಒಂದು ಪದವು ೧. ೬ ಹನಾದಯುಗಳಂ—ಹಕಾರ-ನಾದಗಳೆಂಬ ಎರಡು ಬೀಜಾಕ್ಷರಗಳು ೨. ೭ ಸದೇಶಃ—ಸದಾಶಿವನೆಂಬ ಕಾರಣೇಶ್ವರನು ೧. ೮ ಕುಹೂಶಾಖೀ—ಕುಹೂ-ಶಂಖಿನೀ-ಎಂಬ ಎರಡು ನಾಡಿ

ಗಳು ೨. ೯ ದೇವಧನಂಜಯೌ—ದೇವದತ್ತ-ಧನಂಜಯ-ಎಂಬ ಎರಡು ವಾಯುಗಳು ೨. ೧೦ ರವಗುಣಃ—ಶಬ್ದವೆಂಬ ಒಂದು ಗುಣವು ೧. ೧೧ ಶಬ್ದಶ್ಚ—ಶಬ್ದವೆಂಬ ಒಂದು ವಿಷಯವು ೧. ೧೨ ವಾಕ್ಶ್ರೋತ್ರಕೇ—ವಾಗಿಂದ್ರಿಯ-ಶ್ರೋತ್ರೇಂದ್ರಿಯಗಳೆಂಬ ಎರಡು ಇಂದ್ರಿಯಗಳು, (ಇತ್ಥಂ ಧ್ಯಾತ್ವಾ) —ಈ ರೀತಿಯಾಗಿ ತತ್ತ್ವಾದಿಗಳನ್ನೊಳಗೊಂಡಿರುವ ಶಾಂತ್ಯತೀತಕಲೆಯನ್ನು ಧ್ಯಾನಮಾಡಿ, (ಆವಾಹನಾದಿ)—ಆವಾಹನವೇ ಮೊದಲಾದ ಉಪಚಾರಗಳನ್ನು, (ಕುರ್ಯಾತ್)—ಮಾಡಬೇಕು.

ಶಾಂತ್ಯತೀತಕಲೆಯಲ್ಲಿ—೧ ಶಕ್ತಿ-ಶಿವ ಎಂಬ ಎರಡು ತತ್ತ್ವಗಳೂ, ೨ ನಿವೃತ್ತಿಭುವನದಿಂದ ಅನಾಶ್ರಿತದವರೆಗೆ ಆಗುವ ಹದಿನೈದು ಭುವನಗಳೂ, ೩ ವಿಸರ್ಗಮೊದಲು ಅಕಾರದವರೆಗೆ ಆಗುವ ಹದಿನಾರು ವರ್ಣಗಳೂ, ೪ ಪ್ರಥಮ ಪ್ರಣವವೆಂಬ ಒಂದು ಪದವೂ, ೫ ಈಶಾನ-ಅಸ್ತ್ರ-ಶಿವ ಎಂಬ ಮೂರು ಮಂತ್ರಗಳೂ, ೬ ಹಕಾರ-ನಾದಗಳೆಂಬ ಎರಡು ಬೀಜಾಕ್ಷರಗಳೂ, ೭ ಶಬ್ದವೆಂಬ ಒಂದು ಗುಣವೂ, ೮ ಶಬ್ದವೆಂಬ ಒಂದು ವಿಷಯವೂ, ೯ ದೇವದತ್ತ-ಧನಂಜಯ ಎಂಬ ಎರಡು ವಾಯುಗಳೂ, ೧೦ ಕುಹೂ-ಶಂಖಿನೀ ಎಂಬ ಎರಡು ನಾಡಿಗಳೂ, ೧೧ ವಾಕ್-ಶ್ರೋತ್ರ ಎಂಬ ಎರಡು ಇಂದ್ರಿಯಗಳೂ, ೧೨ ಸದಾಶಿವನೆಂಬ ಕಾರಣೇಶ್ವರನೂ, ಅಡಗಿರುವುವು.

ಇವುಗಳೆಲ್ಲವನ್ನೂ ಶುಭ್ರವರ್ಣವುಳ್ಳವುಗಳನ್ನಾಗಿ ಧ್ಯಾನಮಾಡಿ ಶಿಷ್ಯನ ಶಿಖಾಪ್ರದೇಶಮೊದಲುಗೊಂಡು ಭ್ರೂಮಧ್ಯದವರೆಗೆ ಪಾಶಸೂತ್ರದಲ್ಲಿ ಆಚಾರ್ಯನು ನ್ಯಾಸಮಾಡಬೇಕು. ||೧೦೨||

**ಅವತರಣಿಕೆ** = ವರ್ಣಾಧ್ವ--ಪದಾಧ್ವ--ಮಂತ್ರಾಧ್ವ--ಭುವನಾಧ್ವ--ತತ್ತ್ವಾಧ್ವ-ಕಲಾಧ್ವ ಎಂಬ ಷಡಧ್ವಗಳೊಳಗೆ ವ್ಯಾಪ್ಯವ್ಯಾಪಕಭಾವವನ್ನು ತಿಳಿದುಕೊಂಡೇ ದೀಕ್ಷೆಯನ್ನು ಕೊಡಬೇಕಾಗಿರುವುದರಿಂದಲೂ, ದೀಕ್ಷೆಯನ್ನು ಸ್ವೀಕರಿಸಬೇಕಾಗಿರುವುದರಿಂದಲೂ ಅವುಗಳ ವ್ಯಾಪ್ಯವ್ಯಾಪಕಭಾವವ್ಯವಸ್ಥೆಯನ್ನು ನೂರುಮೂರನೆಯ ಪದ್ಯದಲ್ಲಿ ತೋರಿಸುತ್ತಾರೆ—

**ವ್ಯಾಪ್ಯವ್ಯಾಪಕಭಾವನಾಽತ್ರ ಹಿ ಪದೈರ್ಮಂತ್ರಾಃ ಪದಾನ್ಯಕ್ಷರೈ**
**ರ್ವರ್ಣಾಸ್ತೇ ಭುವನೈಶ್ಚ ತಾನಿ ಚ ತಥಾ ವ್ಯಾಪ್ತಾನಿ ತತ್ತ್ವೈರಿಮೇ ।**
**ವ್ಯಾಪ್ತ್ಯಾಃ ಕರ್ಮಮಲಾಖ್ಯಮೋಹಕಭವಾ ಯೇ ವ್ಯಾಪಕಾಸ್ತೇಽಪ್ಯಮೀ**
**ವ್ಯಾಪ್ಯವ್ಯಾಪಕಭಾವಗಾ ಇಹ ಕಲಾಸ್ತಾಭಿರ್ಗೃಹೀತಾ ಇಮೇ ||೧೦೩||**

**ಟೀಕೆ**= ಅತ್ರ—ಈ ಷಡಧ್ವಗಳಲ್ಲಿ, ವ್ಯಾಪ್ಯವ್ಯಾಪಕಭಾವನಾ—" ಇವು ವ್ಯಾಪ್ಯಗಳು-ಇವು ವ್ಯಾಪಕಗಳು " ಎಂದು ತಿಳಿದುಕೊಳ್ಳುವ ಕ್ರಮವೆಂತೆಂದರೆ— ಮಂತ್ರಾಃ—ಈಶಾನಾದಿಮಂತ್ರಗಳು, ಪದೈಃ—ವ್ಯೋಮವ್ಯಾಪ್ಯಾದಿಪದಗಳಿಂದ, ವ್ಯಾಪ್ತಾಃ—ವ್ಯಾಪಿಸಲ್ಪಟ್ಟಿರುವುವು. ಇದರಿಂದ—ಮಂತ್ರಗಳು ವ್ಯಾಪ್ಯಗಳೆಂದೂ ಪದಗಳು ವ್ಯಾಪಕಗಳೆಂದೂ ಹೇಳಿದಂತಾಯಿತು. ಪದಾನಿ—ಪದಗಳು, ಅಕ್ಷರೈಃ —ಅಕ್ಷರಗಳಿಂದ, ವ್ಯಾಪ್ತಾನಿ—ವ್ಯಾಪಿಸಲ್ಪಟ್ಟಿರುವುವು. ಆದುದರಿಂದ ಪದಗಳಿಗೆ ವರ್ಣಗಳು ವ್ಯಾಪಕಗಳಾಗಿರುವುವೆಂದು ಸಿದ್ಧವಾಯಿತು. ಇದರಂತೆಯೇ ಮುಂದೆಯೂ ತಿಳಿಯಬೇಕು. ತೇ ವರ್ಣಾಶ್ಚ—ಆ ವರ್ಣಗಳು, ಭುವನೈಃ— ಲೋಕಗಳಿಂದ, ವ್ಯಾಪ್ತಾಃ—ವ್ಯಾಪಿಸಲ್ಪಟ್ಟರುವುವು. ತಥಾ ತಾನಿ ಚ—ಹಾಗೆಯೇ ಆ ಭುವನಗಳು, ತತ್ತ್ವೈಃ—ತತ್ತ್ವಗಳಿಂದ, ವ್ಯಾಪ್ತಾನಿ—ವ್ಯಾಪಿಸಲ್ಪಟ್ಟಿರುವುವು. ಇಮೇ—ಈ ತತ್ತ್ವವಿಶೇಷಗಳು, ಕರ್ಮಮಲಾಖ್ಯಮೋಹಕಭವಾಃ— ಪುಣ್ಯಪಾಪರೂಪವಾದ ಕರ್ಮಗಳಿಂದಲೂ, ಆಣವಮಲದಿಂದಲೂ, ಮಾಯೆಯಿಂದಲೂ ಉಂಟಾಗಿರುವುವು. (ತತಃ)—ಆ ಕಾರಣದಿಂದಲೇ. (ತೇಷಾಂ)—ಆ ಕರ್ಮ-ಮಲ-ಮಾಯೆಗಳಿಗೆ, ವ್ಯಾಪ್ಯಾಃ—ಈ ತತ್ತ್ವವಿಶೇಷಗಳು ವಾಪ್ಯಗಳಾಗಿರುವುವು. ಕರ್ಮವು ಸುಖದುಃಖಗಳಿಗೆ ಹೇತುವಾಗಿಯೂ, ಮಲವು ಭೋಗಸಾಧನವಾಗಿಯೂ, ಮಾಯೆ ಶರೀರೇಂದ್ರಿಯಗಳಿಗೆ ಕಾರಣವಾಗಿಯೂ ಇರುವುದರಿಂದ ಅದಕ್ಕೆ ತಕ್ಕಂತೆ ಕೆಲಕೆಲವು ತತ್ತ್ವಗಳುಂಟಾಗುವುವು. ಯೇ ವ್ಯಾಪಕಾಃ— ತತ್ತ್ವಗಳಿಗೆ ಯಾವುಗಳು ವ್ಯಾಪಕಗಳೆನಿಸಿಕೊಂಡಿರುವುವೋ, ತೇಽಪ್ಯಮೀ—ಆ ಕರ್ಮಮಲಗಳೂ,. ವ್ಯಾಪ್ಯಾಃ—ವ್ಯಾಪ್ಯಗಳಾಗಿಯೇ ಆಗುವುವು. ಇಹ—ಈ ಸ್ಥಳದಲ್ಲಿ, ಕಲಾಃ—ನಿವೃತ್ತಿ-ಪ್ರತಿಷ್ಠಾ-ವಿದ್ಯಾ-ಶಾಂತಿ-ಶಾಂತ್ಯತೀತ ಎಂಬ ಐದು ಕಲೆಗಳೂ, ವ್ಯಾಪಕಭಾವಗಾಃ--ವ್ಯಾಪಕತ್ವವನ್ನು ಪಡೆದಿರುವುವು. ಅವುಗಳಲ್ಲಿಯೂ ಪೂರ್ವಪೂರ್ವಕಲೆಗೆ ಉತ್ತರೋತ್ತರಕಲೆಯು ವ್ಯಾಪಕವೆಂದು ತಿಳಿಯಬೇಕು. ಇಮೇ—ಇಲ್ಲ ಹೇಳಿದ ಕರ್ಮಾದಿಗಳೆಲ್ಲವೂ, ತಾಭಿಃ—ಆ ನಿವೃತ್ತ್ಯಾದಿ ಕಲೆಗಳಿಂದ; ಗೃಹೀತಾಃ—ವ್ಯಾಪಿಸಲ್ಪಟ್ಟಿರುವುವು. ಇದರಿಂದ—ಕಲೆಗಳು ಎಲ್ಲಕ್ಕೂ ವ್ಯಾಪಕಗಳಾಗಿರುವುವೆಂದು ಸಿದ್ಧವಾಯಿತು.

ಈ ಕಲೆಗಳು ಬಿಂದುವಿನಿಂದಲೂ, ಬಿಂದು ಶಕ್ತಿಯಿಂದಲೂ, ಶಕ್ತಿ ಶಿವನಿಂದಲೂ ವ್ಯಾಪಿಸಲ್ಪಟ್ಟಿರುವುವು. ಆದರೆ ಶಿವನು ಆವುದರಿಂದಲೂ ವ್ಯಾಪಿಸಲ್ಪಟ್ಟವನಲ್ಲ.

ಕಲೆಗಳನ್ನು ಸ್ಥಾಪಿಸಿದರೆ ತತ್ತ್ವಾದಿಗಳನ್ನು ಸ್ಥಾಪಿಸಿದಂತಾಗುವುದು. ಕಲೆಗಳನ್ನು ಶೋಧಿಸಿದರೆ ತತ್ತ್ವಾದಿಗಳನ್ನು ಶೋಧಿಸಿದಂತಾಗುವುದು. ಆದುದರಿಂದ ಕಲಾಶೋಧನೆಯನ್ನು ಆವಶ್ಯಕವಾಗಿಯೂ ಮಾಡಬೇಕೆಂದುಸಿದ್ಧವಾಯಿತು. ||೧೦೩||

**ಅವತರಣಿಕೆ—** ಅನಂತರದಲ್ಲಿ ನಿರ್ವಾಣದೀಕ್ಷೆಯನ್ನು ಸ್ವೀಕರಿಸುವ ಸಂದರ್ಭದಲ್ಲಿ—ಹಿಂದೆ ಹೇಳಿದಂತೆಯೇ ಯಾಗವೊದಲುಗೊಂಡು ಚರುಹೋಮ ಪರ್ಯಂತವಾದ ವ್ಯಾಪಾರಗಳನ್ನು ನಡೆಯಿಸಿ ಶಿಷ್ಯನಿಗೆ ಮಂಟಪಪ್ರವೇಶವೊದಲಾಗಿ ವಿಶೇಷಸಂಸ್ಕಾರಪರ್ಯಂತವಾದ ಕ್ರಿಯಾಕಲಾಪಗಳನ್ನು ನೆರವೇರಿಸಿ, ನಿರ್ವಾಣ ದೀಕ್ಷೆಯನ್ನು ನಡೆಯಿಸುವುದಕ್ಕಾಗಿ ಮೂಲಮಂತ್ರವೇ ಮೊದಲಾದ ಆ ಆ ಮಂತ್ರಗಳಿಗೆ ತರ್ಪಣ-ದೀಪನ-ಆನಂದಕರ್ಮಗಳನ್ನು ಮುಗಿಸಿ ಶಿವಾಜ್ಞೆಯನ್ನು ಪ್ರಾರ್ಥಿಸಿದಮೇಲೆ—ಶಿವಾಗ್ನಿಯ ದಕ್ಷಿಣಭಾಗದಲ್ಲಿ ಶಿಷ್ಯನನ್ನು ನಿಲ್ಲಿಸಿ, ಅವನಿಗೆ ದೇಹವಿರುತ್ತಿದ್ದರೂ ಪಾಶಗಳ ಛೇದನಭೇದನಗಳನ್ನು ಮಾಡುವುದಕ್ಕಾಗಿ ಸೂತ್ರಮಯವಾದ ದೇಹವನ್ನು ನಿರ್ಮಿಸಬೇಕು. ಅದಕ್ಕಾಗಿ ಮೂರು ಎಳೆಗಳುಳ್ಳ ಸೂತ್ರಗಳನ್ನು ಮೂರಾಗಿ ಜೋಡಿಸಿ ಅಂಥ ಪಾಶಸೂತ್ರವನ್ನು ಅಸ್ತ್ರಮಂತ್ರದಿಂದ ಪ್ರೋಕ್ಷಿಸಿ, ಕವಚಮಂತ್ರದಿಂದ ಆಚ್ಛಾದಿಸಿ, ಮೂಲಮಂತ್ರದಿಂದ ಪೂಜಿಸಿ, ಬ್ರಹ್ಮನಾಡೀರೂಪವಾದ ಅಂಥ ಪಾಶಸೂತ್ರವು ಶಿಷ್ಯನ ಶಿಖೆವೊದಲುಗೊಂಡು ದಕ್ಷಿಣಪಾದದವರೆಗೆ ಇರುವಂತೆ ಸೇರಿಸಿ ಕಟ್ಟಿದಮೇಲೆ ಪಾಶಸೂತ್ರದಲ್ಲಿರುವ ಶಿವಶಕ್ತಿಯಲ್ಲಿ ಶಿಷ್ಯನ ಚೈತನ್ಯವನ್ನು ನ್ಯಾಸಮಾಡುವ ಕ್ರಮವನ್ನು ನೂರುನಾಲ್ಕನೆಯ ಪದ್ಯದಲ್ಲಿ ತೋರಿಸುತ್ತಾರೆ.—

**ಶಿಷ್ಯಸ್ಯೋಕ್ಷಣತಾಡನೇಽಸ್ತ್ರಮನುನೋ ಹುಂ ತತ್ಪ್ರವೇಶೋ ಹೃದಾ**
**ಹ್ಯಾತ್ಮಾಕೃಷ್ಟಿಶಿಖಾಂತಸಂಗ್ರಹಬಹಿರ್ನಿಸ್ಸಾರಣೇ ಸ್ವಾತ್ಮನಿ ।**
**ನಾಸಾಪೂರಕತಃ ಪ್ರವೇಶ್ಯ ಹೃದಯೇ ನ್ಯಸ್ಯಾತ್ವ ತಥೋತ್ಕೃಷ್ಯ ತಂ**
**ಸಂಗೃಹ್ಯಾಂತತ ಏವ ಪಿಂಗಳಗತೇರ್ನಿಸ್ಸಾರ್ಯ ಶಕ್ತೌ ನ್ಯಸೇತ್ ||೧೦೪||**

**ಟೀಕೆ—** ಶಿಷ್ಯಸ್ಯ—ಈ ರೀತಿಯಲ್ಲಿ ಪಾಶಸೂತ್ರದಿಂದ ಕಟ್ಟಿರುವ ಶಿಷ್ಯನಿಗೆ, ಅಸ್ತ್ರಮನುನಾ—ಅಸ್ತ್ರಮಂತ್ರದಿಂದ, ಉಕ್ಷಣತಾಡನೇ (ಕೃತ್ವಾ)—ಹೃದಯದಲ್ಲಿ ಕುಶೋದಕದಿಂದ ಪ್ರೋಕ್ಷಣವನ್ನೂ, ಹುಂಫಡಂತವಾದ ಅಸ್ತ್ರಮಂತ್ರದಿಂದ ಹೃದಯದಲ್ಲಿಯೇ ಪುಷ್ಪದಿಂದ ತಾಡನವನ್ನೂ ಮಾಡಿ, ಹುಂ—

ಅನಂತರದಲ್ಲಿ ಆಚಾರ್ಯನಾದವನು ಹುಂಕಾರದಿಂದ ರೇಚಕವಮಾಡಿ ಅದರ ಮೂಲಕ ತಾನು ಹೊರಗೆ ಬಂದಂತೆ ಭಾವಿಸಿದ ಮೇಲೆ, ತತ್ಪ್ರವೇಶಃ—ಆ ಶಿಷ್ಯನ ಹೃದಯ ದಲ್ಲಿ ಪೂರಕದ ಮೂಲಕ ವಾಮನಾಡಿಯಿಂದ ಪ್ರವೇಶಿಸಿದಂತೆ ಭಾವನೆ ಮಾಡ ಬೇಕು. ಹೃದಾ—ಹೃದಯಮಂತ್ರದೊಡನೆ ಕೂಡಿರುವ ಸದ್ಯೋಜಾತಮಂತ್ರ ಮತ್ತು ಹುಂಫಡಂತವಾದ ಆತ್ಮಮಂತ್ರ ಇವುಗಳಿಂದ ಜ್ಯೇಷ್ಠಾಶಕ್ತಿಯಿಂದ ಅವನ ಹೃದಯಕಮಲವನ್ನು ಬಿಟ್ಟು ಸ್ವಲ್ಪ ಚಲಿಸಿ ಭೇದನವನ್ನು ಮಾಡಿದ ಮೇಲೆ, ಆತ್ಮಾಕೃಷ್ಟಿಶಿಖಾಂತಸಂಗ್ರಹಬಹಿರ್ನಿಸ್ಸಾರಣೇ ಸತಿ—ಆತ್ಮಾಕರ್ಷಣವೂ, ಶಿಷ್ಯನ ದ್ವಾದಶಾಂತದಲ್ಲಿ ಆತ್ಮವನ್ನು ತೆಗೆದುಕೊಂಡು ಹೋಗಿ ಅಲ್ಲಿಂದ ಆತ್ಮ ಮಂತ್ರದಿಂದ ಪುನಃ ಗ್ರಹಣವೂ, ಶಿಷ್ಯನ ಭ್ರೂಮಧ್ಯದವರೆಗೆ ತರುವಿಕೆಯೂ ಆದ ಮೇಲೆ, ನಾಸಾಪೂರಕತಃ—ವಾಮನಾಸಿಕೆಯ ಮೂಲಕ, ಪೂರಕವಾ ಯುವಿನಿಂದ, ಸ್ವಾತ್ಮನಿ—ತನ್ನ ಆತ್ಮದಲ್ಲಿ, ಪ್ರವೇಶ್ಯ—ಪ್ರವೇಶಗೊಳಿಸಿ, ಹೃದ ಯೇ—ತನ್ನ ಹೃದಯದಲ್ಲಿ, ನ್ಯಸ್ತ್ವಾ—ಕುಂಭಕದಿಂದ ತನ್ನ ಆತ್ಮದೊಡನೆ ಸಮಾನವಾಗುವಂತೆ ಸ್ಥಾಪಿಸಿ, ತಂ—ಅಂಥ ಶಿಷ್ಯಾತ್ಮವನ್ನು, ತಥಾ—ಹಾಗೆಯೇ ಬ್ರಹ್ಮಾದಿಕಾರಣತ್ಯಾಗಕ್ರಮದಲ್ಲಿ ಆತ್ಮಮಂತ್ರದಿಂದ ತನ್ನ ದ್ವಾದಶಾಂತದವರೆಗೆ, ಉತ್ಕೃಷ್ಯ—ತೆಗೆದುಕೊಂಡು ಹೋಗಿ, ಸಂಗೃಹ್ಯ—ಅಲ್ಲಿ ತನ್ನ ಆತ್ಮವನ್ನು ಸೇರಿಸಿ, ಅಂತತ ಏವ—ದ್ವಾದಶಾಂತದಿಂದಲೇ ಸೃಷ್ಟಿಕ್ರಮವಾಗಿ ಭ್ರೂಮಧ್ಯದಲ್ಲಿ ತಂದು, ಪಿಂಗಳಗತೇಃ—ತನ್ನ ದಕ್ಷಿಣನಾಡಿಯ ಮೂಲಕ, ನಿಸ್ಸಾರ್ಯ—ರೇಚಕ ದಿಂದ ಹೊರಪಡಿಸಿ, ಶಕ್ತೌ—ಪಾಶಸೂತ್ರದಲ್ಲಿ ವ್ಯಾಪಕವಾಗಿರುವ ಶಿವಶಕ್ತಿಯ ಲ್ಲಿ, ನ್ಯಸೇತ್—ಮಲಾದಿಪಾಶಗಳಿಂದ ಆವರಿಸಲ್ಪಟ್ಟಿರುವ ಆ ಆತ್ಮವನ್ನು ನಮೋಂತವಾದ ಆತ್ಮಮಂತ್ರದಿಂದ ನ್ಯಾಸಮಾಡಬೇಕು ||೧೦೪||

**ಅವತರಣಿಕೆ—** ಆತ್ಮನಿಗೆ ಅಗ್ನಿಯಲ್ಲಿರುವ ವಾಗೀಶ್ವರಿಯಿಂದ ಗರ್ಭಾ ಧಾನಾದಿಸಂಸ್ಕಾರಗಳು ಸಿದ್ಧಿಸುವುದಕ್ಕಾಗಿ ಹೋಮಮಾಡಬೇಕಾದ ವಿಧಿಯನ್ನು ನೂರುಐದನೆಯ ಪದ್ಯದಲ್ಲಿ ತೋರಿಸುತ್ತಾರೆ.—

**ತಸ್ಯಾ ಯೋನಿಷು ಯೋಜಿತಸ್ಯ ಯುಗಪದ್ಗರ್ಭಾಪ್ತ್ಯಯೇ ಜನ್ಮನೇ**
**ದೇಹದ್ಧರ್ಗಸ್ವಕಕರ್ಮಸಂಚಯಕೃತೇ ತದ್ಭೋಗಭುಕ್ತ್ಯೈ ಲಯೇ।**
**ಮಾಯಾಸ್ರೋತಸಿ ನಿಷ್ಕೃತೌ ಚ ಹವನಂ ತತ್ತ್ವೇ ಚ ಮೂಲೇನ ಸುಃ**
**ಪಾಶಾನಾಂ ಚ ತಿರೋಹಿತೌ ವಿಭಜನೇ ಭೇದೇ ಕಲಾಹೇತಿನಾ ||೧೦೫||**

**ಟೀಕೆ—** ಇಲ್ಲಿ—ಹಿಂದೆ ಹೇಳಿದಂತೆ ತತ್ತ್ವಾದಿಗಳೊಡನೆಯೂ, ಬ್ರಹ್ಮಾದಿಸ್ಥಾವರಾಂತವಾದ ಹದಿನಾಲ್ಕು ಭೂತಸೃಷ್ಟಿಗಳೊಡನೆಯೂ ಕೂಡಿರುವ ನಿವೃತ್ತಿಕಲೆಯನ್ನು ಜಾನುಪ್ರದೇಶದ ಕೆಳಭಾಗದಲ್ಲಿರುವ ಪಾಶಸೂತ್ರದಲ್ಲಿ ಹೃದಯಮಂತ್ರಸಹಿತವಾಗಿರುವ ಚತುರ್ಥ್ಯಂತವಾದ ನಿವೃತ್ತಿಕಲಾಬೀಜದಿಂದ ಅವಲೋಕಿಸಿ, ಅಂಕುಶಮುದ್ರೆಯಿಂದ ಪೂರಕದ ಮೂಲಕವಾಗಿ ಆಕರ್ಷಿಸಿ, ಸಂಹಾರಮುದ್ರೆಯಿಂದ ಕುಂಭಕದ ಮೂಲಕ ಸಂಗ್ರಹಿಸಿ, ರೇಚಕದ ಮೂಲಕವಾಗಿ ಉದ್ಭವಮುದ್ರೆಯಿಂದ ಕುಂಡಮಧ್ಯದಲ್ಲಿರುವ ಆಧಾರಶಕ್ತಿಯಲ್ಲಿಟ್ಟು ಪೂಜಿಸಿ, ಸ್ವಾಹಾಂತವಾದ ನಿವೃತ್ತಿಕಲಾಬೀಜದಿಂದ ಮೂರು ಸನ್ನಿಧಾನಾಹುತಿಗಳನ್ನು ಮಾಡಿ, ಅದಕ್ಕೆ ಅಧಿಪತಿಯಾದ ಬ್ರಹ್ಮನನ್ನು ಆವಾಹನಪೂರ್ವಕವಾಗಿ ಪ್ರಾರ್ಥಿಸಿ, ನಿವೃತ್ತಿಕಲೆಗೆ ವ್ಯಾಪಿಕೆಯಾಗಿರುವ ವಾಗೀಶ್ವರಿಯನ್ನೂ ವಾಗೀಶ್ವರನನ್ನೂ ಆವಾಹಿಸಿ, ಸನ್ನಿಧಾನಕ್ಕಾಗಿ ಮೂರು ಆಹುತಿಗಳನ್ನು ಕೊಡಬೇಕು. ಇದರಂತೆಯೇ ಪ್ರತಿಷ್ಠಾದಿಕಲೆಗಳಲ್ಲಿಯೂ ಆವಾಹನಾದಿಗಳನ್ನು ಮಾಡಬೇಕೆಂಬ ಈ ಅಭಿಪ್ರಾಯವನ್ನು ಸೇರಿಸಿಕೊಳ್ಳಬೇಕು. ಅದರಮೇಲೆ—ನಿವೃತ್ತಿಕಲೆಗೆ ವ್ಯಾಪಿಕೆಯಾಗಿರುವ, ತಸ್ಯಾಃ—ಆ ವಾಗೀಶ್ವರಿಯ, ಯೋನಿಷು—ನಾನಾ ಯೋನಿಗಳಲ್ಲಿ—(ನಿವೃತ್ತಿ ಮೊದಲಾದ ಕಲೆಗಳಲ್ಲಿ ಸ್ಥಾವರಾದ್ಯನೇಕಯೋನಿಗಳಿರುವುದರಿಂದ ಅಂಥ ನಿವೃತ್ತಿಕಲೆಗೆ ವ್ಯಾಪಿಕೆಯಾದ ವಾಗೀಶ್ವರಿಗೂ ಅನೇಕಯೋನಿಗಳುಂಟೆಂದು ಅಭಿಪ್ರಾಯವು.)

ಮೊದಲಿನಂತೆ ಶಿಷ್ಯನಿಗೆ ತಾಡನಾದಿಸಂಸ್ಕಾರಗಳನ್ನು ಮಾಡಿ ಆತ್ಮನನ್ನು ಗ್ರಹಿಸಿ ತನ್ನ ಹೃದಯದಲ್ಲಿ ಸ್ಥಾಪಿಸಿದಮೇಲೆ ಬ್ರಹ್ಮಾದಿಕಾರಣತ್ಯಾಗಕ್ರಮದಿಂದ ಹೊರಪಡಿಸಿ ಮಾತಾಪಿತೃಗಳ ಸಂಯೋಗವನ್ನು ಭಾವಿಸಿ, ಆತ್ಮಕ್ಕೆ ಏಕಕಾಲದಲ್ಲಿ ಸಕಲಯೋನಿಗಳಲ್ಲಿಯೂ ಆನೇಕವ್ಯಕ್ತಿರೂಪಗಳಾಗುವಂತೆ—ಯೋಜಿತಸ್ಯ—ಸೇರಿಸಲ್ಪಟ್ಟ, ನುಃ—ಶಿಷ್ಯಾತ್ಮನಿಗೆ (ಹಲವು ಬಗೆಯಾದ ಕರ್ಮಗಳಿಗೆ ಅನುಗುಣವಾಗಿ ಸ್ತ್ರೀ-ಪುರುಷ-ನಪುಂಸಕ-ಪಶುಪಕ್ಷಿಮೃಗಾದಿಸಕಲಯೋನಿಗಳಲ್ಲಿಯೂ), ಯುಗಪತ್-ಏಕಕಾಲದಲ್ಲಿಯೇ, ಗರ್ಭಾಪ್ತಯೇ—ಗರ್ಭಾಧಾನಸಿದ್ಧಿಗೋಸ್ಕರ "ಭೋ ಆತ್ಮನ್ ಗರ್ಭಾಯ ಅನಯಾ ಯುಕ್ತೋ ಭವ" ಎಂದು ಹೇಳಿ, ಮೂಲೇನ—ಮೂಲಮಂತ್ರದಿಂದ, ಹವನಂ(ಕೃತ್ವಾ)—ಹೋಮವನ್ನು ಮಾಡಿ, ಜನ್ಮನೇ—ಸಕಲಗರ್ಭಗಳಿಂದಲೂ ಹೊರಗೆ ಜನಿಸುವುದಕ್ಕಾಗಿಯೂ ಮೂಲಮಂತ್ರದಿಂದ ಹೋಮವನ್ನು ಮಾಡಬೇಕು. ದೇಹದ್ರ್ವ್ಯಸ್ವಕಕರ್ಮಸಂಚ

ಯಕೃತೇ—ಶರೀರದಿಂದ ಮಾಡಲ್ಪಟ್ಟು ವೃದ್ಧಿಹೊಂದಿರುವ ವಾಪೀಕೂಪತಟಾಕಾದಿನಿರ್ಮಾಣರೂಪವಾದ ಲೌಕಿಕಕರ್ಮರೂಪಗಳಾಗಿಯೂ, ಚತ್ವಾರಿಂಶತ್ಸಂಸ್ಕಾರರೂಪಗಳಾದ ವೈದಿಕಕರ್ಮರೂಪಗಳಾಗಿಯೂ ಇರುವ ಸ್ವೀಯಕರ್ಮಗಳ ಸಮೂಹಸಿದ್ಧಿಗಾಗಿಯೂ, ಹವನಂ (ಕೃತ್ವಾ)—ಮೂಲಮಂತ್ರದಿಂದ ಹೋಮವನ್ನು ಮಾಡಿ, ತದ್ಭೋಗಭುಕ್ತೌ—ಆ ಕರ್ಮಫಲಗಳ ಅನುಭವದಲ್ಲಿಯೂ, ಲಯೇ—ಅದರಮೇಲೆ ಅವುಗಳ ನಾಶದಲ್ಲಿಯೂ, ಹವನಂ (ಕೃತ್ವಾ)—ಮೂಲಮಂತ್ರದಿಂದ ಹೋಮವನ್ನು ಮಾಡಿ, ಮಾಯಾಸ್ರೋತಸಿ—ಮಾಯೆಯಿಂದ ಉಂಟಾದ ಭುವನಪರಂಪರೆಯಲ್ಲಿ ಈ ಆತ್ಮನಿಗೆ ಪುನಃ ಜನ್ಮವು ಬಾರದಿರುವುದಕ್ಕಾಗಿಯೂ, ನಿಷ್ಕೃತೌ—ಜಾತಿ-ಆಯುಸ್ಸು-ಭೋಗಗಳೆಂಬ ವಿಪಾಕದ ಶುದ್ಧಿಗಾಗಿಯೂ, ಹವನಂ-(ಕೃತ್ವಾ)—ಮೂಲಮಂತ್ರದಿಂದ ಹೋಮವನ್ನು ಮಾಡಿ, ತತ್ತ್ವೇ ಚ (ಶೋಧನೀಯೇ)—ಅನಂತರದಲ್ಲಿ ಅಂಥ ಕಲೆಗಳಲ್ಲಿರುವ ತತ್ತ್ವಗಳಿಗೆ ಜಲವನ್ನು ವರ್ಷಿಸಿಬಿಟ್ಟ ಮೇಘದಂತೆ ಶುದ್ಧಿಯುಂಟಾಗುವುದಕ್ಕಾಗಿ, ಹವನಂ-(ಕೃತ್ವಾ)—ಮೂಲಮಂತ್ರದಿಂದ ಹೋಮವನ್ನು ಮಾಡಿ, ಪಾಶಾನಾಂ—ಅನಂತರದಲ್ಲಿ ಮಲ-ಮಾಯಾ-ಕರ್ಮ-ಕಲೆಗಳೆಂಬ ಪಾಶಗಳ, ತಿರೋಹಿತೌ—ತಿರೋಧಾನವಿಷಯದಲ್ಲಿಯೂ, ವಿಭಜನೇ—ಪ್ರತ್ಯೇಕೀಕರಿಸುವ ವಿಷಯದಲ್ಲಿಯೂ, ಭೇದೇ—ಭೇದಿಸುವ ವಿಷಯದಲ್ಲಿಯೂ ಮಾಡಬೇಕಾದ ಹೋಮವನ್ನು ನಡೆಯಿಸಿ, ಅಸ್ತ್ರಮಂತ್ರದಿಂದ ವಿಳಾವರ್ತಿ ಅಭಿಮಂತ್ರಿಸಲ್ಪಟ್ಟ ಜ್ಞಾನಶಕ್ತಿರೂಪವಾದ ಕತ್ತರಿಯಿಂದ ಆ ಆ ಕಲಾಪಾಶಗಳ ಗ್ರಂಥಿಗಳನ್ನು, ಕಲಾಹೇತಿನಾ—ನಿವೃತ್ತ್ಯಾದಿಕಲಾಮಂತ್ರಸಹಿತವಾದ ಹುಂಫಡಂತವಾಗಿರುವ ಅಸ್ತ್ರಮಂತ್ರದಿಂದ, (ಛಿಂದ್ಯಾತ್)—ಕತ್ತರಿಸಬೇಕು ||೧೦೫||

**ಅವತರಣಿಕೆ**— ಪಾಶವನ್ನು ಛೇದಿಸಿದ ಅನಂತರದಲ್ಲಿ ಅದನ್ನು ದಹಿಸುವ ಕ್ರಿಯಾಕಲಾಪವನ್ನು ನೂರುಆರನೆಯ ಪದ್ಯದಲ್ಲಿ ತೋರಿಸುತ್ತಾರೆ.—

**ಪಾಣಿಭ್ಯಾಂ ಚ ವಿಮರ್ದನಂ ಹುತಮಥೋ ಪಾಶಾಂಕುರಾಭಾವತಃ**
**ಪ್ರಾಯಶ್ಚಿತ್ತವಿಧೌ ಚಿದೈಕ್ಯಮನನಂ ಸೂಕ್ಷ್ಮಾಂಗಶುದ್ಧ್ಯೈ ಹೃದಾ ||**
**ಶಬ್ದಾದ್ಯಷ್ಟಕಶುಲ್ಕದಾನಮಧಿಪೇಷ್ವಾತ್ಮೋದ್ಧೃತಿಶ್ಚಾರ್ಘ್ಯಕಂ**
**ವಾಗೀಶೀಶಹುತಂ ಧೃತೌ ಹೃದಣುನಾ ಮೂಲೇನ ಪೂರ್ಣಾಹುತಿಃ||೧೦೬**

**ಟೀಕೆ**— ಪಾಣಿಭ್ಯಾಂ—ಎರಡು ಕೈಗಳಿಂದಲೂ, ವಿಮರ್ದನಂ (ಕೃತ್ವಾ)—ಛೇದಿಸಿದ ಪಾಶಸೂತ್ರವನ್ನು ಹುಂಫಡಂತವಾದ ಅಸ್ತ್ರಮಂತ್ರದಿಂದ

ಮರ್ದಿಸಿ, ಹುತಂ (ಕೃತ್ವಾ)—ಅನಂತರದಲ್ಲಿ ಅದನ್ನು ಉಂಡೆಮಾಡಿ ಘೃತ ಪೂರ್ಣವಾದ ಸ್ರುಕ್ಪಾತ್ರದ ಅಗ್ರಭಾಗದಲ್ಲಿಟ್ಟು "ನಿವೃತ್ತಿಕಲಾಪಾಶಂ ಜುಹೋಮಿ" ಎಂದು ಹೇಳಿ ಹೋಮಮಾಡಿ, ಅಥೋ—ಅನಂತರದಲ್ಲಿ, ಪಾಶಾಂಕುರಾಭಾವತಃ—ತಿರುಗಿ ಪಾಶವು ಅಂಕುರಿಸದಿರುವುದಕ್ಕಾಗಿ ಹುಂಫಡಂತವಾದ ಅಸ್ತ್ರ ಮಂತ್ರದಿಂದ ಆಹುತಿಯನ್ನು ಮಾಡಿ, ಅನಂತರದಲ್ಲಿ—ಕ್ರಿಯೆಗಳ ನ್ಯೂನಾತಿರೇಕದೋಷನಿವೃತ್ತಿಗಾಗಿ, ಪ್ರಾಯಶ್ಚಿತ್ತವಿಧೌ—ಪ್ರಾಯಶ್ಚಿತ್ತವನ್ನು ನಡೆಯಿಸುವಾಗ ಅಸ್ತ್ರಮಂತ್ರದಿಂದ ಎಂಟು ಆಹುತಿಗಳನ್ನು ಮಾಡಿ, ಸಮಸ್ತಶರೀರಗಳೂ ನಶಿಸಿಹೋಗುವುದಕ್ಕಾಗಿ, ಚಿದೈಕ್ಯಮನನಂ (ಕೃತ್ವಾ)—ಚೈತನ್ಯವು ಒಂದಾಗಿಯೇ ಇರುವುದೆಂಬ ಭಾವನೆಯನ್ನು ಮಾಡಿ, ಸೂಕ್ಷ್ಮಾಂಗಶುದ್ಧೌ—ಸೂಕ್ಷ್ಮ ಶರೀರದ ಶುದ್ಧಿಯನ್ನು ಮಾಡುವಾಗ ಹೃದಾ—ಹೃದಯಮಂತ್ರದಿಂದ, ಅಧಿಪೇಷು—ನಿವೃತ್ತಿಮೊದಲಾದ ಕಲೆಗಳಿಗೆ ಅಧಿಪತಿಗಳಾಗಿರುವ ಬ್ರಹ್ಮ-ವಿಷ್ಣು-ರುದ್ರ-ಈಶ್ವರ-ಸದಾಶಿವ ಇವರಲ್ಲಿ ಶಬ್ದಾದ್ಯಷ್ಟಕ—ಶಬ್ದ-ಸ್ಪರ್ಶ-ರೂಪ-ರಸ-ಗಂಧ-ಮನೋಬುದ್ಧ್ಯಹಂಕಾರಗಳೆಂಬ, ಎಂಟನ್ನೂ ಶುಲ್ಕದಾನಂ (ಕುರ್ಯಾತ್)—ಶುಲ್ಕರೂಪವಾಗಿ ದಾನಮಾಡಬೇಕು. ಅದೆಂತೆಂದರೆ—ಹೃದಯಮಂತ್ರದಿಂದ "ಭೋ ಬ್ರಹ್ಮನ್ ಶಬ್ದಸ್ಪರ್ಶೌ ಶುಲ್ಕಂ ಗೃಹಾಣ" ಎಂದು ಹೇಳಿ ಬ್ರಹ್ಮನಲ್ಲಿ ಶಬ್ದಸ್ಪರ್ಶಗಳನ್ನು ಶುಲ್ಕವಾಗಿ ಕೊಟ್ಟು, ಅದರಂತೆಯೇ ವಿಷ್ಣುವಿನಲ್ಲಿ ರಸವನ್ನೂ, ರುದ್ರನಲ್ಲಿ ರೂಪಗಂಧಗಳನ್ನೂ, ಈಶ್ವರನಲ್ಲಿ ಬುದ್ಧ್ಯಹಂಕಾರಗಳನ್ನೂ, ಸದಾಶಿವನಲ್ಲಿ ಮನಸ್ಸನ್ನೂ ಶುಲ್ಕವಾಗಿ ಕೊಟ್ಟು, ಶಬ್ದಾದಿಗಳಿಗೆ ಕಾರಣಭೂತೆಯಾದ ಐಂದವೀಶಕ್ತಿಯನ್ನೂ ಸದಾಶಿವನಲ್ಲಿ ಒಪ್ಪಿಸಬೇಕು. ಅನಂತರದಲ್ಲಿ ನಿವೃತ್ತ್ಯಾದಿ ಕಲಾಪಾಶಸಮೂಹದಿಂದ ಬಿಡಲ್ಪಟ್ಟ, ಆತ್ಮೋದ್ಧೃತಿಃ—ಆತ್ಮನ ಉದ್ಧರಣವಾಗಬೇಕು. ಅನಂತರದಲ್ಲಿ ಆಚಾರ್ಯನು ತನ್ನ ಹೃದಯದಲ್ಲಿಟ್ಟುಕೊಂಡು ತನ್ನ ದ್ವಾದಶಾಂತದವರೆಗೆ ತೆಗೆದುಕೊಂಡುಹೋಗಿ ಶಿಷ್ಯನ ಸೂತ್ರದೇಹದಲ್ಲಿ ಸೇರಿಸಿ, ಆಪ್ಯಾಯನಕ್ಕಾಗಿ ವೌಷಡಂತವಾದ ಮೂಲಮಂತ್ರದಿಂದ, ಅರ್ಘ್ಯಕಂ—ಅರ್ಘ್ಯ ಜಲಬಿಂದುವನ್ನು ಶಿರಸ್ಸಿನಲ್ಲಿ ಪ್ರೋಕ್ಷಿಸಿ, ವಾಗೀಶೀಶಹುತಂ—ವಾಗೀಶ್ವರೀವಾಗೀಶ್ವರರಿಗಾಗಿ ಹೋಮವನ್ನು ಮಾಡಿ, ಧೃತೌ—ದೇಹಸೂತ್ರಧಾರಣಕ್ಕಾಗಿ ಆತ್ಮನಿಗೋಸ್ಕರ ಹೃದಣುನಾ—ಹೃದಯಮಂತ್ರದಿಂದ ಹೋಮವನ್ನು ಮಾಡಿ, ಮೂಲೇನ—ವೌಷಡಂತವಾದ ಮೂಲಮಂತ್ರದಿಂದ, ಪೂರ್ಣಾಹುತಿಃ (ಕಾರ್ಯಾ)—ಸಕಲಕ್ರಿಯಾಪೂರ್ತಿಗೋಸ್ಕರ ಪೂರ್ಣಾಹುತಿಯು ಮಾಡಲ್ಪಡತಕ್ಕದು. ಹೀಗೆ ತಾಡನ ಮೊದಲಾದ ಹದಿನೆಂಟು ಸಂಸ್ಕಾರಗಳನ್ನು ಮಾಡಬೇಕೆಂದು ಹೇಳಿದುದಾಯಿತು.

**ಅವತರಣಿಕೆ**— ಬ್ರಹ್ಮನೇ ಮೊದಲಾಗಿರುವ ಕಾರಣೇಶ್ವರರೈವರಲ್ಲಿ ಶಬ್ದ-ಸ್ಪರ್ಶ-ಮೊದಲಾದ ಪುರ್ಯಷ್ಟಕಗಳನ್ನು ಶುಲ್ಕರೂಪವಾಗಿ ಸಮರ್ಪಿಸಬೇಕೆಂಬುದಕ್ಕೆ ಕಾರಣವನ್ನು ನೂರೇಳನೆಯ ಶ್ಲೋಕದಲ್ಲಿ ತೋರಿಸುತ್ತಾರೆ.—

**ಶ್ರೋತ್ರಾದ್ಯೈರ್ವಿಪ್ಲುತೌ ತತ್ಸ್ವಪತಿಕಸಹಿತಕ್ರವ್ಯಭಕ್ಷೋದ್ಭವತ್ವಂ**
**ಸ್ಯಾದ್ದೇಯಂ ತನ್ನಿವೃತ್ತ್ಯೈ ತದಧಿಪತಿಷು ಚ ಸ್ಪರ್ಶಶಬ್ದಾದಿ ಶುಲ್ಕಂ ।**
**ಶಬ್ದಸ್ಪರ್ಶಾದಿರೂಪಾಸ್ತನುತರತನುಗಾಶ್ಶೋಧನೇ ರೋಧಿನೋ ವಾ**
**ಬ್ರಹ್ಮಾದ್ಯೇ ಕಾರಣೇ ಸ್ಯಾಚ್ಛಿವಪದಗಮನೇ ದೇಯಮೇತಚ್ಚ**
**ತೃಪ್ತ್ಯೈ ॥೧೦೭॥**

**ಟೀಕೆ**— ಶ್ರೋತ್ರಾದ್ಯೈಃ—ಶ್ರೋತ್ರಮೊದಲಾದ ಇಂದ್ರಿಯಗಳಿಂದ, ವಿಪ್ಲುತೌ (ಸತ್ಯಾಂ)—ವಿಹಿತಕರ್ಮಗಳ ಅನನುಷ್ಠಾನವೂ ನಿಷಿದ್ಧಕರ್ಮಗಳ ಅನುಷ್ಠಾನವೂ ಸಂಭವಿಸಿರುವುದಾದರೆ, ತತ್‌ಸ್ವಪತಿಕಸಹಿತಕ್ರವ್ಯಭಕ್ಷೋದ್ಭವತ್ವಂ—ಅಂಥ ಶ್ರೋತ್ರಾದೀಂದ್ರಿಯಗಳಿಗೆ ವಿಷಯಗಳಾದ ಶಬ್ದಾದಿಗಳ ಅಧಿಪತಿಗಳಾದ ಬ್ರಹ್ಮಾದಿಗಳ ಅಂಶಗಳೊಡನೆ ಕೂಡಿರುವ ರಾಕ್ಷಸರ ಜನ್ಮವು, (ಸ್ಯಾತ್)—ಆಗುವುದು. ತನ್ನಿವೃತ್ತ್ಯೈ—ಅಂಥ ರಾಕ್ಷಸಜನ್ಮದ ನಿವೃತ್ತಿಗಾಗಿ, ತದಧಿಪತಿಷು—ಅಂಥ ಶಬ್ದಾದಿಗಳಿಗೆ ಅಧಿಪತಿಗಳಾದ ಬ್ರಹ್ಮಾದಿಗಳಲ್ಲಿ, ಸ್ಪರ್ಶಶಬ್ದಾದಿ ಶುಲ್ಕಂ—ಸ್ಪರ್ಶ-ಶಬ್ದ-ಮುಂತಾದ ಶುಲ್ಕವು, ದೇಯಂ—ಕೊಡಲ್ಪಡತಕ್ಕುದು. ಶಬ್ದಸ್ಪರ್ಶಾದಿರೂಪಾಃ—ಶಬ್ದ-ಸ್ಪರ್ಶ-ಮೊದಲಾದ ಎಂಟರ ಸ್ವರೂಪಗಳೇ, ತನುತರತನುಗಾಃ—ಪುರ್ಯಷ್ಟಕವೆಂಬ ಸೂಕ್ಷ್ಮಶರೀರದ ಆಕಾರಗಳಾಗಿರುವುವು. ಶೋಧನೇ—ಪೃಥಿವ್ಯಾದಿತತ್ತ್ವಗಳನ್ನು ಶುದ್ಧಿಮಾಡುವ ವಿಷಯದಲ್ಲಿ, ರೋಧಿನಃ—ಇವು ತಡೆಯಾಗಿರುವುವು. ಆದುದರಿಂದ, ಶಿವಪದಗಮನೇ—ಶಿವಪದಪ್ರಾಪ್ತಿ ವಿಷಯದಲ್ಲಿ, ಬ್ರಹ್ಮಾದ್ಯೇ ಕಾರಣೇ—ಬ್ರಹ್ಮ-ವಿಷ್ಣು-ರುದ್ರ-ಮಹೇಶ್ವರ-ಸದಾಶಿವರೆಂಬ ಕಾರಣೇಶ್ವರರೈವರಲ್ಲಿ, ತೃಪ್ತ್ಯೈ—ಅವರಿಗೆ ಸಂತೋಷವುಂಟಾಗುವುದಕ್ಕಾಗಿ, ಏತತ್—ಈ ಶಬ್ದಸ್ಪರ್ಶಾದಿರೂಪವಾದ ಶುಲ್ಕವು, ದೇಯಂ—ಕೊಡಲ್ಪಡತಕ್ಕುದು.

ಇಲ್ಲಿ—ಶಬ್ದವೆಂಬುದು ಶ್ರೋತ್ರೇಂದ್ರಿಯದ ಸ್ಖಾಲಿತ್ಯದಿಂದ ಉಂಟಾದುದಾಗಿರುವುದು ; ಸ್ಪರ್ಶವೆಂಬುದು ತ್ವಗಿಂದ್ರಿಯದ ಸ್ಖಾಲಿತ್ಯದಿಂದ ಉಂಟಾದುದಾಗಿರುವುದು ; ಪಾಣಿ-ಪಾದ-ಪಾಯು-ಉಪಸ್ಥ-ಇವುಗಳ ಸ್ಖಾಲಿತ್ಯವೂ ಸ್ಪರ್ಶಕ್ಕೆ ಸೇರಿದುದಾದಕಾರಣ ತ್ವಗಿಂದ್ರಿಯದಲ್ಲಿ ಅಂತರ್ಭವಿಸುವುದು ; ವಾಗಿಂದ್ರಿಯ

ಸ್ವಾಲಿತ್ಯವು ಶಬ್ದಕ್ಕೆ ಸೇರಿದುದಾದಕಾರಣ ಶ್ರೋತ್ರೇಂದ್ರಿಯದಲ್ಲಿ ಅಂತರ್ಭವಿಸು ವುದು. ಶಬ್ದಸ್ಪರ್ಶಗಳೆರಡೂ ಬ್ರಹ್ಮಾಂಶಗಳಾದುದರಿಂದ ಅವುಗಳನ್ನು ಬ್ರಹ್ಮ ನಲ್ಲಿ ಶುಲ್ಕವಾಗಿ ಸಮರ್ಪಿಸಬೇಕು. ಅದರಂತೆಯೇ ರಸನೇಂದ್ರಿಯದ ಸ್ವಾಲಿತ್ಯ ದಿಂದ ಉಂಟಾದ ರಸವು ವಿಷ್ಣ್ವಂಶವಾದುದರಿಂದ ಅದನ್ನು ವಿಷ್ಣುವಿನಲ್ಲಿಯೂ, ನೇತ್ರೇಂದ್ರಿಯಘ್ರಾಣೇಂದ್ರಿಯಗಳ ಸ್ವಾಲಿತ್ಯದಿಂದ ಉಂಟಾದ ರೂಪಗಂಧಗ ಳೆರಡೂ ರುದ್ರಾಂಶಗಳಾದುದರಿಂದ ಅವುಗಳನ್ನು ರುದ್ರನಲ್ಲಿಯೂ, ಬುದ್ಧ್ಯಹಂ ಕಾರಗಳು ಈಶ್ವರಾಂಶಗಳಾದುದರಿಂದ ಅವುಗಳನ್ನು ಈಶ್ವರನಲ್ಲಿಯೂ, ಮನಸ್ಸು, ಮತ್ತು ಸಮಸ್ತವಿಕಾರಗಳನ್ನೂ ಉಂಟುಮಾಡುವ ಬಿಂದುಶಕ್ತಿ—ಈ ಎರಡೂ ಸದಾಶಿವಾಂಶಗಳಾದುದರಿಂದ ಅವುಗಳನ್ನು ಸದಾಶಿವನಲ್ಲಿಯೂ ಅರ್ಪಿಸಬೇಕೆಂದು ತಿಳಿಯಬೇಕು. ||೧೦೭||

**ಅವತರಣಿಕೆ**— ಪೃಥಿವೀತತ್ತ್ವಮೊದಲುಗೊಂಡು ಮಾಯಾತತ್ತ್ವದ ವರೆಗೆ ವ್ಯಾಪಕವಾಗಿರುವ ಆತ್ಮತತ್ತ್ವದಲ್ಲಿಯೂ, ಅದರಮೇಲೆ ಸದಾಶಿವತತ್ತ್ವ ದವರೆಗೆ ವ್ಯಾಪಕವಾಗಿರುವ ಶಿವತತ್ತ್ವದಲ್ಲಿಯೂ ಸಂಭವಿಸಿರುವ ಕ್ರಿಯಾಲೋಪ ಮಂತ್ರಲೋಪ ಭಾವನಾಲೋಪಗಳ ಪರಿಹಾರಕ್ಕಾಗಿ ಮೂಲಮಂತ್ರದಿಂದ ಪ್ರತ್ಯೇ ಕವಾಗಿ ನೂರು ನೂರು ಆಹುತಿಗಳನ್ನು ಮಾಡಬೇಕೆಂದು ನೂರೆಂಟನೆಯ ಶ್ಲೋಕ ದಲ್ಲಿ ತೋರಿಸುತ್ತಾರೆ.—

**ಮಾಯಾಂತಾತ್ಮಾಖ್ಯತತ್ತ್ವೇ ವಿಕಲವಿಧಿಹೃತೌ ಭಾಷ್ಯಕೋಚ್ಚಾರ**
**ತೋಽಣೋಃ**
**ಸಾದೇಶಾಖ್ಯಾಂತವಿದ್ಯಾತ್ಮನಿ ಮನುವಿಕಲೋಚ್ಚಾರತೋಪಾಂಶು**
**ಸಂಜ್ಞಾತ್ ।**
**ತತ್ತ್ವೇ ಶಕ್ತ್ಯಂತಶೈವೇ ಮನಸಿ ಕಿಲ ಗುರೋರ್ಭಾವನಾಹಾನಿನಾಶೇ**
**ಪ್ಯುಚ್ಚಾರಾನ್ಮಾನಸಾತ್ತಚ್ಛಿವಮನುವಿಷಯಾಣ್ಯಾಹುತೀನಾಂ**
**ಶತಾನಿ ||೧೦೮||**

**ಟೀಕೆ**— ಮಾಯಾಂತಾತ್ಮಾಖ್ಯತತ್ತ್ವೇ—ಪೃಥಿವೀತತ್ತ್ವಮೊದಲು ಗೊಂಡು ಮಾಯಾತತ್ತ್ವದವರೆಗೆ ವ್ಯಾಪಕವಾಗಿರುವ ಆತ್ಮನೆಂಬ ತತ್ತ್ವದಲ್ಲಿ ಸಂಭವಿಸಿರುವ, ವಿಕಲವಿಧಿಹೃತೌ—ಕ್ರಿಯಾಲೋಪದ ಪರಿಹಾರವಿಷಯದಲ್ಲಿ; ಅಣೋಃ—ಮೂಲಮಂತ್ರದ, ಭಾಷ್ಯಕೋಚ್ಚಾರತಃ—ತನಗೂ ಇತರರಿಗೂ ಸ್ವಲ್ಪ ಕೇಳಿಸುವಂಥ ಉಚ್ಚಾರಣೆಯಿಂದಲೂ, ಸಾದೇಶಾಖ್ಯಾಂತವಿದ್ಯಾತ್ಮನಿ—

ಅದರ ಮೇಲೆ ಸದಾಶಿವತತ್ತ್ವದವರೆಗೆ ವ್ಯಾಪಕವಾಗಿರುವ ವಿದ್ಯಾತತ್ತ್ವದಲ್ಲಿ ಸಂಭವಿಸಿರುವ, ಮನುವಿಕಲೇ—ಮಂತ್ರಲೋಪಪರಿಹಾರವಿಷಯದಲ್ಲಿ, ಉಪಾಂಶುಸಂಜ್ಞಾತ್—ತನಗೆ ಮಾತ್ರ ಕೇಳಿಸುವಂಥದಾಗಿರುವ, ಉಚ್ಚಾರತಃ—ಉಚ್ಚಾರಣೆಯಿಂದಲೂ, ಶಕ್ತ್ಯಂತಶ್ಶೈವೇ ತತ್ತ್ವೇ—ಅದರ ಮೇಲೆ ಶಕ್ತಿತತ್ತ್ವದವರೆಗೆ ವ್ಯಾಪಕವಾಗಿರುವ ಶಿವತತ್ತ್ವದಲ್ಲಿ ಸಂಭವಿಸಿರುವ, ಗುರೋರ್ಮನಸಿ ಭಾವನಾಹಾನಿನಾಶೇ—ಶಿವಗುರುವಿನ ಮಾನಸವಾದ ಭಾವನೆಯ ಲೋಪದ ಪರಿಹಾರವಿಷಯದಲ್ಲಿ, ಮಾನಸಾದುಚ್ಚಾರಾದಪಿ—ತನಗೂ ಕೇಳಿಸದಂಥ ಮಾನಸಿಕೋಚ್ಚಾರಣೆಯಿಂದಲೂ, ತಚ್ಛಿವಮನುವಿಷಯಾಣಿ—ಅಂಥ ಶಿವಮಂತ್ರವಿಷಯಗಳಾದ, ಆಹುತೀನಾಂ ಶತಾನಿ—ಪ್ರತ್ಯೇಕವಾಗಿ ನೂರು ನೂರು ಆಹುತಿಗಳನ್ನು, (ಕುರ್ಯಾತ್)—ಮಾಡಬೇಕು. ||೧೦೮||

**ಅವತರಣಿಕೆ**— ದೀಕ್ಷಾವಸಾನದಲ್ಲಿ ಪೂರ್ಣಾಹುತಿಯನ್ನು ಮಾಡುವುದಕ್ಕಾಗಿ ಶಿವಭಾವನೆಯನ್ನು ನಡೆಯಿಸುವ ಕ್ರಮವನ್ನು ನೂರೊಂಬತ್ತನೆಯ ಶ್ಲೋಕದಲ್ಲಿಯೂ, ಅದರ ಮೇಲೆ ಸ್ರುಕ್ಕಿನಲ್ಲಿ ಷಡಧ್ವನ್ಯಾಸವನ್ನು ಮಾಡಿ ಶಕ್ತಿ-ಶಿವ-ಇವರಿಬ್ಬರ ಆವಾಹನೆಯನ್ನು ಮಾಡುವ ಕ್ರಮವನ್ನು ನೂರುಹತ್ತನೆಯ ಶ್ಲೋಕದಲ್ಲಿಯೂ ತೋರಿಸುತ್ತಾರೆ.—

**ಶುದ್ಧಾಧ್ವಾದಿಮತತ್ತ್ವಯಾಗವಸುಧಾಬಿಂದ್ವಾಖ್ಯತತ್ತ್ವಾಸನೋ**
**ನಾದೇಂಧ್ಯಾದಿಕಲಾಢ್ಯದೇಹಕರಣಶ್ಶರ್ವೈಕಧೀರ್ದೇಶಿಕಃ ।**
**ಶಕ್ತಿರ್ಧೀಸ್ಸಮನಾಂತರಾಳ್ಯಕರಣಶ್ಶುದ್ಧಾತ್ಮತತ್ತ್ವೇನ್ಮನಾ**
**ವಿದ್ಯೋರ್ಧ್ವಸ್ಥಶಿವಾಖ್ಯತತ್ತ್ವನಿಚಿತಂ ಶೈವಂ ವಿಭಾವ್ಯ ಸ್ವಯಂ ||೧೦೯||**

**ಟೀಕೆ**— ದೇಶಿಕಃ—ಆಚಾರ್ಯನಾದವನು, ಶರ್ವೈಕಧೀಸ್ಸನ್—ಪರಮೇಶ್ವರಧ್ಯಾನದಲ್ಲಿಯೇ ಸ್ಥಿರವಾಗಿರುವ ಚಿತ್ತವೃತ್ತಿಯುಳ್ಳವನಾಗಿಯೂ, ಶುದ್ಧಾಧ್ವಾದಿಮತತ್ತ್ವಯಾಗವಸುಧಾಬಿಂದ್ವಾಖ್ಯತತ್ತ್ವಾಸನಃ—ಶುದ್ಧಾಧ್ವದಲ್ಲಿ ಮೊದಲನೆಯ ತತ್ತ್ವವಾದ ಶುದ್ಧವಿದ್ಯೆಯೆಂಬ ಮಾನಸಿಕಶಿವಪೂಜಾಸ್ಥಾನದಲ್ಲಿ ಬಿಂದುತತ್ತ್ವವೆಂಬ ಆಸನವುಳ್ಳವನಾಗಿಯೂ, ನಾದೇಂಧ್ಯಾದಿಕಲಾಢ್ಯದೇಹಕರಣಃ—ಇಂಧಿಕೆ ಮೊದಲಾದ ನಾದಕಲೆಗಳೇನು—ವ್ಯಾಪಿನಿ ಮೊದಲಾಗಿ ಅನಾಶ್ರಿತೆಯವರೆಗೆ ಇರುವ ಕಲೆಗಳೇನು ಇವುಗಳೆಂಬ ಶರೀರವೂ ಬಾಹ್ಯೇಂದ್ರಿಯಗಳೂ ಉಳ್ಳವನಾಗಿಯೂ, ಶಕ್ತಿರ್ಧೀಃ—ಶಕ್ತಿಯೆಂಬ ಬುದ್ಧಿಯುಳ್ಳವ

ನಾಗಿಯೂ, ಸಮನಾಂತರಾಳ್ಯಕರಣಃ—ಸಮನೆಯೆಂಬ ಅಂತಃಕರಣವುಳ್ಳವನಾಗಿ ಯೂ ಇದ್ದುಕೊಂಡು, ಶುದ್ಧಾತ್ಮತತ್ತ್ವೇನ್ಮನಾವಿದ್ಯೋರ್ಧ್ವಗಸ್ಥಶಿವಾಖ್ಯತತ್ತ್ವ ನಿಚಿತಂ ಶೈವಂ—ಶುದ್ಧತತ್ತ್ವವೇ ಆತ್ಮತತ್ತ್ವವಾಗಿಯೂ, ಉನ್ಮನಿಯೇ ವಿದ್ಯಾತತ್ತ್ವವಾಗಿಯೂ, ಅದರ ಮೇಲೆ ಇರುವ ಶಿವನೇ ಶಿವತತ್ತ್ವವಾಗಿಯೂ ಹೀಗೆ ಮೂರು ತತ್ತ್ವಗಳಿಂದ ಪೂರ್ಣವಾಗಿರುವಂಥದಾಗಿ, ಶೈವಂ—ಶಿವಸ್ವರೂಪ ವನ್ನು ಮನಸ್ಸಿನಿಂದ ಧ್ಯಾನಿಸುವಾಗ ಪೃಥಿವ್ಯಾದಿತತ್ತ್ವಗಳನ್ನು ಬಿಟ್ಟು ಶುದ್ಧ ವಿದ್ಯಾತತ್ತ್ವವನ್ನೇ ಪೂಜಾಸ್ಥಾನವನ್ನಾಗಿ, ಸ್ವಯಂ ವಿಭಾವ್ಯ—ತಾನು ಭಾವನೆಮಾಡಿ,—

**ಆಜ್ಯಾಢ್ಯಾಂ ನಿಹಿತಸ್ರುವಾಂ ಸ್ರುಚಮಧಶ್ಶಂಖಾಖ್ಯಯಾದಾಯ ಚ**
**ಪ್ರೋತ್ಥಾಯೋದ್ಗತಪೂರ್ವಕಾಯಸಮಪಾತ್ಸ್ರುಙ್ಮೂಲನಾಭಿಃ ಸ್ಮರೇತ್ ।**
**ಪಂಚಾಧಾರಸಮುಸ್ಥಿತಾಧ್ವನಿಚಯಂ ಸ್ರುಕ್ಕುಂಭದಂಡಾಗ್ರಖ**
**ಗ್ರೀವಾಂಶೇಷು ಚ ಶಕ್ತಿಮಾಜ್ಯಸರಣೌ ವಕ್ತ್ರೇ ಶಿವಂ ಸ್ರುಙ್ಮಯಂ॥೧೧೦॥**

ಟೀಕೆ= ಆಜ್ಯಾಢ್ಯಾಂ—ತುಪ್ಪದಿಂದ ತುಂಬಿರುವ, ಅಧಃ ನಿಹಿತಸ್ರುವಾಂ —ಮೇಲೆ ಅಧೋಮುಖವಾಗಿ ಇಡಲ್ಪಟ್ಟ ಸ್ರುವವೆಂಬ ಹೋಮಪಾತ್ರವುಳ್ಳ, ಸ್ರುಚಂ—ಸ್ರುಕ್ಕೆಂಬ ಹೋಮಪಾತ್ರವನ್ನು, ಶಂಖಾಖ್ಯಯಾ—ಶಂಖವೆಂಬ ಹೆಸ ರುಳ್ಳ ಮುದ್ರೆಯಿಂದ, ಆದಾಯ—ತೆಗೆದುಕೊಂಡು, ಪ್ರೋತ್ಥಾಯ—ಮೇಲಕ್ಕೆ ಎದ್ದು ನಿಂತುಕೊಂಡು, ಉದ್ಗತಪೂರ್ವಕಾಯಸಮಪಾತ್—ಬಗ್ಗಿಸದೆ ನೆಟ್ಟಗೆ ನಿಂತಿರುವ ಶರೀರದ ಮೇಲುಭಾಗವುಳ್ಳವನಾಗಿಯೂ, ಸರಿಯಾಗಿ ಜೋಡಿಸಿಕೊಂ ಡಿರುವ ಎರಡು ಕಾಲುಗಳುಳ್ಳವನಾಗಿಯೂ, ಸ್ರುಙ್ಮೂಲನಾಭಿಃ—ಸ್ರುಕ್ಕಿನ ಮೂಲಪ್ರದೇಶದೊಡನೆ ಕೂಡಿರುವ ನಾಭಿಯುಳ್ಳವನಾಗಿಯೂ, ಸ್ರುಕ್ಕುಂ ಭದಂಡಾಗ್ರಖಗ್ರೀವಾಂಶೇಷು—ಸ್ರುಕ್ಕಿನ ಕೆಳಭಾಗದಲ್ಲಿರುವ ಕುಂಭವೇನು ವೃತ್ತಾಕಾರವಾದ ದಂಡವೇನು, ಗಿಂಡಿಯೇನು, ವೇದಿಯ ಕಂಠವೇನು ಇವುಗ ಳೆಂಬ ಸ್ಥಾನಗಳಲ್ಲಿ, ಪಂಚಾಧಾರಸಮುಸ್ಥಿತಾಧ್ವನಿಚಯಂ—ಮಂಡಲ-ಅಗ್ನಿ-ಕುಂಭ-ಶಿಷ್ಯ-ಸ್ವಾತ್ಮ ಎಂಬ ಐದು ಸ್ಥಾನಗಳಲ್ಲಿಯೂ, ಹೆಚ್ಚುಕಡಿಮೆಯಿಲ್ಲದೆ ಸರಿ ಯಾಗಿರುವ ಕಲೆ-ತತ್ತ್ವ ಮೊದಲಾದ ಷಡಧ್ವಸಮೂಹವನ್ನು ಧ್ಯಾನಮಾಡಿ ಆವಾಹಿಸಿ, ಆಜ್ಯಸರಣೌ—ತುಪ್ಪದ ಧಾರೆ ಬೀಳುವ ದಾರಿಯಲ್ಲಿ, ಶಕ್ತಿಂ—ಶಕ್ತಿ ಯನ್ನೂ, ವಕ್ತ್ರೇ—ಸ್ರುಕ್ಕಿನ ಮುಖದಲ್ಲಿ, ಸ್ರುಙ್ಮಯಂ—ಸ್ರುಕ್ಸ್ವರೂಪನಾಗಿ

ರುವ, ಶಿವಂ—ಸರ್ವವ್ಯಾಪಕನಾದ ಪರಶಿವನನ್ನೂ, ಸ್ಮರೇತ್—ಧ್ಯಾನ ಮಾಡಬೇಕು.'

ಮಂಡಲ ಮೊದಲಾದ ಐದು ಸ್ಥಾನಗಳಲ್ಲಿಯೂ ಶಿವನು ಇರುವುದರಿಂದ ಮೊದಲು ಷಡಧ್ವನ್ಯಾಸವನ್ನು ಮಾಡಿ ಶಿವನನ್ನು ಪೂಜಿಸಬೇಕು. ಶಿವನು ಮಂಡಲದಲ್ಲಿ ಸರ್ವಕರ್ಮಸಾಕ್ಷಿಯಾಗಿಯೂ, ಕುಂಭದಲ್ಲಿ ಯಾಗರಕ್ಷಕನಾಗಿಯೂ, ಅಗ್ನಿಯಲ್ಲಿ ಹೋಮಕ್ಕೆ ಅಧಿಕರಣಭೂತನಾಗಿಯೂ, ಶಿಷ್ಯದೇಹದಲ್ಲಿ ಪಾಶಮೋಚಕನಾಗಿಯೂ, ಗುರುವಿನ ದೇಹದಲ್ಲಿ ಅನುಗ್ರಹಕ್ಕೆ ಕಾರಣಭೂತನಾಗಿಯೂ ಇರುವನು. ||೧೧೧||

**ಅವತರಣಿಕೆ**— ಹೀಗೆ ಧ್ಯಾನಮಾಡಿದ ಮೇಲೆ ಪೂರ್ಣಾಹುತಿಯನ್ನು ನಡೆಯಿಸುವ ಸಮಯದಲ್ಲಿ "ಪ್ರಾಣವಿಷುವ, ಮಂತ್ರವಿಷುವ, ನಾಡೀವಿಷುವ, ಪ್ರಶಾಂತವಿಷುವ, ಶಕ್ತಿವಿಷುವ, ಕಾಲವಿಷುವ, ತತ್ತ್ವವಿಷುವ" ಎಂಬ ಏಳು ವಿಷುವಗಳ ಧ್ಯಾನಕ್ರಮವನ್ನು ನೂರುಹನ್ನೊಂದು ಮತ್ತು ನೂರುಹನ್ನೆರಡನೆಯ ಪದ್ಯಗಳಲ್ಲಿ ಹೇಳುತ್ತಾರೆ.—

**ಶಿಷ್ಯಾತ್ಮಸ್ವಮನಸ್ಸಮೀರಣಸಮಾಯೋಗೋ ಭವೇತ್ಪ್ರಾಣವಂ**
**ನಾದಾತ್ಮೈಕ್ಯವಿಚಿಂತನಂ ಮನುವಿಷುಃ ಕಂದಾನ್ಮನೂಚ್ಚಾರತಃ ।**
**ಗ್ರಂಥಿಚ್ಛೇದತ ಏವ ನಾಡಿವಿಷುವಂ ತನ್ಮಧ್ಯನಾದೋದ್ಗಮಾತ್**
**ಷಟ್ತ್ರಿಂಶತ್ತ್ವಾದಿಕಲಾಃ ಪ್ರಶಾಂತವಿಷುವಂ ಶಕ್ತೌ ಲಯಸ್ಸಪ್ತಮೇ ॥**
**ಶಕ್ತೌ ಸ ಧ್ವನಿರೂರ್ಧ್ವಮೇವ ವಿಸರೇತ್ತಚ್ಛಕ್ತಿಸಂಜ್ಞಂ ಕಲಾ**
**ಸಪ್ತೇಂದ್ವಷ್ಟದಶಪ್ರಕಲ್ಪ್ಯ ತ್ರುಟಿಭಿಶ್ಶಕ್ತೇರ್ಮನಾಂತಂ ತ್ರಿಧಾ ।**
**ತತ್ಪ್ರಾಣೇಷ್ವಪರಂ ಪರಾಪರಪರಂ ಕಾಲಾಹ್ವಯಂ ತತ್ಪರಂ**
**ತತ್ತ್ವಾಖ್ಯಂ ವಿಷುವಂ ಧ್ರುವಂ ಪರಶಿವಸ್ಥಾನಂ ತು ಚಿದ್ವ್ಯಕ್ತಿಕೃತ್||೧೧೨||**

ಟೀಕೆ—ಶಿಷ್ಯಾತ್ಮ ಸ್ವಮನಸ್ಸಮೀರಣಸಮಾಯೋಗಃ—ಶಿಷ್ಯನ ಆತ್ಮಸ್ವರೂಪವೇನು, ತನ್ನ ಮನಸ್ಸೇನು ಇವುಗಳಿಗೆ ಪ್ರಾಣವಾಯುವಿನಿಂದ ಒಂದಾಗಿ ಸಂಯೋಜನಮಾಡುವಿಕೆ, ಪ್ರಾಣವಂ—ಮೊದಲನೆಯದಾದ ಪ್ರಾಣವೆಂಬ ವಿಷುವವಾಗಿ, ಭವೇತ್—ಆಗುವುದು. ||೧|| ಕಂದಾತ್—ಮೂಲಾಧಾರವೆಂಬ ಕಮಲದ ಕಂದಮೊದಲುಗೊಂಡು, ಮನೂಚ್ಚಾರತಃ—ಮಂತ್ರವನ್ನು ಉಚ್ಚರಿಸುವುದರ ಮೂಲಕ, ನಾದಾತ್ಮೈಕ್ಯವಿಚಿಂತನಂ—ಧ್ವನಿಮಧ್ಯದಲ್ಲಿ ಆತ್ಮದ ಐಕ್ಯವನ್ನು ಚಿಂತಿಸುವಿಕೆ, ಮನುವಿಷುಃ—ಎರಡನೆಯದಾದ ಮಂತ್ರ

ವಿಷುವವಾಗಿ, ಭವೇತ್—ಆಗುವುದು. ||೨|| ಗ್ರಂಥಿಚ್ಛೇದತ ಏವ—ಮೇಢ್ರ ಮೊದಲಾದ ದಶಗ್ರಂಥಿಗಳನ್ನು ಛೇದಿಸುವುದರ ಮೂಲಕ, ತನ್ಮಧ್ಯನಾದೋದ್ಗಮಃ—ಆದರ ಮಧ್ಯನಾಡಿಯಾದ ಸುಷುಮ್ನೆಯ ದಾರಿಯಿಂದ ನಾದವೇರುವಿಕೆ, ನಾಡಿವಿಷುವಂ—ಮೂರನೆಯದಾದ ನಾಡೀವಿಷುವವಾಗಿ, ಭವೇತ್—ಆಗುವುದು. ||೩|| ಷಟ್-ಆದಿಕಲಾಃ—ಅಕಾರ, ಉಕಾರ, ಮಕಾರ, ಬಿಂದು, ನಾದ, ನಾದಾಂತಗಳೆಂಬ ಆರು ಕಲೆಗಳನ್ನೂ—ಹೃದಯ-ಕಂಠ-ತಾಲು-ಭ್ರೂಮಧ್ಯ-ಬ್ರಹ್ಮರಂಧ್ರ-ದ್ವಾದಶಾಂತಗಳೆಂಬ ಆರು ಸ್ಥಾನಗಳಲ್ಲಿಯೂ—ಬ್ರಹ್ಮ-ವಿಷ್ಣು-ರುದ್ರ-ಈಶ್ವರ-ಸದಾಶಿವ-ಅನಾಹತಶಿವ ಎಂಬ ಆರು ಕಾರಣೇಶ್ವರರೊಡನೆ, ತ್ಯಕ್ತ್ವಾ—ಬಿಟ್ಟು, ಸಪ್ತಮೇ ಶಕ್ತೌ—ಏಳನೆಯದಾದ ಶಕ್ತಿಸ್ಥಾನದಲ್ಲಿ, ಲಯಃ—ಶಿಷ್ಯಾತ್ಮ ಸ್ವರೂಪವನ್ನು ಲಯಗೊಳಿಸುವಿಕೆ, ಪ್ರಶಾಂತವಿಷುವಂ—ನಾಲ್ಕನೆಯದಾದ ಪ್ರಶಾಂತವಿಷುವವಾಗಿ, ಭವೇತ್—ಆಗುವುದು. ||೪|| ಶಕ್ತೌ—ಶಕ್ತಿಮಧ್ಯದಲ್ಲಿ, ಸಃ ಧ್ವನಿಃ—ಆ ನಾದವು, ಊರ್ಧ್ವಮೇವ—ಮೇಲಕ್ಕೇ, ವಿಸರೇತ್ (ಇತಿ ಯತ್)—ಪ್ರಸರಿಸುತ್ತದೆ ಎಂಬುದು ಯಾವುದುಂಟೋ, ತತ್—ಅದು (ಆ ಪ್ರಸರಣವು) ಶಕ್ತಿಸಂಜ್ಞಂ ವಿಷುವಂ—ಐದನೆಯನಾದ ಶಕ್ತಿವಿಷುವವಾಗಿ, ಭವೇತ್—ಆಗುವುದು. ||೫|| ಶಕ್ತೇಃ—ಶಕ್ತಿಯಿಂದ ಹಿಡಿದು, ಮನಾಂತಂ—ಸಮನೆಯ ವರೆಗೆ, ಪ್ರಾಣವಾಯುಂ—ಪ್ರಾಣವಾಯುವನ್ನು, ಕಲಾಸಪ್ತೇಂದ್ವಷ್ಟದಶತ್ರುಟಿಭಿಃ—ಹದಿನಾರು-ಹದಿನೇಳು, ಹದಿನೆಂಟು ತ್ರುಟಿಗಳಿಂದ, ಪ್ರಕಲ್ಪ್ಯ—ಆ ಪ್ರಾಣಸಂಚಾರಕಾಲವನ್ನು ಉಂಟುಮಾಡಿಕೊಂಡು, ತ್ರಿಧಾ ಕೃತ್ವಾ—ಮೂರಾಗಿ ಭಾಗಿಸಿ, ತತ್ಪ್ರಾಣೇ—ಆ ಪ್ರಾಣಸಂಚಾರಕಾಲದಲ್ಲಿ, ಅಪರಂ ಪರಾಪರಂ ಪರಂ—ಅಪರಕಾಲವನ್ನೂ, ಪರಾಪರಕಾಲವನ್ನೂ, ಪರಕಾಲವನ್ನೂ ತಿಳಿದು ಸಕಲ ಕಾಲವ್ಯಾಪಿಕೆಯಾದ ಉನ್ಮನಿಯಲ್ಲಿ ಲಯಪಡಿಸುವಿಕೆ, ಕಾಲಾಹ್ವಯಂ—ಆರನೆಯದಾದ ಕಾಲವಿಷುವವಾಗಿ, ಭವೇತ್—ಆಗುವುದು. ||೬||

ಇಲ್ಲಿ—ಶಕ್ತಿಯವರೆಗೆ ಪ್ರಾಣಸಂಚಾರಕಾಲವು ಹದಿನಾರು ತ್ರುಟಿಗಳ ಕಾಲವಾಗುವುದರಿಂದ ಅದನ್ನು ಅಪರಕಾಲವೆಂಬುದಾಗಿಯೂ, ವ್ಯಾಪಿನಿಯವರೆಗೆ ಪ್ರಾಣ ಸಂಚಾರಕಾಲವು ಹದಿನೇಳು ತ್ರುಟಿಗಳ ಕಾಲವಾಗುವುದರಿಂದ ಅದನ್ನು ಪರಾಪರ ಕಾಲವೆಂಬುದಾಗಿಯೂ, ಸಮನೆಯವರೆಗೆ ಪ್ರಾಣಸಂಚಾರಕಾಲವು ಹದಿನೆಂಟು ತ್ರುಟಿಗಳ ಕಾಲವಾಗುವುದರಿಂದ ಅದನ್ನು ಪರಕಾಲವೆಂಬುದಾಗಿಯೂ ತಿಳಿಯಬೇಕು.

ತತ್ಪರಂ—ಸಮನೆಯ ಮೇಲೆ ಉನ್ಮನಾಂತದಲ್ಲಿ, ಧ್ರುವಂ—ಸ್ಥಿರವಾಗಿರುವ, ಚಿದ್ವ್ಯಕ್ತಿಕೃತ್—ಆತ್ಮಚೈತನ್ಯಕ್ಕೆ ಪ್ರಕಾಶವನ್ನುಂಟುಮಾಡುವ, ಪರಶಿವಸ್ಥಾನಂ—ಪರಶಿವನ ಸ್ಥಾನವು, ತತ್ತ್ವಾಖ್ಯಂ ವಿಷುವಂ—ಏಳನೆಯದಾದ ತತ್ತ್ವವಿಷುವವಾಗಿ, ಭವೇತ್—ಆಗುವುದು. ||೭||

ಉನ್ಮನೆಗೆ ಅನಂತರದಲ್ಲಿ ನಿಷ್ಕಳಪರಶಿವಸ್ವರೂಪದಲ್ಲಿ ಶಿಷ್ಯಾತ್ಮವನ್ನು ಸೇರಿಸುವಿಕೆ ತತ್ತ್ವವಿಷುವವಾಗುವುದೆಂದು ತಿಳಿಯಬೇಕು. ||೧೧೧|| ||೧೧೨||

**ಅವತರಣಿಕೆ**— ಹೀಗೆ ವಿಷುವಗಳೇಳನ್ನೂ ಧ್ಯಾನಿಸಿ ಸ್ರುಕ್ಕನ್ನು ಅಧ್ಯಾತ್ಮವಾಗಿ ಭಾವಿಸಿ ತತ್ತ್ವವಿಷುವದಲ್ಲಿ ಶಿಷ್ಯನ ಆತ್ಮಸ್ವರೂಪವನ್ನು ಸೇರಿಸಿ ಪೂರ್ಣಾಹುತಿಯನ್ನು ಮಾಡುವ ಕ್ರಮವನ್ನು ನೂರುಹದಿಮೂರನೆಯ ಪದ್ಯದಲ್ಲಿ ತೋರಿಸುತ್ತಾರೆ.—

**ತಸ್ಮಿನ್ ಸತ್ಸುಧಯಾಢ್ಯಕಂದಕಲಶಾನ್ನಾಡೀಸುದಂಡಾ ಸ್ವಹೃತ್**
**ಪದ್ಮಶ್ವಭ್ರುಗಳೋರ್ಧ್ವತಾಲುಸುಷಿರಾ ಬಿಂದುಸ್ರವತ್ಸ್ವಾಮೃತಾ |**
**ಸ್ರುಕ್ಚೇತ್ಯಾಂತರಭಾವನಾತ್ಸ್ರುತಘೃತಾಪಾತೇನ ಸಂಯೋಜಯೇತ್**
**ಸ್ಥಿತ್ಯರ್ಥ್ಯಾಯಾಪರಪೂರ್ಣಯಾ ಕ್ಷಣಕಲಾಲಕ್ಷ್ಯಂ ತಥಾ ಪಾತಯೇತ್ ||**
**||೧೧೩||**

**ಟೀಕೆ**— ಸ್ರುಕ್—ಸ್ರುಕ್ಪಾತ್ರವು, ನಾಡೀಸುದಂಡಾ—ಸುಂದರವಾದ ದಂಡವೆಂಬ ಮಧ್ಯನಾಡಿಯುಳ್ಳುದಾಗಿರುವುದು; ಸ್ವಹೃತ್ಪದ್ಮಶ್ವಭ್ರುಗಳೋರ್ಧ್ವತಾಲುಸುಷಿರಾ—ವೇದಿಯ ರಂಧ್ರವೆಂಬ ಹೃದಯಕಮಲವುಳ್ಳುದಾಗಿಯೂ, ಕಂಠದ ಮೇಲುಭಾಗವೆಂಬ ತಾಲುರಂಧ್ರಭಾಗವುಳ್ಳುದಾಗಿಯೂ, ಬಿಂದುಸ್ರವತ್ ಸ್ವಾಮೃತಾ ಚ—ಧಾರೆಯಾಗಿ ಬೀಳುವ ತುಪ್ಪದ ಧಾರೆಯೇ ಬಿಂದುಸ್ಥಾನದಿಂದ ಸೋರುತ್ತಿರುವ ಅಮೃತಧಾರೆಯಾಗಿ ಉಳ್ಳುದಾಗಿಯೂ ಇರುವುದು; ಇತಿ—ಈ ರೀತಿಯಲ್ಲಿ, ಆಂತರಭಾವನಾತ್—ಸ್ರುಗ್ರೂಪವನ್ನು ಅಧ್ಯಾತ್ಮವಾಗಿ ಭಾವಿಸುವುದರಿಂದ, ಸತ್ಸುಧಯಾಢ್ಯಕಂದಕಲಶಾತ್—ಶ್ಲಾಘ್ಯವಾದ ಅಮೃತದಿಂದ ಪೂರ್ಣವಾಗಿರುವ ಕಲಶವೆಂಬ ಕಂದಸ್ಥಾನದಿಂದ, ಸ್ರುತಘೃತಾಪಾತೇನ—ಬೀಳುತ್ತಿರುವ ಆಜ್ಯಧಾರೆಯಿಂದ, ತಸ್ಮಿನ್—ಚಿತ್ತಿಗೆ ಪ್ರಕಾಶವನ್ನುಂಟುಮಾಡುವ ಪರಶಿವಸ್ಥಾನವಾಗಿ ಸ್ಥಿರಪಟ್ಟಿರುವ ಆ ತತ್ತ್ವವಿಷುವದಲ್ಲಿ, ಕ್ಷಣಕಲಾಲಕ್ಷ್ಯಂ—ಸೂಕ್ಷ್ಮರೂಪವಾಗಿಯೂ ಪ್ರತ್ಯೇಕಿಸಿ ತೋರದಿರುವಂತೆ, ಸಂಯೋಜ

ಯೇತ್—ಶಿಷ್ಯಾತ್ಮವನ್ನು ಸೇರಿಸಬೇಕು. ತಥಾ—ಹಾಗೆಯೇ, ಸ್ಥೈರ್ಯಾಯ—ಸ್ಥಿರಪಟ್ಟಿರುವುದಕ್ಕಾಗಿ, ಅಪರಪೂರ್ಣಯಾ—ಅವಿಚ್ಛಿನ್ನವಾದ ಮತ್ತೊಂದು ಪೂರ್ಣಾಹುತಿಧಾರೆಯಿಂದ, ಪಾತಯೇತ್—ಆಜ್ಯವನ್ನು ಅಗ್ನಿಯಲ್ಲಿ ಬೀಳಿಸಬೇಕು. ||೧೧೩||

**ಅವತರಣಿಕೆ**= ಹೀಗೆ ಪೂರ್ಣಾಹುತಿಪರ್ಯಂತವಾದ ದೀಕ್ಷೆಯನ್ನು ಪಡೆದಿರುವ ಶಿಷ್ಯನ ಆತ್ಮಸ್ವರೂಪಕ್ಕೆ—" ಸರ್ವಜ್ಞತ್ವ, ನಿತ್ಯತೃಪ್ತತ್ವ, ಅನಾದಿಬೋಧವತ್ತ್ವ, ಸ್ವತಂತ್ರತ್ವ, ಅಲುಪ್ತಶಕ್ತಿಕತ್ವ, ಅನಂತಶಕ್ತಿಕತ್ವ " ಎಂಬ ಆರು ಗುಣಗಳು ಆವಿರ್ಭವಿಸುವ ಕ್ರಮವನ್ನು ನೂರುಹದಿನಾಲ್ಕನೆಯ ಪದ್ಯದಲ್ಲಿ ತೋರಿಸುತ್ತಾರೆ.—

**ಸೃಷ್ಟ್ಯಾಗ್ನೌ ಚ ನಿಯೋಜ್ಯ ತತ್ರ ಪರಯಾ ಶಿಷ್ಯಸ್ಯ ಚಿದ್ವ್ಯಕ್ತಿಕಾಂ**
**ಸರ್ವಜ್ಞತ್ವಸುತೃಪ್ತ್ಯನಾದಿಕಮತಿಸ್ವಾತಂತ್ರ್ಯಸಂಜ್ಞಾನಿ ಚ ।**
**ಶಕ್ತಿಂ ಪೂರ್ತಿಮತೀಮನಂತವಿಷಯಾಂ ಷಟ್ಕಂ ಗುಣಾನಾಂ ತತ**
**ಶ್ಚಾಪಾದ್ಯಾನಲತಶ್ಚಿವೇನ ಸದೃಶಂ ಶಿಷ್ಯೇ ತದಾ ಯೋಜಯೇತ್||೧೧೪||**

**ಟೀಕೆ**= ಶಿಷ್ಯಸ್ಯ—ಹೀಗೆ ಪೂರ್ಣಾಹುತಿಪರ್ಯಂತವಾದ ದೀಕ್ಷೆಯನ್ನು ಪಡೆದಿರುವ ಶಿಷ್ಯನ, ಚಿದ್ವ್ಯಕ್ತಿಕಾಂ—ಜ್ಞಾನಕ್ರಿಯಾರೂಪವಾದ ಚೈತನ್ಯ ವ್ಯಕ್ತಿಯನ್ನು, ಪರಯಾ—ಶ್ರೇಷ್ಠವಾದ, ಸೃಷ್ಟ್ಯಾ—ಸೃಷ್ಟಿಮಾರ್ಗದಿಂದ ಆಕರ್ಷಿಸಿ ತನ್ನ ಮೂಲಾಧಾರದ ಮೂಲಕ ದ್ವಾದಶಾಂತದವರೆಗೆ ತಂದು ನಾಸಿಕಾದ್ವಾರದ ಮಾರ್ಗವಾಗಿ ಪುಷ್ಪಾಂಜಲಿಯಲ್ಲಿ ಬಂದುದಾಗಿ ಭಾವಿಸಿ, ತತ್ರ—ಆ ಕುಂಡದಲ್ಲಿರುವ, ಅಗ್ನೌ—ಶಿವಾಗ್ನಿಯಲ್ಲಿ, ನಿಯೋಜ್ಯ—ಸೇರಿಸಿ (ಅನಂತರದಲ್ಲಿ ಸ್ರುವದಿಂದ ಮೂರು ಆಹುತಿಗಳನ್ನು ಮಾಡಿ), ಸರ್ವಜ್ಞತ್ವಸುತೃಪ್ತ್ಯನಾದಿಕಮತಿಸ್ವಾತಂತ್ರ್ಯಸಂಜ್ಞಾನಿ ಚ—ಸರ್ವಜ್ಞತ್ವವನ್ನೂ, ಪರಿತೃಪ್ತತ್ವವನ್ನೂ, ಅನಾದಿಬೋಧತ್ವವನ್ನೂ, ಸ್ವತಂತ್ರನಾಗಿರುವಿಕೆಯೆಂಬ ಹೆಸರುಳ್ಳ ಗುಣವನ್ನೂ, ಪೂರ್ತಿಮತೀಂ ಶಕ್ತಿಂ—ಅಲುಪ್ತಶಕ್ತಿತ್ವವನ್ನೂ, ಅನಂತವಿಷಯಾಂ ಶಕ್ತಿಂ—ಅನಂತಶಕ್ತಿತ್ವವನ್ನೂ, ಗುಣಾನಾಂ ಷಟ್ಕಂ—ಹೀಗೆ ಉಕ್ತವಾದ ಆರು ಗುಣಗಳ ಸಮಷ್ಟಿಯನ್ನು, ಆಪಾದ್ಯ—ಉಂಟುಮಾಡಿ (ಇವುಗಳು ಆತ್ಮನಿಗೆ ಸ್ವಾಭಾವಿಕ ಗುಣಗಳಾಗಿದ್ದರೂ ಅನಾದಿಯಾದ ಮಲಪಾಶದಿಂದ ತಿರೋಹಿತಗಳಾಗಿದ್ದುವಾದ ಪ್ರಯುಕ್ತ ಈಗ ಅವುಗಳ ವಿಕಾಸವನ್ನು ಉತ್ಪತ್ತಿಯಂತೆ ಹೇಳಿರುವುದು), ತತಶ್ಚ

ಅನಂತರದಲ್ಲಿ, ಅನಲತಃ—ಉಕ್ತವಾದ ಆರು ಗುಣಗಳನ್ನು ಆವಾಹನೆಮಾಡಿರುವ ಅಗ್ನಿಯಿಂದ (ತೆಗೆದು), ತದಾ—ಆ ಕಾಲದಲ್ಲಿ, ಶಿವೇನ—ಅನಾದಿಯಾಗಿಯೂ ಸ್ವಭಾವದಿಂದಲೇ ಪಾಶರಹಿತನಾಗಿರುವ ಶಿವನೊಡನೆ, ಸದೃಶಂ (ಯಥಾತಥಾ) ಸರಿಯಾಗಿರುವಂತೆ (ಆರು ಗುಣಗಳನ್ನೂ), ಶಿಷ್ಯೇ—ಶಿಷ್ಯನಲ್ಲಿ, ಯೋಜಯೇತ್—ಸೇರಿಸಬೇಕು ||೧೧೪||

**ಅವತರಣಿಕೆ**—"ಮೂರು ಪದಾರ್ಥಗಳನ್ನು ಬೋಧಿಸುವಂಥದಾಗಿಯೂ, ನಾಲ್ಕುಪಾದಗಳುಳ್ಳದಾಗಿಯೂ, ಭೋಗಮೋಕ್ಷಪ್ರದವಾಗಿಯೂ ಇರುವ ಶಿವಾಗಮಸಂಹಿತೆಗಳನ್ನು ಚೆನ್ನಾಗಿತಿಳಿದಿರುವವನು ಆಚಾರ್ಯಾಭಿಷೇಕವನ್ನು ಮಾಡಿಸಿಕೊಳ್ಳಲು ಯೋಗ್ಯನಾಗುವನು" ಎಂದು ಹೇಳಿರುವಂತೆ ಇಂಥ ಆರು ಗುಣಗಳನ್ನೂ ಸಚ್ಚರಿತ್ರವನ್ನೂ ಪಡೆದಿರುವ ಶಿಷ್ಯನಿಗೆ ಆಚಾರ್ಯಾಭಿಷೇಕವನ್ನು ಮಾಡುವ ಕ್ರಮವನ್ನು ನೂರುಹದಿನೈದನೆಯ ಪದ್ಯದಲ್ಲಿ ಉಪದೇಶಿಸುತ್ತಾರೆ.—

**ಸಿಕ್ತಃ ಪಾಶವಿಮೋಚಕೋ ಗುರುವರೋ ರತ್ನೌಷಧೀಬೀಜಕೈಃ**
**ಪೂರ್ಣೈರ್ಭೂತಘಟೈಃ ಸ್ಥಿರಾಸನಕಲಾಕ್ಲೃಪ್ತೈಸ್ಸಪಂಚಾವೃತೈಃ ।**
**ಸಬ್ರಹ್ಮಾಂಗಶಿವಾರ್ಚನಾಜಪಯುತೈರ್ದೀಕ್ಷಾಪ್ರತಿಷ್ಠಾದಿಕೇ**
**ಯೋಗ್ಯಸ್ಸ್ಯಾದ್ಗುರುಣಾ ಶಿವಾಗ್ರವಿಹಿತಪ್ರಾಪ್ತಾಜ್ಞಯೋಕ್ತ**
**ವ್ರತಃ ||೧೧೫||**

**ಟೀಕೆ**— ರತ್ನೌಷಧೀಬೀಜಕೈಃ—ಮಾಣಿಕ್ಯಮೊದಲಾದ ಪಂಚರತ್ನಗಳಿಂದಲೂ, ಸುವರ್ಣಮೊದಲಾದ ಪಂಚಲೋಹಗಳಿಂದಲೂ, ಹರಿತಾಳ ಮೊದಲಾದ ಪಂಚಧಾತುಗಳಿಂದಲೂ, ಸಹದೇವಿಮೊದಲಾದ ಓಷಧಿಗಳಿಂದಲೂ, ಶಾಲಿಮೊದಲಾದ ಬೀಜಗಳಿಂದಲೂ, ಪೂರ್ಣೈಃ—ಪ್ರತ್ಯೇಕಪ್ರತ್ಯೇಕವಾಗಿ ತುಂಬಲ್ಪಟ್ಟವುಗಳಾಗಿಯೂ, ಸ್ಥಿರಾಸನಕಲಾಕ್ಲೃಪ್ತೈಃ—ಆಧಾರಶಕ್ತಿಮೊದಲಾದ ಪೂರ್ಣಾಸನವೇನು? ಬತ್ತ, ಎಳ್ಳು ಮೊದಲಾದ ಸಪ್ತ ಧಾನ್ಯಗಳೇನು ಇವುಗಳುಳ್ಳವುಗಳಾಗಿಯೂ, ನಿವೃತ್ತಿಮೊದಲಾದ ಪಂಚಕಲೆಗಳಿಂದ ಕ್ರಮವಾಗಿ ಸ್ಥಾಪಿಸಲ್ಪಟ್ಟವುಗಳಾಗಿಯೂ, ಸಪಂಚಾವೃತೈಃ—ಪ್ರತ್ಯೇಕಪ್ರತ್ಯೇಕವಾಗಿ ಐದು ಆವರಣಗಳುಳ್ಳವುಗಳಾಗಿಯೂ, ಸಬ್ರಹ್ಮಾಂಗಶಿವಾರ್ಚನಾಜಪಯುತೈಃ—ಪಂಚಬ್ರಹ್ಮಮಂತ್ರಗಳಿಂದ ಅಭಿಮಂತ್ರಿಸಲ್ಪಟ್ಟವುಗಳಾಗಿಯೂ, ಪ್ರತ್ಯೇಕಪ್ರತ್ಯೇಕವಾಗಿ ಷಡಂಗಸಹಿತವಾದ ಶಿವಪೂಜೆಯೊಡನೆಯೂ, ಪ್ರತ್ಯೇಕಪ್ರತ್ಯೇಕವಾಗಿ ೧೧೮ ಆವರ್ತಿಯಾದ ಮೂಲಮಂತ್ರಜಪದೊಡನೆಯೂ ಕೂಡಿ

ರುವಂಥವುಗಳಾಗಿಯೂ ಇರುವ, ಭೂತಘಟೈಃ—ಪಶ್ಚಿಮ-ಉತ್ತರ-ದಕ್ಷಿಣ-ಪೂರ್ವ-ಈಶಾನ್ಯ-ಈ ಸ್ಥಾನಗಳಲ್ಲಿ ಕ್ರಮವಾಗಿ ಸ್ಥಾಪಿಸಲ್ಪಟ್ಟ ಪಂಚಬ್ರಹ್ಮಕಲಶಗಳಿಂದ (ಕಲಶತೀರ್ಥಗಳಿಂದ), ಸಿಕ್ತಃ—ಅಭಿಷೇಕಮಾಡಲ್ಪಟ್ಟವನಾಗಿಯೂ, ಗುರುಣಾ— ಆಚಾರ್ಯನಿಂದ, ಶಿವಾಗ್ರವಿಹಿತಪ್ರಾಪ್ತಾಜ್ಞಯಾ—ಸ್ಥಂಡಿಲ-ಮಂಡಲಾದಿಗಳಲ್ಲಿರುವ ಪರಶಿವನ ಸನ್ನಿಧಾನದಲ್ಲಿ ಮುಂದೆ ಈ ರೀತಿ ನಡೆದುಕೊಳ್ಳಬೇಕೆಂದು ವಿಧಿಸಲ್ಪಟ್ಟಿರುವ, ತನ್ನಿಂದ ಅಂಗೀಕರಿಸಲ್ಪಟ್ಟೂ ಇರುವ ಅಪ್ಪಣೆಯಿಂದ (ಆಜ್ಞೆಗೆ ಅನುಸಾರವಾಗಿ), ಉಕ್ತವ್ರತಃ—ಉಪದಿಷ್ಟವಾದ ವ್ರತಾಚಾರಗಳನ್ನು ತಪ್ಪದಿರುವಂಥವನಾಗಿಯೂ ಇರುವವನು, ದೀಕ್ಷಾಪ್ರತಿಷ್ಠಾದಿಕೇ—ಶೈವದೀಕ್ಷೆ-ಲಿಂಗಪ್ರತಿಷ್ಠೆ-ಪವಿತ್ರಾರೋಪಣ-ಮುಂತಾದ ಕ್ರಿಯೆಗಳಲ್ಲಿ, ಯೋಗ್ಯಃ—ಅರ್ಹನಾಗಿಯೂ, ಪಾಶವಿಮೋಚಕಃ—ಶಿಷ್ಯನ ಮಲಾದಿಪಾಶಗಳನ್ನು ತೊಲಗಿಸತಕ್ಕವನಾಗಿಯೂ ಇರುವ, ಗುರುವರಃ—ಶ್ರೇಷ್ಠನಾದ ಆಚಾರ್ಯನಾಗಿ, ಸ್ಯಾತ್—ಆಗುವನು. ||೧೧೫||

**ಅವತರಣಿಕೆ**—ಶೈವಾಗಮಗಳಲ್ಲಿ ವಿಧಿಸಿರುವ ದೀಕ್ಷೆಗಳಲ್ಲಿ ವಿಶೇಷಾಧಿಕಾರಿಗಳು ಇಂಥವರೆಂದು ತಿಳುಹಿಸುವುದಕ್ಕಾಗಿ ಸಮಸ್ತಕ್ಕೂ ಉಪಾದಾನಕಾರಣಭೂತವಾದ ಬಿಂದುಮೊದಲುಗೊಂಡು ಅನುಸರಿಸಿ ಬರುವ ಶೈವಕುಲಕ್ರಮವನ್ನು ನೂರುಹದಿನಾರನೆಯ ಶ್ಲೋಕದಲ್ಲಿ ಹೇಳುತ್ತಾರೆ. —

**ಬಿಂದೋಸ್ತತ್ಸ್ಥಮಹೇಶ್ವರಾಚ್ಛಿವಕುಲಂ ಗಾಯತ್ರಿಶಕ್ತ್ಯಂಕಿತಂ**
**ವಿದ್ಯೇಶಾದಿಸುರಕ್ರಮಾದುದಭವದ್ದೂರ್ವಾಸಸೇಹ ಕ್ಷಿತೌ ||**
**ಋಷ್ಯಾದೇಸ್ತದನುಗ್ರಹೋದಯಜುಷೋ ವರ್ಷೇಽಭವದ್ಭಾರತೇ**
**ಶ್ರೀಮನ್ಮುಖ್ಯಕದಂಬಭೂಷಣಯುತಂ ಚಾಮರ್ದಸಂಜ್ಞಾಶ್ರಮಂ||೧೧೬||**

**ಟೀಕೆ** = ಬಿಂದೋಃ—ಬಿಂದುವಿನದೆಸೆಯಿಂದ, ತತ್ಸ್ಥಮಹೇಶ್ವರಾತ್—ಅಂಥ ಬಿಂದುವಿಗೆ ಕ್ಷೋಭಕನಾದ ಮಹೇಶ್ವರನಿಂದ ಉಂಟುಮಾಡಲ್ಪಟ್ಟುದಾಗಿಯೂ, (ಇಲ್ಲಿ—ಸ್ಥಾವರಜಂಗಮರೂಪವಾದ ಸಮಸ್ತಪ್ರಪಂಚದ ಉತ್ಪತ್ತಿಗಾಗಿ ಸದಾಶಿವನು ಚಿಚ್ಛರೀರಕನಾಗಿದ್ದುಕೊಂಡು ಬಿಂದುವನ್ನು ಕ್ಷೋಭಿಸುತ್ತಾನೆಂದು ತಿಳಿಯಬೇಕು.) ಗಾಯತ್ರಿಶಕ್ತ್ಯಂಕಿತಂ—ಶೈವಗಾಯತ್ರೀಶಕ್ತಿಯಿಂದ ಅಧಿಷ್ಠಿಸಲ್ಪಟ್ಟುದಾಗಿಯೂ ಇರುವ (ಇಲ್ಲಿ—ಬಿಂದುವನ್ನು ಕ್ಷೋಭಿಸುವ ಕಾಲದಲ್ಲಿ ಶೈವಗಾಯತ್ರಿಯುಂಟಾಯಿತೆಂದೂ ಅದರಿಂದ ಶಿವಕುಲವು ಅಧಿಷ್ಠಿಸಲ್ಪಟ್ಟಿತೆಂದೂ ತಿಳಿಯಬೇಕು.) ಶಿವಕುಲಂ—ಶೈವಸಂತಾನವು, ವಿದ್ಯೇಶಾದಿಸುರಕ್ರಮಾತ್—

ಅನಂತೇಶ್ವರನೇ ಮೊದಲಾದ ಅಷ್ಟವಿದ್ಯೇಶ್ವರರ ಕ್ರಮದಿಂದ ಬಂದು—(ಇಲ್ಲಿ ಸದಾಶಿವನು ಬಿಂದುವನ್ನು ಕ್ಷೋಭಿಸುವ ಕಾಲದಲ್ಲಿ ಬೈಂದವಶರೀರಿಗಳಾದ ಅನಂತೇಶ್ವರಾದಿ ಅಷ್ಟವಿದ್ಯೇಶ್ವರರುಂಟಾದರೆಂದೂ, ಅನಂತೇಶ್ವರನಿಂದ ಬ್ರಹ್ಮಾಂಡಮಂಡಲಮಧ್ಯದಲ್ಲಿ ಕೈಲಾಸಾಧಿಪತಿಯಾಗಿ ಶ್ರೀಕಂಠರುದ್ರನುಂಟಾದನೆಂದೂ, ಶ್ರೀಕಂಠರುದ್ರನಿಂದ ವಿಷ್ಣುವೂ, ಅವನಿಂದ ಬ್ರಹ್ಮನೂ, ಅವನಿಂದ ಇಂದ್ರಾದಿಸಮಸ್ತದೇವತೆಗಳೂ ಉಂಟಾದರೆಂದೂ ಪುನಃ ಶ್ರೀಕಂಠನಿಂದ ದೂರ್ವಾಸಮಹರ್ಷಿಯುಂಟಾದನೆಂದೂ ತಿಳಿಯಬೇಕು). ದೂರ್ವಾಸಸಾ—ದೂರ್ವಾಸಮಹರ್ಷಿಯಿಂದ, ಇಹ ಕ್ಷಿತೌ—ಈ ಭೂಲೋಕದಲ್ಲಿ, ಉದಭವತ್—ಉಂಟಾಯಿತು. ತದನುಗ್ರಹೋದಯಜುಷಃ—ಆ ದೂರ್ವಾಸಮಹರ್ಷಿಯ ಸನ್ನಿಧಿಯಲ್ಲಿ ದೀಕ್ಷಾದ್ಯನುಗ್ರಹಾವಿರ್ಭಾವವನ್ನು ಪಡೆದಿರುವ, ಋಷ್ಯಾದೇಃ—ಕೌಶಿಕ-ಕಾಶ್ಯಪ-ಮೊದಲಾದ ಋಷಿಸಂತತಿಗೆ, ಭಾರತೇ ವರ್ಷೇ—ಭಾರತವರ್ಷದ ಭರತಖಂಡದಲ್ಲಿ, ಶ್ರೀಮತ್—ಭೋಗಮೋಕ್ಷಪ್ರದವಾದುದರಿಂದ ಶ್ರೇಷ್ಠವೆನಿಸಿಕೊಂಡಿರುವ, ಮುಖ್ಯಕದಂಬಭೂಷಣಯುತಂ—ಪ್ರಧಾನವಾದ ಕದಂಬವೃಕ್ಷವೆಂಬ ಅಲಂಕಾರದೊಡನೆ ಕೂಡಿರುವ, ಆಮರ್ದಸಂಜ್ಞಾಶ್ರಮಂ—ಆಮರ್ದಕವೆಂಬ ಹೆಸರುಳ್ಳ ಒಂದು ಮಠವು, ಅಭವತ್—ಉಂಟಾಯಿತು. ||೧೧೬||

**ಅವತರಣಿಕೆ**— ಈಗ ಗ್ರಂಥಕಾರರು—ಒಂದಾಗಿದ್ದ (ಅವಿಭಕ್ತವಾಗಿದ್ದ) ಆಮರ್ದಕಮಠವು ನಾಲ್ಕುಬಗೆಯಾಗಿ ವಿಭಕ್ತವಾದ ಕಾಲವನ್ನು ತಿಳಿಯಪಡಿಸಿ ಅದುಮೊದಲುಗೊಂಡು ನಡೆದುಬಂದಿರುವ ತಮ್ಮ ಸ್ಥಾನಕ್ರಮವನ್ನು ನೂರುಹದಿನೇಳನೆಯ ಪದ್ಯದಲ್ಲಿ ಹೇಳಿ ಕ್ರಿಯಾಪಾದವನ್ನು ಮುಗಿಸುತ್ತಾರೆ.—

**ತತ್ರತ್ಯಾ ಮುನಿಪಂಕ್ತಿಕಾಶ್ಚ ಮನುಜೇ ಪೈತಾಮಹಾಖ್ಯೇ ಸ್ಥಿತಾಃ**
**ಪ್ರಾಜಾಪತ್ಯಮುಖಾಶ್ಚ ಗೋಚರಯುಗಾ ಉಕ್ತಾ ಬಭೂವುಸ್ತತಃ ।**
**ಆದ್ಯಾತ್ತ್ರೇಷು ಚ ಶೌಚಸಂಯಮಯುತಾತ್ಸದ್ಗೋಚರಾದುದ್ಯಯೌ**
**ಶ್ರೀಮದ್ವ್ಯಾಪಕಶಂಭುಪೂರ್ವಗುರುಯುಕ್ಸಂತಾನಮೇವಂ ಸ್ಥಿತಂ**
**||೧೧೭||**

**ಟೀಕೆ**— ತತ್ರತ್ಯಾಃ—ಅಂಥ ಆಮರ್ದಕ ಮಠದಲ್ಲಿ ಸಂಪ್ರದಾಯಕ್ರಮವಾಗಿ ಬಂದ ಕಾಶ್ಯಪಾದಿಮಹರ್ಷಿಗಳೆಲ್ಲರೂ, ಪೈತಾಮಹಾಖ್ಯೇ ಮನುಜೇ—ಹದಿನಾಲ್ಕು ಮನುಗಳೊಳಗೆ ಮೊದಲನೆಯವನಾದ ಸ್ವಾಯಂಭುವಮನುವಿನ ಕಾಲದಲ್ಲಿ, ಮುನಿಪಂಕ್ತಿಕಾಃ ಸ್ಥಿತಾಃ—ಋಷಿಪರಂಪರೆಯಾಗಿ ಇದ್ದರು.

ತತಃ—ಅದರ ಮೇಲೆ ಎರಡನೆಯವನಾದ ಸ್ವಾರೋಚಿಷಮನುವಿನ ಕಾಲದಲ್ಲಿ, (ತೇ)— ಆ ಆಮರ್ದಕಮಠನಿವಾಸಿಗಳು, ಪ್ರಾಜಾಪತ್ಯಮುಖಾಃ—ಪ್ರಜಾಪತಿ ಗಳೆಂದು ಹೇಳಿಸಿಕೊಳ್ಳಲ್ಪಟ್ಟ, ಗೋಚರಮುಖಾಃ—ವಂಶಸಂಪ್ರದಾಯವು ನಾಲ್ಕಾಗಿ ವಿಭಕ್ತವಾದ ಮೇಲೆ, ಉಕ್ತಾಃ—ಆಮರ್ದಕ-ರಣಭದ್ರ-ಕೋಳಗಿ-ಪುಷ್ಪ ಗಿರಿ ಎಂಬ ನಾಲ್ಕು ಮಠಗಳಿಗೆ ಅಧಿಪತಿಗಳೆಂದು ಹೇಳಿಸಿಕೊಳ್ಳಲ್ಪಟ್ಟವರಾಗಿ, ಬಭೂವುಃ—ಆದರು; ತೇಷು—ಆ ನಾಲ್ಕು ಸಂಪ್ರದಾಯಗಳಲ್ಲಿ, ಶೌಚಸಂಯಮ ಯುತಾತ್—ಬಾಹ್ಯಾಭ್ಯಂತರಶುದ್ಧಿಯೊಡನೆ ಕೂಡಿರುವ, ಸದ್ಗೋಚರಾತ್— ಕಾಶ್ಯಪಭಾರದ್ವಾಜಾದಿಗೋತ್ರಸಹಿತವಾದ, ಆದ್ಯಾತ್—ಮೊದಲನೆಯದಾದ ಆಮರ್ದಕಮಠಸಂಪ್ರದಾಯದಿಂದ ಕಲಿಯುಗಾದಿಯಲ್ಲಿ, ಶ್ರೀಮತ್—ಭೋಗ ಮೋಕ್ಷಪ್ರದವಾದುದರಿಂದ ಶ್ರೀಷ್ಠವೆನಿಸಿಕೊಂಡಿರುವ, ವ್ಯಾಪಕಶಂಭುಪೂರ್ವ ಗುರುಯುಕ್ಸಂತಾನಂ—'ವ್ಯಾಪಕಶಂಭು' ಎಂಬುವರೇ ಮೊದಲಾದ ಆಚಾರ್ಯರ ಪರಂಪರೆಯು, ಉದ್ಯಯೌ—ಉಂಟಾಯಿತು. (ಇದಂ)—ಈ ಆಮರ್ದಕಮಠ ಸಂಪ್ರದಾಯಕ್ರಮವು, ಏವಂ ಸ್ಥಿತಂ—ಈ ರೀತಿಯಾಗಿ ಇದ್ದಿತು. ||೧೧೭||

**ಇತಿ ಶ್ರೀಮದ್ವಾಧೂಲಧನ್ವಿಕುಲಾವತಂಸಭೂತೇನ ಪೂರ್ವೋತ್ತರ ಮೀಮಾಂಸಾಭೂಷಣೇನ ವಿದ್ಯಾನಿಧಿನಾ ದೇವಶಿಖಾ ಮಣಿರಾಮಾನುಜಾಚಾರ್ಯೇಣ ವಿರಚಿತಾಯಾಂ ಸಿದ್ಧಾಂತಸಾರಾವಳ್ಯಾಃ ಕರ್ಣಾಟಭಾಷಾ ಮಯಸಂಕ್ಷಿಪ್ತಪದವಿವೃತೌ ಕ್ರಿಯಾ ಪಾದೋ ದ್ವಿತೀಯಃ ಸಮಾಪ್ತಃ.**

|| ಓಂ ||



# ಅಥ ಯೋಗಪಾದಃ.

---

**ಅವತರಣಿಕೆ**— ಹೀಗೆ ಕ್ರಿಯಾಪಾದದಲ್ಲಿ ದೀಕ್ಷಾಸಂಸ್ಕಾರವನ್ನು ತೋರಿಸಿ ಇಂಥ ಸಂಸ್ಕಾರದಿಂದ ಸಂಸ್ಕರಿಸಲ್ಪಟ್ಟವನಿಗೆ ಯೋಗಾಭ್ಯಾಸವನ್ನು ವಿಧಿಸುವುದಕ್ಕಾಗಿ ಈಗ ಯೋಗಪಾದವನ್ನು ಉಪಕ್ರಮಿಸಿ, ಮೊದಲು ಸುಷುಮ್ನೆ ಮೊದಲಾದ ಸಮಸ್ತನಾಡಿಗಳಿಗೂ ಉತ್ಪತ್ತಿಸ್ಥಾನವಾಗಿರುವ ಕಂದವೆಂಬ ಸ್ಥಾನ ವಿಶೇಷವನ್ನು ನೂರುಹದಿನೆಂಟನೆಯ ಶ್ಲೋಕದಲ್ಲಿ ತೋರಿಸುತ್ತಾರೆ.—

**ಕಂದೋ ನಾಭ್ಯಧ ಉತ್ಥಿತಸ್ತು ನಿಲಯೋ ನಾಡ್ಯಂಕುರಾಣಾಂ ಚ ತ**
**ನ್ಮಧ್ಯೇಽಧ್ವಾ ದ್ವಿಸಹಸ್ರಸಪ್ತತಿರಧಶ್ಚೋರ್ಧ್ವಂ ಶರೀರೇ ಸ್ಥಿತಾ ।**
**ಪಿಂಗಾ ಕಂದವಿನಿರ್ಗತಾ ಪೃಥಗಿಡಾ ದಕ್ಷೇ ಚ ವಾಮೇ ಬಿಲಾ**
**ನ್ನಾಸಾರಂಧ್ರಯುಗಾಶ್ರಿತೇ ಬಹಿರಧಸ್ತೇ ದ್ವಾದಶಾಂತಾತ್ ಸ್ಥಿತೇ॥೧೧೮॥**

**ಟೀಕೆ**= ನಾಡ್ಯಂಕುರಾಣಾಂ— ಸುಷುಮ್ನೆಮೊದಲಾದ ನಾಡಿಗಳ ಉತ್ಪತ್ತಿಗೆ, ನಿಲಯಃ—ಸ್ಥಾನವಾಗಿರುವ, ಕಂದಃ—ಕಂದವೆಂಬುದು, ನಾಭ್ಯಧಃ —ನಾಭಿಪ್ರದೇಶದ ಕೆಳಭಾಗದಲ್ಲಿ, ಉತ್ಥಿತಃ—ಉಂಟಾಗಿರುವುದು. ತನ್ಮಧ್ಯೇ —ಆ ಕಂದದ ಮಧ್ಯದಲ್ಲಿ, ಅಧ್ವಾ—ನಾಡಿಗಳ ಮಾರ್ಗವು ಇರುವುದು. ಶರೀರೇ—ಈ ಶರೀರದಲ್ಲಿ, ಅಧಃ-ಊರ್ಧ್ವಂ ಚ—ಕಂದಸ್ಥಾನದಿಂದ ಕೆಳಗೂ ಮೇಲೂ ದ್ವಿಸಹಸ್ರಸಪ್ತತಿಃ—(ನಾಡಿಗಳ) ಎಪ್ಪತ್ತೆರಡುಸಾವಿರವು, ಸ್ಥಿತಾ—ಇರುವುದು. ದಕ್ಷೇ-ವಾಮೇ ಚ—ಬಲಪಾರ್ಶ್ವದಲ್ಲಿಯೂ ಎಡಪಾರ್ಶ್ವದಲ್ಲಿಯೂ, ಪೃಥಕ್-ಕಂದವಿನಿರ್ಗತಾ—ಕಂದಸ್ಥಾನದಿಂದ ಪ್ರತ್ಯೇಕವಾಗಿ ಹೊರಟಿರುವ, ಪಿಂಗಾ-ಇಡಾ ಚ (ನಾಡ್ಯೌ)—ಪಿಂಗಳಾ--ಇಡಾ--ಎಂಬ ಎರಡು ನಾಡಿಗಳು, ಬಿಲಾತ್—ಬ್ರಹ್ಮರಂಧ್ರದವರೆಗೆ ವ್ಯಾಪಿಸಿ, ಬಹಿಃ—ಮುಖದ ಹೊರಭಾಗದಲ್ಲಿ, ನಾಸಾರಂಧ್ರಯುಗಾಶ್ರಿತೇ—ಮೂಗಿನ ಎರಡು ರಂಧ್ರಗಳನ್ನು ವ್ಯಾಪಿಸಿ ಉಚ್ಛ್ವಾಸನಿಶ್ವಾಸಗಳಿಗೆ ಸಾಧನಗಳಾಗಿರುವುವು. ಮತ್ತು ತೇ—ಆ ಎರಡು ನಾಡಿಗಳೂ, ದ್ವಾದಶಾಂತಾತ್—ಬ್ರಹ್ಮರಂಧ್ರಕ್ಕಿಂತಲೂ ಮೇಲಾಗಿರುವ ದ್ವಾದಶಾಂತಸ್ಥಾನಕ್ಕಿಂತಲೂ, ಅಧಃ ಸ್ಥಿತೇ—ಕೆಳಗೆ ಇರುವುವು.

ಕಂದವೆಂದರೆ ಗೆಣಸು ; ಗೆಣಸಿನಿಂದ ಮೊಳಕೆಗಳು ಹೊರಡುವಂತೆ ಈ ಸ್ಥಾನವಿಶೇಷದಿಂದ ಸಮಸ್ತನಾಡಿಗಳೂ ಹೊರಟಿರುವುವಾದಪ್ರಯುಕ್ತ ಇದು ಕಂದವೆಂದು ವ್ಯವಹರಿಸಲ್ಪಡುವುದು.

"ನಾಭಿಪ್ರದೇಶದ ಕೆಳಭಾಗದಲ್ಲಿ" ಎಂದು ಹೇಳಿದುದಕ್ಕೆ—"ಸ್ವಲ್ಪ ದೂರಬಿಟ್ಟು ಕೆಳಭಾಗದಲ್ಲಿ" ಎಂದು ಅಭಿಪ್ರಾಯವು. ನಾಭಿಕಮಲವು ಕಂದದಲ್ಲಿಯೇ ಉಂಟಾಗಿರುವುದೆಂದು ತೋರಿಸುವುದಕ್ಕಾಗಿಯೇ ಆ ರೀತಿ ಹೇಳಿರುವುದು. ಮನುಷ್ಯರಿಗೆ ದೇಹಮಧ್ಯದಿಂದ ಹಿಡಿದು ಮೇಲಕ್ಕೆ ಒಂಬತ್ತು ಅಂಗುಲಪ್ರಮಾಣವು ಕಂದಸ್ಥಾನವಾಗಿರುವುದೆಂದು ಶಾಸ್ತ್ರಗಳಲ್ಲಿ ಉಕ್ತವಾಗಿರುವಕಾರಣ ಮೇಢ್ರಕ್ಕಿಂತಲೂ ಕೆಳಭಾಗದಿಂದಲೇ ಕಂದವು ಆರಂಭಿಸಿರುವುದೆಂದು ತಿಳಿಯಬೇಕು.

ಪಾಯುಸ್ಥಾನಕ್ಕೆ ಎರಡಂಗುಲ ಮೇಲಾಗಿಯೂ, ಲಿಂಗಸ್ಥಾನಕ್ಕೆ ಎರಡಂಗುಲ ಕೆಳಗಾಗಿಯೂ ಮಧ್ಯದಲ್ಲಿರುವ ಒಂದಂಗುಲ ಸ್ಥಾನವು ದೇಹದ ಮಧ್ಯಸ್ಥಾನವೆನಿಸಿಕೊಳ್ಳುವುದು. ಅಲ್ಲಿಂದ ಹಿಡಿದು ಮೇಲಕ್ಕೆ ಒಂಬತ್ತು ಅಂಗುಲದವರೆಗೆ ಕೋಳಿಯ ಮೊಟ್ಟೆಯ ಆಕಾರದಿಂದ ಕಂದವು ವ್ಯಾಪಿಸಿಕೊಂಡಿರುವುದು. ಮತ್ತು ಆ ಕಂದವು ಗಾತ್ರದಲ್ಲಿ ನಾಲ್ಕಂಗುಲ ಪ್ರಮಾಣವುಳ್ಳುದಾಗಿ ಚರ್ಮ, ಮೂಳೆ ಇವುಗಳಿಂದ ಆವರಿಸಲ್ಪಟ್ಟಿರುವುದು. ಅದರ ಮಧ್ಯಭಾಗದಲ್ಲಿ ನಾಭಿ ಇರುವುದು. ಹನ್ನೆರಡು ದಳಗಳುಳ್ಳ ಚಕ್ರವು ಅಲ್ಲಿಂದ ಉಂಟಾಗಿರುವುದು. ನಾಭಿಚಕ್ರವೆಂಬುದು ಇದೇ. ತಾವರೆಯ ದಂಟಿನ ಸೂಲುಗಳಿಂದಾಗುವ ಚಕ್ರದಲ್ಲಿ ನೂಲಿನ ಹುಳವು ತಿರುಗುವಂತೆ, ಕರ್ಮಪಾಶದಿಂದ ಬದ್ಧನಾದ ಜೀವನು ಪ್ರಾಣಸಹಿತನಾಗಿ ಈ ನಾಭಿಚಕ್ರದಲ್ಲಿ ಕರ್ಮವಶದಿಂದ ಸುತ್ತುತ್ತಿರುವನು. ಈ ಚಕ್ರದಿಂದಲೇ ದೇಹವೆಂಬ ಯಂತ್ರವು ನಡೆಯಿಸಲ್ಪಡುತ್ತಿರುವುದು.

"ಕುಂಡಲಿನೀ" ಎಂಬುದು ಈ ಚಕ್ರದ ಸುತ್ತಲೂ ಎಂಟು ಕೋಣಗಳುಳ್ಳುದಾಗಿ "ಅಷ್ಟಪ್ರಕೃತಿಸ್ವರೂಪಿಣೀ" ಎಂದು ಹೇಳಿಸಿಕೊಂಡು, ನಿದ್ರೆಮಾಡುವ ಸರ್ಪಕ್ಕೆ ಸಮಾನವಾಗಿ ಕಂದಕ್ಕೂ ನಾಭಿಗೂ ಕೆಳಗಡೆಯಲ್ಲಿರುವ ರಂಧ್ರದಲ್ಲಿ ತನ್ನ ಹೆಡೆಯನ್ನಿಟ್ಟುಕೊಂಡು, ವಾಯುಮಾರ್ಗಗಳೆಲ್ಲವನ್ನೂ ತಡೆದುಕೊಂಡು, ತನ್ನ ಬಾಲದಿಂದ ತನ್ನ ಮುಖವನ್ನು ಮುಚ್ಚಿಕೊಂಡು, ಬ್ರಹ್ಮರಂಧ್ರವನ್ನೂ ಸುತ್ತಿಕೊಂಡು ಬೆನ್ನಿನ ಮೂಳೆಗಳೊಡನೆ ಸಂಯುಕ್ತವಾಗಿರುವುದು. ಕಂದಮಧ್ಯದಲ್ಲಿರುವ ನಾಭಿಯು ಅರ್ಧಚಂದ್ರಾಕಾರವಾಗಿರುವುದು.

ದೇಹದಲ್ಲಿರುವ ಎಪ್ಪತ್ತೆರಡುಸಾವಿರ ನಾಡಿಗಳೊಳಗೆ ಮೂವತ್ತೆರಡು ನಾಡಿಗಳು ಮುಖ್ಯವಾಗಿರುವುವು; ಅವುಗಳಲ್ಲಿಯೂ ಹದಿನಾಲ್ಕು ನಾಡಿಗಳು

ಮುಖ್ಯತರವಾಗಿರುವುವು ; ಅವುಗಳಲ್ಲಿಯೂ ಇಡಾ-ಪಿಂಗಳಾ-ಸುಷುಮ್ನಾ ಎಂಬ ಮೂರು ನಾಡಿಗಳು ಮುಖ್ಯತಮವಾಗಿರುವುವು. ಅವುಗಳಲ್ಲಿಯೂ ಸುಷುಮ್ನೆ ಯೆಂಬುದು ಸರ್ವೋತ್ತಮವಾದ ನಾಡಿಯಾಗಿರುವುದು.

ಇಡಾ-ಪಿಂಗಳಾ ಎಂಬ ಎರಡು ನಾಡಿಗಳೂ ಕ್ರಮವಾಗಿ ಸುಷುಮ್ನೆಯ ಎಡಭಾಗದಲ್ಲಿಯೂ ಬಲಭಾಗದಲ್ಲಿಯೂ ಸುಷುಮ್ನೆಯೊಡನೆ ಸೇರಿದುವುಗಳಾಗಿಯೇ ಇದ್ದರೂ ಪ್ರತ್ಯೇಕವಾಗಿ ಬ್ರಹ್ಮರಂಧ್ರದವರೆಗೆ ವ್ಯಾಪಿಸಿ ದ್ವಾದಶಾಂತಕ್ಕೆ ಕೆಳಭಾಗದಲ್ಲಿದ್ದುಕೊಂಡು ಹೊರಗೆ ನಾಸಾರಂಧ್ರಗಳೆರಡರಿಂದಲೂ ಉಚ್ಛ್ವಾಸ ನಿಶ್ವಾಸಗಳನ್ನು ನಡೆಯಿಸುತ್ತಿರುವುವು. ||೧೧೮||

**ಅವತರಣಿಕೆ—** ಶರೀರದ ಆದ್ಯಂತದಲ್ಲಿಯೂ ಸುಷುಮ್ನೆಯೆಂಬ ನಾಡಿಯು ವ್ಯಾಪಿಸಿಕೊಂಡಿರುವುದೆಂಬ ಅಂಶವನ್ನೂ, ಮೂಲಾಧಾರಮೊದಲುಗೊಂಡು ದ್ವಾದಶಾಂತದವರೆಗೆ ಕಮಲಗಳ ದಳಗಳ ಸಂಖ್ಯೆಯನ್ನೂ, ಪರಮಶಿವನಿಗೆ ಆಸನವಾಗಿರುವ ಕಮಲದ ಸ್ವರೂಪವನ್ನೂ ನೂರುಹತ್ತೊಂಬತ್ತನೆಯ ಮತ್ತು ನೂರು ಇಪ್ಪತ್ತನೆಯ ಶ್ಲೋಕಗಳಲ್ಲಿ ತೋರಿಸುತ್ತಾರೆ.—

**ಪಾದಾಂಗುಷ್ಠಯುಗಾಚ್ಚ ವಸ್ತಿಕಮಲಾದ್ದ್ವೇಧೈಕಥಾ ಮಧ್ಯತಃ**
**ಪಂಕ್ತ್ಯಾಧಾರಗನಾಡಿಕೋಪರಿಗತಾ ಸ್ಯಾದ್ದ್ವಾದಶಾಂತಾವಧಿ ।**
**ವಸ್ತಿರ್ವೇದಸಿರಾದಳಾಂಬುಜಯುತಾ ಕಂದಶ್ಚ ಷಟ್ಪತ್ರಗೋ**
**ನಾಭಿಃ ಪಂಕ್ತಿದಳಾ ಹೃದಷ್ಟದಳಯುಕ್ಕಂಠಃ ಕಲಾಪತ್ರಗಃ ||೧೧೯||**
**ತಾಲುರ್ವಿಂಶತಿವೇದಪತ್ರಕಮಲೋ ಭ್ರೂರ್ವೇದಪತ್ರಾ ಸ್ವರೋ**
**ರಂಧ್ರಾಬ್ಜಂ ಕಪರಂ ನವಚ್ಛದಕಜಂ ಚೋರ್ಧ್ವೇ ಸಹಸ್ರಚ್ಛದಂ ।**
**ಯುಕ್ತಂ ಶಕ್ತಿಸುಕೇಸರೈಸ್ಸಮನಯಾ ಸತ್ಕರ್ಣಿಕಾಢ್ಯಂ ರವೇಃ**
**ಸೋಮಾಗ್ನ್ಯೋಃ ಸ್ವಕಬಿಂಬಗಂ ತದುಪರಿ ವ್ಯಾಪ್ಯುನ್ಮನಾಂತೇ**
**ಶಿವಃ ||೧೨೦||**

**ಟೀಕೆ—** ಪಾದಾಂಗುಷ್ಠಯುಗಾತ್—ಎರಡು ಕಾಲುಗಳ ಎರಡು ಹೆಬ್ಬೆಟ್ಟುಗಳಿಂದ ಆರಂಭಿಸಿ, ವಸ್ತಿಕಮಲಾತ್—ಕಂದಸ್ಥಾನಕ್ಕೆ ಕೆಳಭಾಗವಾದ ವಸ್ತಿಯಲ್ಲಿರುವ ಕಮಲದವರೆಗೆ, ದ್ವೇಧಾ—ಎರಡು ಶಾಖೆಯಾಗಿಯೂ, ಮಧ್ಯತಃ—ಅದರ ಮೇಲೆ ದೇಹಮಧ್ಯದಿಂದ ಹಿಡಿದು, ಏಕಥಾ—ಮೇಲಕ್ಕೆಲ್ಲಾ ಒಂದೇ ಶಾಖೆಯಾಗಿಯೂ ಇರುವ, ಮತ್ತು ಪಂಕ್ತ್ಯಾಧಾರಗನಾಡಿಕಾ—ಮೂಲಾಧಾರವೇ

ಮೊದಲಾದ ಹತ್ತು ಆಧಾರಗಳನ್ನು ಪಡೆದಿರುವ ಸುಷುಮ್ನಾನಾಡಿಯು, ದ್ವಾದ ಶಾಂತಾವಧಿ—ದ್ವಾದಶಾಂತಸ್ಥಾನದವರೆಗೆ, ಉಪರಿ--ಗತಾ ಸ್ಯಾತ್—ಮೇಲೆ ವ್ಯಾಪಿಸಿರುವುದು. ವಸ್ತಿಃ—ಕಂದದ ಕೆಳಭಾಗದಲ್ಲಿರುವ ಮೂಲಾಧಾರವು, ವೇದಸಿರಾದಳಾಂಬುಜಯುತಾ—ನಾಲ್ಕು ನಾಡಿಗಳುಳ್ಳದಾಗಿಯೂ ನಾಲ್ಕು ದಳಗಳುಳ್ಳ ಕಮಲದೊಡನೆ ಕೂಡಿದುದಾಗಿಯೂ ಇರುವುದು. ಕಂದಶ್ಚ—ಕಂದ ಸ್ಥಾನದ ಕಮಲವು, ಷಟ್ಪತ್ರಗಃ—ಆರುದಳಗಳುಳ್ಳದಾಗಿರುವುದು. ನಾಭಿಃ—ಅದರ ಮೇಲೆ ಇರುವ ನಾಭಿಕಮಲವು, ಪಂಕ್ತಿದಳಾ—ಹತ್ತುದಳಗಳುಳ್ಳದಾ ಗಿರುವುದು. ಹೃತ್—ಹೃದಯಕಮಲವು, ಅಷ್ಟದಳಯುಕ್—ಎಂಟುದಳಗ ಳುಳ್ಳದಾಗಿರುವುದು. ಕಂಠಃ—ಕಂಠಸ್ಥಾನದಲ್ಲಿರುವ ಕಮಲವು, ಕಲಾಪತ್ರ ಗಃ—ಹದಿನಾರು ದಳಗಳುಳ್ಳದಾಗಿರುವುದು. ತಾಲುಃ—ತಾಲುಸ್ಥಾನವು, ಏಂಶತಿವೇದಪತ್ರಕಮಲಃ—ಇಪ್ಪತ್ತುನಾಲ್ಕು ದಳಗಳುಳ್ಳ ಪದ್ಮವುಳ್ಳದಾಗಿರು ವುದು. ಭ್ರೂಃ—ಭ್ರೂಮಧ್ಯದಲ್ಲಿರುವ ಕಮಲವು, ವೇದಪತ್ರಾ—ನಾಲ್ಕು ದಳಗಳುಳ್ಳದಾಗಿರುವುದು. ರಂಧ್ರಾಬ್ಜಂ—ಬ್ರಹ್ಮರಂಧ್ರಕಮಲವು, ಸ್ವರಃ—ಹದಿನಾರು ದಳಗಳುಳ್ಳದಾಗಿರುವುದು. ಕಪರಂ—ಶಿರಸ್ಸಿಗೆ ಮೇಲಿನದಾದ ಸ್ಥಾನವು, ನವಚ್ಛದಕಜಂ—ಒಂಬತ್ತುದಳಗಳುಳ್ಳ ಕಮಲವುಳ್ಳದಾಗಿರುವುದು. ಊರ್ಧ್ವೇ—ಅದರ ಮೇಲೆ ದ್ವಾದಶಾಂತದಲ್ಲಿರುವ ಕಮಲವು, ಸಹಸ್ರ ಚ್ಛದಂ—ಸಾವಿರದಳಗಳುಳ್ಳದಾಗಿರುವುದು, (ತಚ್ಚ)—ಮತ್ತು ಆ ದ್ವಾದಶಾಂತ ಕಮಲವು, ಶಕ್ತಿಸುಕೇಸರೈರ್ಯುಕ್ತಂ—ವಾಮಾದಿನವಶಕ್ತಿಗಳೆಂಬ ಕೇಸರಗ ಳೊಡನೆ ಕೂಡಿದುದಾಗಿಯೂ, ಸಮನಯಾ—ಸಮನಾಶಕ್ತಿಯಿಂದ (ಸಮನಾ ಶಕ್ತಿಯೆಂಬ), ಸತ್ಕರ್ಣಿಕಾಢ್ಯಂ—ಐವತ್ತುಬೀಜಗಳುಳ್ಳ ಕರ್ಣಿಕೆಯೊಡನೆ ಕೂಡಿ ದುದಾಗಿಯೂ, ರವೇಃ-ಸೋಮಾಗ್ನ್ಯೋಃ—ಸೂರ್ಯಚಂದ್ರಾಗ್ನಿಗಳ, ಸ್ವಕಬಿಂಬ ಗಂ—ತಮ್ಮ ತಮ್ಮ ಅಧಿಪತಿಗಳೊಡನೆ ಕೂಡಿರುವ ಮಂಡಲಗಳೊಡನೆ ಕೂಡಿದು ದಾಗಿಯೂ ಇರುವುದು. ತದುಪರಿ—ಆ ಮೂರು ಮಂಡಲಗಳಿಗಿಂತಲೂ ಮೇಲೆ, ಉನ್ಮನಾಂತೇ—ಉನ್ಮನ್ಯಂತವೆಂಬ ಶಕ್ತಿಮಂಡಲದ ಕೊನೆಯಲ್ಲಿ, ವ್ಯಾಪೀ—ಸರ್ವವ್ಯಾಪಕನಾದ, ಶಿವಃ—ಪರಮಶಿವನು, (ತಿಷ್ಠತಿ)—ಇರುತ್ತಾನೆ.

ಈ ಸುಷುಮ್ನಾನಾಡಿಯೆಂಬುದು ಕಾಲುಗಳ ಎರಡು ಅಂಗುಷ್ಠಬೆರಳುಗ ಳಿಂದ ಹಿಡಿದು ದೇಹದ ಮಧ್ಯಸ್ಥಾನವಾದ ಕಂದಸ್ಥಾನದವರೆಗೂ ಎರಡು ಶಾಖೆ ಯಾಗಿಯೂ ಅದರ ಮೇಲುಭಾಗದಲ್ಲಿ ಬ್ರಹ್ಮರಂಧ್ರಗವರೆಗೂ ಒಂದೇ ಶಾಖೆ

ಯಾಗಿಯೂ ಇರುವುದು. ಮತ್ತು ಮೂಲಾಧಾರ, ಸ್ವಾಧಿಷ್ಠಾನ, ಮಣಿಪೂರಕ, ಅನಾಹತ, ವಿಶುದ್ಧಿ, ಆಜ್ಞೆ ಎಂಬ ಆರು ಚಕ್ರಗಳೇ ಆಧಾರವಾಗಿ ಉಳ್ಳು ದಾಗಿಯೂ, ಅದರ ಮೇಲೆ ದ್ವಾದಶಾಂತದವರೆಗೆ ನಾಲ್ಕು ಚಕ್ರಗಳನ್ನು ವ್ಯಾಪಿಸಿ ದುದಾಗಿಯೂ, ಬ್ರಹ್ಮರಂಧ್ರದವರೆಗೆ ಸಕಲವೆನಿಸಿಕೊಂಡುದಾಗಿಯೂ, ಅದರ ಮೇಲೆ ದ್ವಾದಶಾಂತದವರೆಗೆ ನಿಷ್ಕಲಸ್ವರೂಪವೆನಿಸಿಕೊಂಡುದಾಗಿಯೂ ಇರುವು ದೆಂದು ತಿಳಿಯಬೇಕು ||೧೨೦||

**ಅವತರಣಿಕೆ**— ಪ್ರಾಣಾಯಾಮಗಳಿಂದ ನಾಡೀಶುದ್ಧಿಯನ್ನೂ ವಾಯುಜಯವನ್ನೂ ಪಡೆದು ಯೋಗಾಭ್ಯಾಸವನ್ನು ಮಾಡುವ ಕ್ರಮವನ್ನೂ ಅದರ ಫಲವಿಶೇಷಗಳನ್ನೂ ನೂರುಇಪ್ಪತ್ತೊಂದು ಮತ್ತು ನೂರುಇಪ್ಪತ್ತೆರಡನೆಯ ಪದ್ಯಗಳಲ್ಲಿ ತೋರಿಸುತ್ತಾರೆ.—

**ಕುಡ್ಯಾವೇಷ್ಟಿತಗೇಹಮಧ್ಯಕಲಿತೇ ಪಟ್ವಾದಿಕೇಚ್ಛಾಸನೇ**
**ಸ್ವಸ್ಥಃ ಪ್ರಾಗೃಜುಪೂರ್ವಕಾಯಗಳಕೋ ಲಗ್ನೇ ದ್ವಿಜೋ ರೇಚಯೇತ್।**
**ನಾಡೀಶುದ್ಧಿಷು ಮಂದಮಂದಮುದರಂ ಸಂಪೂರಯೇದ್ವಾನತಃ**
**ಸೇಂದೋರ್ಬಾಹ್ಯಸಮೀರಣೇನ ಮಿಹಿರೈಸ್ತಾಲೈಃ ಕ್ರಮಾತ್ಕುಂಭಕಂ**
**||೧೨೧||**

**ಕೃತ್ವಾ ಶಕ್ತಿವಶಾದ್ವಿರೇಚಯತು ತಂ ಪಿಂಗಾರ್ಕವಾಹಾತ್ತತೋ**
**ನಿರ್ಗರ್ಭಸ್ಸತತಂ ಜಯಂ ಚ ಕುರುತೇ ಖಾನಾಂ ಸಗರ್ಭಃ ಪುನಃ।**
**ಧ್ಯಾನಾಚ್ಚಾಪಯುತಾನ್ನಿಹಂತಿ ಸಕಲಂ ಪಾಪಂ ನಿಶೋತ್ಥಂ ಪುನಃ**
**ಪ್ರಾತಸ್ಸಾಯಮಹಸ್ಸು ಚೈಷ ಕುರುತೇ ತತ್ತ್ವಾದಿಸಾಕ್ಷಾತ್ಕೃತಿಂ**
**||೧೨೨||**

**ಟೀಕೆ**—ದ್ವಿಜಃ—ದೀಕ್ಷೆಮೊದಲಾದ ಸಂಸ್ಕಾರಗಳನ್ನು ಪಡೆದವನಾ ಗಿಯೂ, ಸೋಮಾರಿತನವೇ ಮೊದಲಾದ ಯೋಗವಿರೋಧಿಸ್ವಭಾವಗಳನ್ನು ಬಿಟ್ಟ ವನಾಗಿಯೂ ಇರುವ ದ್ವಿಜಾತಿಯೆನಿಸಿಕೊಂಡ ತ್ರೈವರ್ಣಿಕನು, ನಾಡೀಶುದ್ಧಿಷು— ತನ್ನ ಶರೀರದಲ್ಲಿರುವ ನಾಡಿಗಳಿಗೆ ಶುದ್ಧಿಯನ್ನು ಮಾಡಿಕೊಳ್ಳುವ ವಿಷಯದಲ್ಲಿ, ಪ್ರಾಕ್—ಪ್ರಾತಃಕಾಲದಲ್ಲಿ, ಲಗ್ನೇ—ಸುಮುಹೂರ್ತದಲ್ಲಿ, ಕುಡ್ಯಾವೇಷ್ಟಿತಗೇಹ ಮಧ್ಯಕಲಿತೇ— ತನ್ನ ದೇಹಬಲಕ್ಕೆ ಅನುಗುಣವಾಗಿ ಚಳಿ ಗಾಳಿ ಮೊದಲಾದ ಬಾಧೆಯ ನಿವೃತ್ತಿಗಾಗಿ ಒಂದು ಅಥವಾ ಎರಡುಮೂರು ಗೋಡೆಗಳೆಂಬ ಆವರಣ ಗಳಿಂದ ನಾಲ್ಕುಪಾರ್ಶ್ವಗಳಲ್ಲಿಯೂ ಆವರಿಸಲ್ಪಟ್ಟಿರುವ, ಗೃಹಮಧ್ಯದಲ್ಲಿ ಸ್ಥಾಪಿಸ

ಲ್ಪಟ್ಟಿರುವ, ಪಟ್ಟಾದಿಕೇಚ್ಛಾಸನೇ—ರೇಷ್ಮೆವಸ್ತ್ರ-ನೂಲಿನವಸ್ತ್ರ-ಕೃಷ್ಣಾಜಿನ ಮುಂತಾದುವುಗಳನ್ನು ಮೇಲೆ ಹರಡಿರುವ ಮತ್ತು ತನ್ನ ಇಚ್ಛೆಗೆ ಅನುಕೂಲವಾಗಿರುವ ಸ್ಥಿರಾಸನದಲ್ಲಿ, ಸ್ವಸ್ಥಃ—ಸುಖದಿಂದ ಕುಳಿತವನಾಗಿ, ಋಜುಪೂರ್ವಕಾಯಗಳಕಃ—ಡೊಂಕಾಗದೆ ನೇರವಾಗಿರುವ ಊರ್ಧ್ವದೇಹವೇನು, ಕಂಠವೇನು ಇವುಗಳುಳ್ಳವನಾಗಿ, ಪ್ರಾಕ್-ರೇಚಯೇತ್—ಮೊದಲು ಶರೀರದ ಒಳಗಿನ ವಾಯುವನ್ನು ಬಲಗಡೆಯ ನಾಸಿಕಾದ್ವಾರದಿಂದ ಹೊರಗೆ ಬಿಡಬೇಕು. ಇದು ರೇಚಕವೆನಿಸಿಕೊಳ್ಳುವುದು. ಆದರಮೇಲೆ—ಸೇಂದೋಃ—ಚಂದ್ರಸಹಿತವಾದ, ವಾಮತಃ—ಎಡಗಡೆಯ ನಾಸಿಕಾದ್ವಾರದ ಮೂಲಕವಾಗಿ, ಬಾಹ್ಯಸಮೀರಣೇನ—ಹೊರಗಿನ ವಾಯುವಿನಿಂದ, ಮಂದಮಂದಂ—ಮೆಲ್ಲಮೆಲ್ಲನೆ, ಉದರಂ—ಶರೀರದ ಒಳಭಾಗವನ್ನು, ಸಂಪೂರಯೇತ್—ತುಂಬಬೇಕು. ಇದು ಪೂರಕವೆನಿಸಿಕೊಳ್ಳುವುದು. ಹೀಗೆ ರೇಚಕಪೂರಕಗಳೆರಡನ್ನೂ ಮಾಡಿದಮೇಲೆ, ಶಕ್ತಿವಶಾತ್—ತನ್ನ ಶಕ್ತಿಗೆ ಅನುಸಾರವಾಗಿ, ಏಹಿರ್ಲೈಃ—ಹನ್ನೆರಡು-ಅಥವಾ-ಇಪ್ಪತ್ತುನಾಲ್ಕು-ಅಥವಾ-ನಲವತ್ತೆಂಟು ಎಂಬ ಲೆಕ್ಕವುಳ್ಳ, ತಾಲೈಃ—ಮಾತ್ರಾ ಪ್ರಮಾಣಗಳಿಂದ, ಕ್ರಮಾತ್—ಅಧಮ-ಮಧ್ಯಮ-ಉತ್ತಮ ಎಂಬ ಕ್ರಮವನ್ನು ಅನುಸರಿಸಿ, ಕುಂಭಕಂ ಕೃತ್ವಾ—ಒಳಗೆ ತುಂಬಿದ ವಾಯುವನ್ನು ಒಳಗೇ ತಡೆದು, ಪಿಂಗಾರ್ಕವಾಹಾತ್—ಸೂರ್ಯಮಾರ್ಗವಾದ ಪಿಂಗಳೆಯೆಂಬ ದಕ್ಷಿಣನಾಸಿಕೆಯಿಂದ, ತಂ—ಒಳಗೆ ತಡೆದಿರುವ ಆ ವಾಯುವನ್ನು, ವಿರೇಚಯತು—ಹೊರಗೆ ಬಿಡಬೇಕು.

ಈ ಕುಂಭಕವು ಅಗರ್ಭವೆಂದೂ ಸಗರ್ಭವೆಂದೂ ಎರಡು ಬಗೆಯಾಗುವುದು; ಮಂತ್ರಧ್ಯಾನಸಹಿತವಾಗದಿದ್ದರೆ ಅಗರ್ಭವೆಂದೂ, ಮಂತ್ರಧ್ಯಾನಸಹಿತವಾದರೆ ಸಗರ್ಭವೆಂದೂ ಹೇಳಲ್ಪಡುವುದು. ಮಂತ್ರಗಳು—ಪ್ರಣವಮಂತ್ರ-ಪ್ರಾಸಾದಮಂತ್ರ-ಹಂಸಮಂತ್ರ-ಗಾಯತ್ರೀಮಂತ್ರ-ವ್ಯಾಹೃತಿಮಂತ್ರ ಮೊದಲಾದುವುಗಳೇ ಎಂದು ತಿಳಿಯಬೇಕು. ನಿರ್ಗರ್ಭಃ-(ಚೇತ್)—ಇಂಥ ಕುಂಭಕವು ಅಗರ್ಭವಾಗಿರುವುದಾದರೆ, ಸತತಂ—ಯಾವಾಗಲೂ, ಖಾನಾಂ—ಇಂದ್ರಿಯಗಳ, ಜಯಂ—ಜಯವನ್ನುಮಾತ್ರವೇ, ಕುರುತೇ—ಮಾಡುತ್ತದೆ, ಸಗರ್ಭಃ ಪುನಃ—ಸಗರ್ಭವಾದುದಾದರೆ, ಜಪಯುತಾತ್—ಮಂತ್ರಜಪಸಹಿತವಾದ, ಧ್ಯಾನಾತ್—ಶಿವಧ್ಯಾನದಿಂದ, ನಿಶೋತ್ಥಂ—ರಾತ್ರಿಯಲ್ಲಿ ಸಂಭವಿಸಿರುವ, ಸಕಲಂ ಪಾಪಂ—ಸಮಸ್ತಪಾಪವನ್ನೂ, ನಿಹಂತಿ—ಹೊಡೆಯುತ್ತದೆ. (ನಾಶಪಡಿಸುತ್ತದೆ)

ಇದು ಪ್ರಾತಃಕಾಲದಲ್ಲಿ ಮಾಡಿದ ಪ್ರಾಣಾಯಾಮದ ಫಲವಾಗುವುದು. ಸಾಯಂ ಕಾಲದಲ್ಲಿ ಮಾಡಿದ ಪ್ರಾಣಾಯಾಮವು ಹಗಲಿನಲ್ಲಿ ಸಂಭವಿಸಿದ ಪಾಪಗಳನ್ನು ನಾಶಪಡಿಸುತ್ತದೆಯೆಂದು ತಿಳಿಯಬೇಕು. ಏಷಃ—ಈ ಯೋಗವು, ಅಹಸ್ಸಿ—ದಿನದಲ್ಲಿಯೂ, ಪ್ರಾತಸ್ಸಾಯಂ—ಪ್ರಾತಃಕಾಲದಲ್ಲಿಯೂ ಸಾಯಂಕಾಲ ದಲ್ಲಿಯೂ, (ಅಭ್ಯಸ್ತಶ್ಚೇತ್) ಅಭ್ಯಾಸಿಸಲ್ಪಟ್ಟದಾದರೆ, ತತ್ತ್ವಾದಿಸಾಕ್ಷಾತ್ಕೃತಿಂ—ಪೃಥಿವಿಮೊದಲಾದ ತತ್ತ್ವಗಳ ಸ್ವರೂಪಪ್ರತ್ಯಕ್ಷವನ್ನು, ಕುರುತೇ—ಮಾಡಿ ಕೊಡುತ್ತದೆ ||೧೨೧||೧೨೨||

**ಅವತರಣಿಕೆ**— ಹೀಗೆ ಪ್ರತಿನಿತ್ಯವೂ ಯೋಗಾಭ್ಯಾಸವನ್ನು ಮಾಡುವ ಪುರುಷನು ದ್ವಾದಶಾಂತಚಕ್ರದಲ್ಲಿರುವ ಪರಮಶಿವನನ್ನು ಪ್ರತ್ಯಕ್ಷೀಕರಿಸಲು ಸಮರ್ಥನಾಗುವನೆಂದು ನೂರುಇಪ್ಪತ್ತುಮೂರನೆಯ ಶ್ಲೋಕದಲ್ಲಿ ತೋರಿಸುತ್ತಾರೆ.

**ಹೃದ್ವ್ಯೋಮಾಂಬುಜಕರ್ಣಿಕಾರ್ಕಶಶಭೃದ್ಬಿಂಬಾಗ್ನಿಶಕ್ತ್ಯೂರ್ಧ್ವಗಂ**
**ಪ್ರಾಣಾಯಾಮಯುತೋ ಮೃಣಾಳವಿಲಸತ್ಸೂತ್ರಪ್ರತೀಕಾಶಕಂ ।**
**ಜ್ಯೋತಿಸ್ತದ್ಗತಮಾನಸೋಽಪಿ ಪರತಸ್ಸ್ವದ್ವಾದಶಾಂತಸ್ಥಿತಂ**
**ಸ್ವಚ್ಛಾಂಭಸ್ಸದೃಶಪ್ರಭಂ ಪರಶಿವಂ ಯೋಗೀ ಚಿತಾ ಪಶ್ಯತಿ ||೧೨೩||**

**ಟೀಕೆ**— ಯೋಗೀ—ಶಿವನಿಗೂ ಆತ್ಮನಿಗೂ ಉಂಟಾಗುವ ಪರಮಸಾಮ್ಯಾಪತ್ತಿರೂಪವಾದ ಏಕೀಭಾವವೆಂಬ ಯೋಗವನ್ನು ಅಭ್ಯಸಿಸುವ ಪುರುಷನು, ಪ್ರಾಣಾಯಾಮಯುತಃ—ಪೂರಕಕುಂಭಕರೇಚಕಸಹಿತವಾದ ಪ್ರಾಣಾಯಾಮಗಳೊಡನೆ ಕೂಡಿದವನಾಗಿ, ಹೃದ್ವ್ಯೋಮಾಂಬುಜಕರ್ಣಿಕಾರ್ಕಶಶಭೃದ್ಬಿಂಬಾಗ್ನಿಶಕ್ತ್ಯೂರ್ಧ್ವಗಂ—ಹೃದಯಾಕಾಶದಲ್ಲಿರುವ ಕಮಲದ ಕರ್ಣಿಕೆಯಲ್ಲಿರುವ ಸೂರ್ಯಮಂಡಲವೇನು ಚಂದ್ರಮಂಡಲವೇನು ಅಗ್ನಿಮಂಡಲವೇನು ಪರಾಶಕ್ತಿಯೇನು ಇವುಗಳಿಗಿಂತಲೂ ಮೇಲಾಗಿರುವ, ಮತ್ತು ಮೃಣಾಳವಿಲಸತ್ಸೂತ್ರಪ್ರತೀಕಾಶಕಂ—ತಾವರೆಯ ದಂಟಿನ ಪ್ರಕಾಶಮಾನವಾದ ತಂತುವಿಗೆ ಸದೃಶವಾಗಿರುವ, ತತ್—ಶೈವಾಗಮಗಳಲ್ಲಿ ಪ್ರಸಿದ್ಧವಾಗಿರುವ, ಜ್ಯೋತಿಃ—ತೇಜಸ್ಸನ್ನು, ಗತಮಾನಸಃ—ಹೊಂದಿರುವ ಮನಸ್ಸುಳ್ಳುವನಾಗಿ, ಪರತಃ—ಅದರಮೇಲೆ, ಸ್ವದ್ವಾದಶಾಂತಸ್ಥಿತಂ—ತನ್ನ ದ್ವಾದಶಾಂತಸ್ಥಾನದಲ್ಲಿರುವ, ಸ್ವಚ್ಛಾಂಭಸ್ಸದೃಶಪ್ರಭಂ—ನಿರ್ಮಲವಾದ ನೀರಿಗೆ ಸಮಾನವಾದ ಕಾಂತಿಯುಳ್ಳ, ಪರಶಿವಂ—ಪರಮಶಿವನನ್ನು, ಚಿತಾ—ಜ್ಞಾನದಿಂದ, ಪಶ್ಯತಿ—ಸಾಕ್ಷಾತ್ಕರಿಸುತ್ತಾನೆ. ||೧೨೩||

**ಅವತರಣಿಕೆ**— ಪ್ರಾತಃಕಾಲ, ಮಧ್ಯಾಹ್ನ, ಸಾಯಂಕಾಲ, ಅರ್ಧರಾತ್ರಿ ಇವುಗಳಲ್ಲಿ ಶಿವಧ್ಯಾನವನ್ನು ಮಾಡುವ ಕ್ರಮವನ್ನು ಸ್ಥಾನವಿಶೇಷಸಹಿತವಾಗಿ ನೂರುಇಪ್ಪತ್ತುನಾಲ್ಕನೆಯ ಶ್ಲೋಕದಲ್ಲಿ ಉಪದೇಶಿಸುತ್ತಾರೆ.—

**ಹೃತ್ಪದ್ಮೇ ಪ್ರಾತರರ್ಕೋದಯನಿವಹನಿಭಂ ಮಧ್ಯನಾಡ್ಯಾಂ ವಿಚಿಂತ್ಯಂ**
**ಮಧ್ಯಾಹ್ನೇ ಭ್ರೂಸರೋಜೇ ಪರಮಶಿವಜಚಿದ್ರೂಪಮಿಂದುಪ್ರಕಾಶಂ ।**
**ಸಾಯಾಹ್ನೇ ಹ್ಯೂರ್ಧ್ವಪದ್ಮೇಹ್ಯಮೃತಜಲನಿಧಿದ್ಯೋತನಂಸ್ಫೋತ್ಥನಾದಂ**
**ರಾತ್ರೇರರ್ಧೇಽಪ್ರಮೇಯಂ ತ್ವವಿಕಲಮಚಲಂ ದ್ವಾದಶಾಂತೇ ಮಹ**
**ಸ್ತತ್ ॥೧೨೪॥**

**ಟೀಕೆ**— ಪ್ರಾತಃ—ಪ್ರಾತಃಕಾಲದಲ್ಲಿ, ತನ್ಮಹಃ—ಪ್ರಸಿದ್ಧವಾದ ಆ ತೇಜಸ್ಸು, ಅರ್ಕೋದಯನಿವಹನಿಭಂ—ಅನೇಕಸೂರ್ಯೋದಯಕ್ಕೆ ಸಮಾನವಾದ ಕಾಂತಿಯುಳ್ಳುದಾಗಿ, ಹೃತ್ಪದ್ಮೇ—ಹೃದಯಕಮಲದಲ್ಲಿ, ಮಧ್ಯನಾಡ್ಯಾಂ—ಸುಷುಮ್ನಾನಾಡಿಯಲ್ಲಿ, ವಿಚಿಂತ್ಯಂ—ಧ್ಯಾನಿಸಲ್ಪಡತಕ್ಕುದು. ಮಧ್ಯಾಹ್ನೇ—ಮಧ್ಯಾಹ್ನಕಾಲದಲ್ಲಿ, ಭ್ರೂಸರೋಜೇ—ಭ್ರೂಮಧ್ಯದ ಕಮಲದಲ್ಲಿ, ಪರಮಶಿವಜಚಿದ್ರೂಪಂ—ಪರಶಿವನಿಂದ ಉಂಟಾದ ಜ್ಞಾನಕ್ರಿಯಾಸ್ವರೂಪವಾದ ಆ ತೇಜಸ್ಸು, ಇಂದುಪ್ರಕಾಶಂ—ಅನೇಕಚಂದ್ರೋದಯಕ್ಕೆ ಸಮಾನವಾದ ಕಾಂತಿಯುಳ್ಳುದಾಗಿ, ವಿಚಿಂತ್ಯಂ—ಧ್ಯಾನಿಸಲ್ಪಡತಕ್ಕುದು. ಸಾಯಾಹ್ನೇ—ಸಾಯಂಕಾಲದಲ್ಲಿ, ಊರ್ಧ್ವಪದ್ಮೇ—ಬ್ರಹ್ಮರಂಧ್ರಕಮಲದಲ್ಲಿ, ಸ್ಫೋತ್ಥನಾದಂ—ತನ್ನ ಮೂಲಾಧಾರದಿಂದ ಉಂಟಾದ ನಾದಸ್ವರೂಪವಾದ ಆ ತೇಜಸ್ಸು, ಅಮೃತಜಲನಿಧಿದ್ಯೋತನಂ—ಅಮೃತಸಮುದ್ರಕ್ಕೆ ಸಮಾನವಾದ ಕಾಂತಿಯುಳ್ಳುದಾಗಿ, ವಿಚಿಂತ್ಯಂ—ಧ್ಯಾನಿಸಲ್ಪಡತಕ್ಕುದು. ಇದರಿಂದ ಪ್ರಣವಸಹಿತವಾದ ಪ್ರಾಸಾದ ಮಂತ್ರಸ್ವರೂಪವು ಉಕ್ತವಾಯಿತು. ರಾತ್ರೇರರ್ಧೇ—ಅರ್ಧರಾತ್ರಿಯಲ್ಲಿ, ದ್ವಾದಶಾಂತೇ—ದ್ವಾದಶಾಂತಸ್ಥಾನದಲ್ಲಿ, ತನ್ಮಹಃ—ಆ ತೇಜಸ್ಸು, ಅಪ್ರಮೇಯಂ—ಮನಸ್ಸು-ಬುದ್ಧಿ ಮೊದಲಾದುವುಗಳಿಂದ ಪರಿಚ್ಛೇದಿಸಲಶಕ್ಯವಾದುದಾಗಿಯೂ, ಅವಿಕಲಂ—ಅತ್ಯಂತನಿಷ್ಕಳವಾದುದಾಗಿಯೂ, ಅಚಲಂ—ಚಲನರಹಿತವಾದುದಾಗಿಯೂ, ವಿಚಿಂತ್ಯಂ—ಧ್ಯಾನಿಸಲ್ಪಡತಕ್ಕುದು. ॥೧೨೪॥

**ಅವತರಣಿಕೆ**— ಮಲಸಹಿತವಾದ ಆತ್ಮಸಾಮಾನ್ಯಕ್ಕೆ ಉಂಟಾಗುವ ಜಾಗ್ರತ್, ಸ್ವಪ್ನ, ಸುಷುಪ್ತಿ, ತುರೀಯ, ತುರೀಯಾತೀತಗಳೆಂಬ ಐದು ಅವಸ್ಥೆಗಳನ್ನೂ, ನಿರ್ಮಲಾತ್ಮಸ್ವರೂಪಕ್ಕೆ ಪರಮಸಾಮ್ಯಾಪತ್ತಿಯೆಂಬ ಶಿವತ್ವಪ್ರಾಪ್ತಿ

ಯನ್ನೂ ಸೂರುಇಪ್ಪತ್ತೈದನೆಯ ಶ್ಲೋಕದಲ್ಲಿ ತೋರಿಸಿ ಅಷ್ಟಕ್ಕೇ ಯೋಗಪಾದ ವನ್ನು ಮುಗಿಸುತ್ತಾರೆ. —

**ಬಾಹ್ಯಾಂತಃಕರಣೈರಣೋಃ ಸ್ವವಿಷಯಜ್ಞಾನಂ ತು ಜಾಗ್ರಚ್ಚ ತತ್**
**ಸ್ವಪ್ನೋಽಂತಃಕರಣಸ್ವವೃತ್ತಿವಿಷಯಜ್ಞಾನಂ ಸುಷುಪ್ತಿಃ ಪರಂ।**
**ದೇಹೇತ್ವಿಂದ್ರಿಯವೃತ್ತಿಹೀನಮವಚೋಗ್ರಾಹ್ಯಾ ಮತಿಸ್ತುರ್ಯಕಂ**
**ದೇಹಾಕ್ಷೋಪರತೌ ಸ್ವಚಿನ್ಮತಿರಥಾತೀತಂ ಶಿವತ್ವೋದಯಃ ॥೧೨೫॥**

ಟೀಕೆ= ಅಣೋಃ—ಮಲದಿಂದ ಬದ್ಧನಾಗಿರುವ ಆತ್ಮನಿಗೆ, ಬಾಹ್ಯಾಂತಃ ಕರಣೈಃ—ಶ್ರೋತ್ರವೊದಲಾದ ಬಹಿರಿಂದ್ರಿಯಗಳಿಂದಲೂ, ಮನಸ್ಸುಮೊದ ಲಾದ ಅಂತರಿಂದ್ರಿಯಗಳಿಂದಲೂ, ಸ್ವವಿಷಯಜ್ಞಾನಂ—ಅವುಗಳಿಗೆ ವಿಷಯಗ ಳಾಗಿರುವ ಶಬ್ದಾದಿಗಳ ಪರಿಜ್ಞಾನವು, ಜಾಗ್ರತ್—ಜಾಗ್ರದವಸ್ಥೆಯೆನಿಸಿಕೊಳ್ಳು ವುದು. (ಇಲ್ಲಿ ಆತ್ಮನು ಮೊದಲು ಅಂತರಿಂದ್ರಿಯಗಳಿಂದಲೂ ಅನಂತರದಲ್ಲಿ ಹೊರಗಿನ ಇಂದ್ರಿಯಗಳಿಂದಲೂ ವಿಷಯಗಳನ್ನು ತಿಳಿದುಕೊಳ್ಳುವನೆಂದು ತಿಳಿಯ ಬೇಕು.) ಅಂತಃಕರಣಸ್ವವೃತ್ತಿವಿಷಯಜ್ಞಾನಂ—ಅಂತರಿಂದ್ರಿಯಗಳ ವೃತ್ತಿಜ್ಞಾ ನವು, ಸ್ವಪ್ನಃ—ಸ್ವಪ್ನಾವಸ್ಥೆಯೆನಿಸಿಕೊಳ್ಳುವುದು. ಪರಂ—ಈ ಅಂತಃಕರಣ ಗಳನ್ನು ಬಿಟ್ಟು ಚಿತ್ತಮಾತ್ರದೊಡನೆ ಕೂಡಿರುವ ಅವಸ್ಥೆಯು, ಸುಷುಪ್ತಿಃ— ಗಾಢನಿದ್ರಾರೂಪವಾದ ಸುಷುಪ್ತಿಯೆಂಬ ಮೂರನೆಯ ಅವಸ್ಥೆಯಾಗುವುದು. ದೇಹೇ—ಶರೀರದಲ್ಲಿ, ಇಂದ್ರಿಯವೃತ್ತಿಹೀನಂ—ಹೊರಗಿನ ಮತ್ತು ಒಳಗಿನ ಇಂದ್ರಿಯಗಳ ಪ್ರವೃತ್ತಿಯಿಂದ ಶೂನ್ಯವಾಗಿರುವಂತೆ, ಅವಚೋಗ್ರಾಹ್ಯಾ—ವಾಗಿಂ ದ್ರಿಯಕ್ಕೆ ಗೋಚರವಾಗಲಾರದ, ಮತಿಃ—(ಪ್ರಮಾಣಮಾತ್ರವುಳ್ಳ) ಬುದ್ಧಿಯು ತುರ್ಯಕಂ—ತುರೀಯಾವಸ್ಥೆಯೆನಿಸಿಕೊಳ್ಳುವುದು. ದೇಹಾಕ್ಷೋಪರತೌ (ಸತ್ಯಾಂ) —ಶರೀರದಲ್ಲಿರುವ, ಸಮಸ್ತ ಇಂದ್ರಿಯಗಳಿಗೂ ಪ್ರಾಣಕ್ಕೂ, ಚಲನವಿಲ್ಲದೆ ವಿಶ್ರಾಂತಿಯುಂಟಾದಮೇಲೆ, ಸಚಿನ್ಮತಿಃ—ತನ್ನ ಆತ್ಮಚೈತನ್ಯಮಾತ್ರವು ಅತೀತಂ—ತುರೀಯಾತೀತವೆಂಬ ಅವಸ್ಥೆಯಾಗುವುದು. ಅಥ—ಅನಂತರದಲ್ಲಿ, ಶಿವತ್ವೋದಯಃ—ನಿರ್ಮಲಾತ್ಮಸ್ವರೂಪಕ್ಕೆ ಪರಮಸಾಮ್ಯಾಪತ್ತಿಯೆಂಬ ಶಿವತ್ವ ಪ್ರಾಪ್ತಿಯುಂಟಾಗುವುದು.

ಇಲ್ಲಿ—ಈ ಐದು ಅವಸ್ಥೆಗಳ ಸ್ಥಾನಕ್ರಮವೆಂತೆಂದರೆ— ಮುಖದಲ್ಲಿ ಜಾಗ್ರದವಸ್ಥೆ, ಹೃದಯದಲ್ಲಿ ಸ್ವಪ್ನಾವಸ್ಥೆ, ನಾಭಿಯಲ್ಲಿ ಸುಷುಪ್ತ್ಯವಸ್ಥೆ, ವಸ್ತಿಯಲ್ಲಿ ತುರೀಯಾವಸ್ಥೆ, ಲಿಂಗದಲ್ಲಿ ತುರೀಯಾತೀತಾವಸ್ಥೆ ಎಂದು ಅವಸ್ಥೆಗಳ ಸ್ಥಾನವಿಶೇ ಷಗಳನ್ನು ತಿಳಿಯಬೇಕು.

ಜಾಗ್ರದವಸ್ಥೆಯಲ್ಲಿ—ಶ್ರೋತ್ರಮೊದಲಾದ ಜ್ಞಾನೇಂದ್ರಿಯಗಳೈದು, ಅವುಗಳ ವಿಷಯಗಳಾದ ಶಬ್ದಾದಿಗಳೈದು, ವಾಕ್ಕುಮೊದಲಾದ ಕರ್ಮೇಂದ್ರಿಯಗಳೈದು, ಅವುಗಳ ವ್ಯಾಪಾರಗಳಾದ ವಚನಾದಿಗಳೈದು, ಪ್ರಾಣಾಪಾನಾದಿಗಳು ಹತ್ತು, ಮನೋಬುದ್ಧ್ಯಹಂಕಾರಚಿತ್ತಗಳೆಂಬ ಅಂತಃಕರಣಗಳು ನಾಲ್ಕು, ಕ್ಷೇತ್ರಜ್ಞನೊಬ್ಬನು ಅಂತು ಮೂವತ್ತೈದು ತತ್ತ್ವಗಳುಂಟು;

ಸ್ವಪ್ನಾವಸ್ಥೆಯಲ್ಲಿ—ಶಬ್ದಾದಿಗಳೈದು, ವಚನಾದಿಗಳೈದು, ಪ್ರಾಣಾದಿಗಳು ಹತ್ತು, ಅಂತಃಕರಣಗಳು ನಾಲ್ಕು, ಕ್ಷೇತ್ರಜ್ಞ ಅಂತು ಇಪ್ಪತ್ತೈದು ತತ್ತ್ವಗಳುಂಟು; ಜಾಗ್ರದವಸ್ಥೆಯಲ್ಲಿ ವಿಷಯಗಳ ಅನುಭವವುಂಟು; ಸ್ವಪ್ನಾವಸ್ಥೆಯಲ್ಲಿ ಅವುಗಳ ಸ್ಫೂರ್ತಿಮಾತ್ರವುಂಟು;

ಸುಷುಪ್ತ್ಯವಸ್ಥೆಯಲ್ಲಿ—ಪ್ರಾಣ, ಚಿತ್ತ, ಕ್ಷೇತ್ರಜ್ಞ ಎಂಬ ಮೂರುತತ್ತ್ವಗಳುಂಟು; ತುರೀಯಾವಸ್ಥೆಯಲ್ಲಿ—ಪ್ರಾಣ, ಆತ್ಮ ಎಂಬ ಎರಡುತತ್ತ್ವಗಳುಂಟು; ತುರೀಯಾತೀತಾವಸ್ಥೆಯಲ್ಲಿ—ಆತ್ಮಮಾತ್ರವೇ ಉಂಟೆಂದು ತಿಳಿಯಬೇಕು; ಈ ಐದು ಅವಸ್ಥೆಗಳೂ ಮಲಸಂಬಂಧವುಳ್ಳ ಆತ್ಮನಿಗೆ ಉಂಟಾಗುವುವು;

ಅನಂತರದಲ್ಲಿ ನಿರ್ಮಲಾತ್ಮಸ್ವರೂಪಕ್ಕೆ ಶಿವನೊಡನೆ ಪರಮಸಾಮ್ಯಾಪತ್ತಿಯೆಂಬ ಶಿವತ್ವಪ್ರಾಪ್ತಿಯುಂಟಾಗುವುದು. ಇಂಥ ಆತ್ಮಸ್ವರೂಪಕ್ಕೆ ಸಮಲಜಾಗ್ರದಾದ್ಯವಸ್ಥೆಗಳಿಲ್ಲದಿದ್ದರೂ ಅಮಲಜಾಗ್ರದಾದ್ಯವಸ್ಥೆಗಳುಂಟು; ಹೇಗೆಂದರೆ—ಬೀಜಾಕ್ಷರದ ಉಚ್ಚಾರಣೆಯು ಜಾಗ್ರದವಸ್ಥೆಯಾಗುವುದು; ಬಿಂದುಪರಿಗ್ರಹವು ಸ್ವಪ್ನಾವಸ್ಥೆಯಾಗುವುದು; ನಾದಸಂಯೋಗವು ಸುಷುಪ್ತ್ಯವಸ್ಥೆಯಾಗುವುದು: ಶಕ್ತಿಸಮಾಗಮವು ತುರೀಯಾವಸ್ಥೆಯಾಗುವುದು; ಪರಶಿವತೇಜಸ್ಸಿನಲ್ಲಿ ಶಾಂತನಾಗಿ ಪರಮಸಾಮ್ಯಾಪತ್ತಿಯೆಂಬ ಲಯವನ್ನು ಪಡೆಯುವಿಕೆ ತುರೀಯಾತೀತಾವಸ್ಥೆಯಾಗುವುದು. ||೧೭೪||

ಇತಿ ಶ್ರೀಮದ್ವಾಧೂಲಧನ್ವಿಕುಲಾವತಂಸಭೂತೇನ ಪೂರ್ವೋತ್ತರ
ಮೀಮಾಂಸಾಭೂಷಣೇನ ವಿದ್ಯಾನಿಧಿನಾ ದೇವಶಿಖಾ
ಮಣಿರಾಮಾನುಜಾಚಾರ್ಯೇಣ ವಿರಚಿತಾಯಾಂ
ಸಿದ್ಧಾಂತಸಾರಾವಳ್ಯಾಃ ಕರ್ಣಾಟಭಾಷಾ
ಮಯಸಂಕ್ಷಿಪ್ತಪದವಿವೃತೌ ಯೋಗ
ಪಾದಸ್ತೃತೀಯಃ ಸಮಾಪ್ತಃ ||

|| ಓಂ ||

# ಅಥ ಚರ್ಯಾಪಾದಃ.

**ಅವತರಣಿಕೆ**— ಈಗ ಗ್ರಂಥಕಾರರು ಚರ್ಯಾಪಾದವನ್ನು ಹೇಳಲುಪ ಕ್ರಮಿಸಿ ಮೊದಲು ಕಾಮಿಕವೇಮೊದಲಾದ ಆಗಮಗಳಿಗೆ ಶಿವಭೇದವೆಂದೂ ರುದ್ರ ಭೇದವೆಂದೂ ನಾಮಧೇಯವುಂಟಾದ ಕ್ರಮವನ್ನು ತೋರಿಸುತ್ತಾರೆ.—

**ಸಂಕಲ್ಪಾದ್ದಶ ಚಾತ್ಮನಃ ಪ್ರಥಮತಸ್ಸೃಷ್ಟ್ವಾ ಶಿವಾನ್ ಕೇವಲಾನ್**
**ತೇಷಾಂ ಮಂತ್ರಪತಿಪ್ರಬೋಧಪರತೋ ಜ್ಞಾನಂ ತಥಾ ಭಜ್ಯ ತತ್ ।**
**ಸಾಕ್ಷಾದ್ದೇವ ಉಪಾದಿದೇಶ ಚ ಶಿವಶ್ಶೈವಾಸ್ತತಶ್ಚಾಗಮಾ**
**ರುದ್ರಾಂಶ್ಚಾಷ್ಟದಶಾವಬೋಧ್ಯ ಕಥಿತಾಸ್ತೈರಾಗಮಾಶ್ಚಾಪರೇ ॥೧೨॥**

**ಟೀಕೆ**— ದೇವಃ—ಎಲ್ಲೆಲ್ಲಿಯೂ ಪ್ರಕಾಶಸ್ವರೂಪನಾಗಿರುವ, ಶಿವಃ— ಪರಮಶಿವನು, ಕೇವಲಾನ್—ಅಭಿವ್ಯಕ್ತವಾದ ಸರ್ವಜ್ಞತ್ವಾದಿಗುಣವುಳ್ಳವರಾದುದ ರಿಂದ ಶುದ್ಧರಾಗಿರುವ, ಶಿವಾನ್—ಮತ್ತು ಶಿವಸ್ವರೂಪರಾಗಿರುವ, ದಶ ಆತ್ಮನಃ— ಸದಾಶಿವಶಬ್ದವಾಚ್ಯರಾದ ಪ್ರಣವನೇ ಮೊದಲಾಗಿರುವ ಹತ್ತು ಆತ್ಮರನ್ನು ಪ್ರಥಮತಃ—ಮೊದಲು, ಸಂಕಲ್ಪಾತ್—ಸ್ಮರಣರೂಪವಾದ ಸಂಕಲ್ಪಮಾತ್ರ ದಿಂದ, ಸೃಷ್ಟ್ವಾ—ಊರ್ಧ್ವಸೃಷ್ಟಿಕ್ರಮವಾಗಿ ಸೃಷ್ಟಿಸಿ, ತೇಷಾಂ—ಅವರಿಗೆ, ಮಂತ್ರಪತಿಪ್ರಬೋಧಪರತಃ—ಅನಂತನೇ ಮೊದಲಾದ ಎಂಟು ಬಗೆಯ ಮಂತ್ರ ಪತಿಗಳೆಂಬ ಈಶ್ವರರಿಗೆ ಆಗಮಜ್ಞಾನೋಪದೇಶವನ್ನು ಮಾಡಿದ ಅನಂತರದಲ್ಲಿ ತತ್ ಜ್ಞಾನಂ—ನಾದಸ್ವರೂಪವಾದ ಆ ಶಿವಜ್ಞಾನವನ್ನು, ತಥಾ ಭಜ್ಯ—ಹಾಗೆ ಹತ್ತುಬಗೆಯಾಗಿ ವಿಭಾಗಿಸಿ ಕಾಮಿಕವೇಮೊದಲಾದ ಹತ್ತು ಆಗಮಗಳಾಗಿ ಮಾಡಿ, ಸಾಕ್ಷಾತ್—ಮತ್ತೊಬ್ಬರ ಮೂಲಕವಾಗಿ ಅಲ್ಲದೆ ತಾನೇ, ಉಪಾದಿದೇಶ— ಉಪದೇಶಿಸಿದನು. ತತಶ್ಚ—ಆದುದರಿಂದ, ಆಗಮಾಃ—ಕಾಮಿಕಮೊದಲಾದ ಹತ್ತು ಆಗಮಗಳು, ಶೈವಾಃ—ಶಿವಭೇದಗಳೆನಿಸಿಕೊಳ್ಳುವುವು. (ಕಿಂಚ) ಮತ್ತು ತೈಃ—ಆ ಶಿವಭಟ್ಟಾರಕರಿಂದ, ಅಷ್ಟಾದಶರುದ್ರಾನ್—ಅನಾದಿರುದ್ರನೇಮೊದ ಲಾದ ಈಶ್ವರತತ್ತ್ವದಲ್ಲಿ ಅಡಗಿರುವ ಹದಿನೆಂಟುಜನರುದ್ರರನ್ನು, ಅವಬೋಧ್ಯ —ಜ್ಞಾನವಂತರನ್ನಾಗಿ ಮಾಡಿ, ಕಥಿತಾಃ—ಹೇಳಲ್ಪಟ್ಟ, ಆಗಮಾಃ—ವಿಜಯವೇ ಮೊದಲಾದ ಹದಿನೆಂಟು ಆಗಮಗಳು, ಅಪರೇ—ಬೇರೆಯಾದ ರುದ್ರಭೇದಗಳೆನಿಸಿ ಕೊಳ್ಳುವುವು.

ಇಲ್ಲಿ ಶಿವಜ್ಞಾನವೆಂಬುದು ಅವಬೋಧರೂಪವೆಂದೂ ಶಬ್ದರೂಪವೆಂದೂ ಎರಡುಬಗೆಯಾಗಿರುವುದು. ಅವುಗಳೊಳಗೆ ಅನಾದಿಯಾದ ಆಣವಮಲದಿಂದ ವಿರಹಿತನಾಗಿಯೂ, ಆದ್ಯಂತಶೂನ್ಯನಾಗಿಯೂ, ಸರ್ವಾರ್ಥಪ್ರಕಾಶಕನಾಗಿಯೂ, ಸರ್ವಾನುಗ್ರಹಕರನಾಗಿಯೂ ಇರುವ ಪರಶಿವನ ಜ್ಞಾನವೆಂಬುದು ಅವಬೋಧ ರೂಪವಾಗಿರುವುದು. ಅದು ಪರಶಿವನಲ್ಲಿಯೇ ಇರುವುದು.

ಶಾಸ್ತ್ರವೇ ಶಬ್ದರೂಪವಾದ ಶಿವಜ್ಞಾನವಾಗಿರುವುದು. ಹೆಚ್ಚಿದ ದಯೆ ಯುಳ್ಳ ಪರಶಿವನು ಸೃಷ್ಟಿಕಾಲದೊಳು ತನ್ನಲ್ಲಿರುವ ಅವಬೋಧರೂಪವಾದ ಜ್ಞಾನವನ್ನೇ ಶಬ್ದದಲ್ಲಿ ಏರಿಸಿ ಸರ್ವಾತ್ಮರನ್ನೂ ಅನುಗ್ರಹಿಸಬೇಕೆಂಬ ಇಚ್ಛೆ ಯಿಂದ ಗುರುಪರಂಪರೆಯಮೂಲಕವಾಗಿ ಯೋಗ್ಯರಾದವರಲ್ಲಿ ಪ್ರಚುರಪಡಿಸಿದನು.

ಅಂಥ ಗುರುಪರಂಪರಾಕ್ರಮವು ಮಹೌಘಕ್ರಮವೆಂದೂ ಪ್ರತಿಸಂಹಿತಾ ಕ್ರಮವೆಂದೂ ಎರಡುಬಗೆಯಾಗಿರುವುದು. ಇಲ್ಲಿ ಶಾಸ್ತ್ರಕ್ರಮವೇ ಪ್ರತಿಸಂಹಿತಾ ಕ್ರಮವೆನಿಸಿಕೊಳ್ಳುವುದೆಂಬ ಸಂಪ್ರದಾಯವನ್ನು ತಿಳಿಯಬೇಕು. ಈ ಅಭಿಪ್ರಾಯ ವನ್ನೇ ಸ್ಪಷ್ಟವಾಗಿ ಈ ಚರ್ಯಾಪಾದದ ಪ್ರಥಮಶ್ಲೋಕವಾದ ನೂರಿಪ್ಪತ್ತಾರ ನೆಯ ಶ್ಲೋಕದಲ್ಲಿ ತೋರಿಸಿರುತ್ತಾರೆ.

ಪರಮಶಿವನು ಸದಾಶಿವಶಬ್ದವಾಚ್ಯರಾದ ಹತ್ತುಜನ ಶಿವಮೂರ್ತಿಗಳನ್ನು ಸೃಷ್ಟಿಸಿ ಅವರಿಗೆ ಶಿವಜ್ಞಾನವನ್ನು ಆಗಮರೂಪದಿಂದ ಉಪದೇಶಿಸಿದನು. ಹೇಗೆಂದರೆ—

೧. ಪ್ರಣವ ಎಂಬವರಿಗೆ—ಕಾಮಿಕಾಗಮವನ್ನೂ, ೨. ಸುಧಾ ಎಂಬ ವರಿಗೆ— ಯೋಗಜಾಗಮವನ್ನೂ, ೩. ದೀಪ್ತ ಎಂಬವರಿಗೆ—ಅಚಿಂತ್ಯಾಗಮವ ನ್ನೂ, ೪. ಕಾರಣ ಎಂಬವರಿಗೆ—ಕಾರಣಾಗಮವನ್ನೂ, ೫. ಸುಶಿವ ಎಂಬ ವರಿಗೆ—ಅಜಿತಾಗಮವನ್ನೂ, ೬. ಈಶ ಎಂಬವರಿಗೆ—ದೀಪ್ತಾಗಮವನ್ನೂ ೭. ಸೂಕ್ಷ್ಮ ಎಂಬವರಿಗೆ—ಸೂಕ್ಷ್ಮಾಗಮವನ್ನೂ, ೮. ಕಾಲ ಎಂಬವರಿಗೆ—ಸಹಸ್ರಾ ಗಮವನ್ನೂ, ೯. ಗಣೇಶ ಎಂಬವರಿಗೆ—ಸುಪ್ರಬೋಧಾಗಮವನ್ನೂ, ೧೦. ಅಂಶು ಎಂಬವರಿಗೆ—ಅಂಶುಮದಾಗಮವನ್ನೂ, ಹೀಗೆ ಹತ್ತುಮಂದಿಗೆ ಹತ್ತು ಆಗಮ ಗಳನ್ನು ಉಪದೇಶಿಸಿದನು. ಈ ಹತ್ತುಜನರೂ ಪ್ರಧಾನಭೂತರಾದವರು. ಇವರಲ್ಲಿ ಪ್ರಣವರಿಂದ ತ್ರಿಕಲರೂ, ತ್ರಿಕಲರಿಂದ ಹರರೂ ಕಾಮಿಕಾಗಮವನ್ನು ಅಭ್ಯಸಿಸಿದರು.

ಉಪದೇಶವನ್ನು ಪಡೆದ ಪ್ರಣವರೇ ಮೊದಲಾದ ಹತ್ತುಜನರೂ ಶಿವ ಭೇದಗಳಾಗಿರುವರು; ಅವರಿಗೆ ಉಪದಿಷ್ಟಗಳಾದ ಕಾಮಿಕಾದಿ ಹತ್ತು ಆಗಮ

ಗಳೂ ಶಿವಭೇದಗಳಾಗಿರುವುವು. ಆದುದರಿಂದ ಈ ಆಗಮುಗಳಿಗೆ ಶಿವಭೇದಗಳೆಂಬ ನಾಮಧೇಯವು ಯುಕ್ತವಾಗಿರುವುದು.

ಮತ್ತು— ಇಂಥ ಶಿವಭಟ್ಟಾರಕರ ಮೂಲಕವಾಗಿ ಅನಾದಿರುದ್ರರೇ ಮೊದಲಾಗಿ ಈಶ್ವರತತ್ತ್ವದಲ್ಲಿ ಅಡಗಿರುವ ಹದಿನೆಂಟುಜನ ರುದ್ರರಿಗೆ ಉಪದೇಶಿಸಿದ ಹದಿನೆಂಟು ವಿಜಯಾದ್ಯಾಗಮುಗಳು ರುದ್ರಭೇದಗಳಾದುದರಿಂದ ರುದ್ರಭೇದಗಳೆಂಬ ನಾಮಧೇಯವು ಇವುಗಳಿಗೆ ಯುಕ್ತವಾಗಿರುವುದು. ಶಿವಭೇದಗಳಾದ ಹತ್ತು ಆಗಮುಗಳು ಪರವೆನಿಸಿಕೊಳ್ಳುವುವು. ರುದ್ರಭೇದಗಳಾದ ಹದಿನೆಂಟು ಆಗಮುಗಳು ಅಪರವೆನಿಸಿಕೊಳ್ಳುವುವು. ಹೀಗೆ ಪರಾಪರಗಳೆಂದು ವಿಭಾಗಿಸಲ್ಪಟ್ಟ ಈ ಶೈವಾಗಮುಗಳು ಇಪ್ಪತ್ತೆಂಟು ಆಗಮುಗಳಾಗಿ ಪ್ರಸಿದ್ಧಿಯನ್ನು ಹೊಂದಿರುವುವು.

ಶಿವಭೇದಗಳೆನಿಸಿಕೊಂಡ ಹತ್ತು ಆಗಮುಗಳನ್ನು ಪ್ರತ್ಯೇಕವಾಗಿ ಮೂಮೂವರು ಶ್ರವಣಮಾಡಿದರು; ರುದ್ರಭೇದಗಳೆನಿಸಿಕೊಂಡ ಹದಿನೆಂಟು ಆಗಮುಗಳನ್ನು ಪ್ರತ್ಯೇಕವಾಗಿ ಇಬ್ಬಿಬ್ಬರು ಶ್ರವಣಮಾಡಿದರು. ಅಂತು ಒಟ್ಟಿನಲ್ಲಿ ಶಿವಭೇದಾಗಮುಗಳನ್ನು ಕೇಳಿದವರು ಮೂವತ್ತುಜನರು, ರುದ್ರಭೇದಾಗಮುಗಳನ್ನು ಕೇಳಿದವರು ಮೂವತ್ತಾರುಜನರು ಒಟ್ಟಿನಲ್ಲಿ ಅರವತ್ತಾರುಜನಗಳಾಗಿರುವರು. ಇವರ ಹೆಸರುಗಳನ್ನು ಮೂಲಾಗಮದಿಂದ ತಿಳಿಯಬೇಕು. ||೧೨೬||

**ಅವತರಣಿಕೆ**— ವಕ್ತೃಶ್ರೋತೃಗಳ ಭೇದಗಳಿಂದ ಶೈವಾಗಮುಗಳ ಸಂಬಂಧಗಳು ಆರುಭೇದಗಳನ್ನು ಪಡೆದಿರುವುವೆಂದು ನೂರಿಪ್ಪತ್ತೇಳನೆಯ ಶ್ಲೋಕದಲ್ಲಿ ತೋರಿಸುತ್ತಾರೆ.—

**ಸಂಬಂಧಸ್ತು ಪರೋಽಣುನಾಥಶಿವಯೋರಾನಂತಸೌಮ್ಯೋ ಮಹಾ-**
**ಸೋಮಾದ್ದೇವಗತೋಽಂತರಾಳವಿದಿತೋ ದಿವ್ಯೋ ಮುನಿಷ್ವಾಗತಃ |**
**ದೇವಾದ್ದಿವ್ಯಗತೋಽಪ್ಯದಿವ್ಯ ಋಷಿತೋಽಪ್ಯುಕ್ತೋ ಮುನೀಂದ್ರಾನ್ನರೇ**
**ತಸ್ಮಾಚ್ಛಿಷ್ಯಗತೋಽಪ್ಯದಿವ್ಯ ಇತಿ ಷಟ್ಛೈವಾಗಮಾನಾಂ ವಿದುಃ ||೧೨೭||**

**ಟೀಕೆ**— ಅಣುನಾಥಶಿವಯೋಃ— ಶ್ರವಣಮಾಡುವ ಅನಂತೇಶ್ವರನೇನು ಶ್ರವಣಮಾಡಿಸುವ ವರ್ತಮಾನಸದಾಶಿವನೇನು ಇವರಿಗೆ ಉಂಟಾಗಿರುವ, ಸಂಬಂಧಃ— ಆಗಮುಸಂಬಂಧವು, ಪರಃ— ಪರವೆನಿಸಿಕೊಳ್ಳುವುದು. ಇದು ಮೊದಲನೆಯ ಸಂಬಂಧವು, ಆನ್ನಂತಸೌಮ್ಯಃ— ಅನಂತೇಶ್ವರನೇನು ಶ್ರೀಕಂಠಪರಮೇ

ಶ್ವರನೇನು ಇವರಿಗೆ ಉಕ್ತವಾಗಿರುವ ಆಗಮಸಂಬಂಧವು, ಮಹಾ—ಮಹಾ' ಎನಿಸಿಕೊಳ್ಳುವುದು. ಇದು ಎರಡನೆಯ ಸಂಬಂಧವು, ಸೋಪಾತ್—ಶ್ರೀಕಂಠ ಪರಮೇಶ್ವರನ ದೆಸೆಯಿಂದ, ದೇವಗತಃ—ಇಂದ್ರಾದಿದೇವತೆಗಳಲ್ಲಿ ಬಂದಿರುವ ಆಗಮಸಂಬಂಧವು, ಅಂತರಾಳವಿದಿತಃ—ಅಂತರಾಳವೆಂದು ತಿಳಿಯಲ್ಪಟ್ಟಿದೆ. ಇದು ಮೂರನೆಯ ಸಂಬಂಧವಾಗಿರುವುದು, (ದೇವೇಭ್ಯಃ)—ಇಂದ್ರಾದಿದೇವತೆಗಳ ದೆಸೆಯಿಂದ, ಮುನಿಷು—ಋಷಿಗಳಲ್ಲಿ, ಆಗತಃ—ಬಂದಿರುವ ಆಗಮಸಂಬಂಧವು, ದಿವ್ಯಃ—ದಿವ್ಯವೆನಿಸಿಕೊಳ್ಳುವುದು. ಇದು ನಾಲ್ಕನೆಯ ಸಂಬಂಧವು, ದೇವಾತ್ (ಆಗತಃ)—ದೇವತೆಗಳದೆಸೆಯಿಂದ ಋಷಿಗಳಲ್ಲಿ ಬಂದಿರುವ ಆಗಮಸಂಬಂಧವು, ದಿವ್ಯಗತಃ—ದಿವ್ಯವೆಂದೂ, ಋಷಿತಃ (ಆಗತಃ)—ಋಷಿಗಳಿಂದ ಮನುಷ್ಯರಲ್ಲಿ ಬಂದಿರುವ ಆಗಮಸಂಬಂಧವು, ಅದಿವ್ಯಃ—ಅದಿವ್ಯವೆಂದೂ, ಉಕ್ತಃ—ಹೇಳಲ್ಪಟ್ಟಿರುವುದು. ಆದುದರಿಂದ ಮುನೀಂದ್ರಾತ್—ದೇವರ್ಷಿಗಳ ದೆಸೆಯಿಂದ, ನರೇ—ಮನುಷ್ಯಋಷಿಗಳಲ್ಲ ಬಂದಿರುವ ಆಗಮಸಂಬಂಧವು, ದಿವ್ಯಾದಿವ್ಯಃ—ದಿವ್ಯಾದಿವ್ಯವೆನಿಸಿಕೊಳ್ಳುವುದು. ಇದು ಐದನೆಯ ಸಂಬಂಧವಾಗಿರುವುದು, ತಸ್ಮಾತ್—ಅಂಥ ಮನುಷ್ಯಋಷಿಗಳ ದೆಸೆಯಿಂದ, ಶಿಷ್ಯಗತಃ—ಋಷಿಗಳಲ್ಲದ ಮನುಷ್ಯಶಿಷ್ಯರಲ್ಲಿ ಬಂದಿರುವ ಸಂಬಂಧವು, ಅದಿವ್ಯಃ—ಅದಿವ್ಯವೆನಿಸಿಕೊಳ್ಳುವುದು. ಇದು ಆರನೆಯ ಸಂಬಂಧವಾಗಿರುವುದು, ಇತಿ—ಹೀಗೆ ಉಕ್ತವಾದ ರೀತಿಯಲ್ಲಿ, ಶೈವಾಗಮಾನಾಂ—ಕಾಮಿಕವೇ ಮೊದಲಾದ ಶೈವಾಗಮಗ್ರಂಥಗಳ, (ಸಂಬಂಧಾ)—ವಕ್ತೃಶ್ರೋತೃಗಳ ಭೇದಗಳಿಂದ ಉಂಟಾಗಿರುವ ಸಂಬಂಧಗಳನ್ನೂ, ಷಟ್—ಆರು ಸಂಬಂಧಗಳನ್ನಾಗಿ, ವಿದುಃ—ಪೂರ್ವಾಚಾರ್ಯರು ತಿಳಿಯುತ್ತಾರೆ.

ಅವುಗಳಲ್ಲಿ ಶಿವನಿಗೂ ಪ್ರಣವನಿಗೂ ಉಂಟಾದ ಆಗಮಸಂಬಂಧವು ಪರಸಂಬಂಧವೆನಿಸಿಕೊಳ್ಳುವುದು. ಪ್ರಣವನಿಗೂ ತ್ರಿಕಲನಿಗೂ ಉಂಟಾದ ಆಗಮಸಂಬಂಧವು 'ಮಹಾ' ಎನಿಸಿಕೊಳ್ಳುವುದು. ತ್ರಿಕಲನಿಗೂ ಪರನಿಗೂ ಉಂಟಾದ ಆಗಮಸಂಬಂಧವು ಅಂತರಾಳಸಂಬಂಧವೆನಿಸಿಕೊಳ್ಳುವುದು. ಹರನಿಗೂ ದೇವತೆಗಳಿಗೂ ಉಂಟಾದ ಆಗಮಸಂಬಂಧವು ದಿವ್ಯವೆನಿಸಿಕೊಳ್ಳುವುದು. ದೇವರ್ಷಿಗಳಿಗೂ ಮನುಷ್ಯಋಷಿಗಳಿಗೂ ಉಂಟಾದ ಆಗಮಸಂಬಂಧವು ದಿವ್ಯಾದಿವ್ಯವೆನಿಸಿಕೊಳ್ಳುವುದು. ಋಷಿಗಳಿಗೂ ಸಾಧಾರಣಮನುಷ್ಯರಿಗೂ ಉಂಟಾಗಿರುವ ಆಗಮಸಂಬಂಧವು ಅದಿವ್ಯವೆನಿಸಿಕೊಳ್ಳುವುದು. ಹೀಗೆ ಶಿವಭೇದಾಗಮಗಳ ಸಂಬಂಧವು ಆರು ಬಗೆಯಾಗಿರುವುದು.

ಇದರಂತೆ—ರುದ್ರಭೇದಾಗಮಗಳ ಸಂಬಂಧವು ಐದು ಬಗೆಯಾಗಿರುವುದು. ಹೇಗೆಂದರೆ—ಶಿವನಿಗೂ ಅನಾದಿರುದ್ರರಿಗೂ ಉಂಟಾದ ಆಗಮಸಂಬಂಧವು ಪರ ಸಂಬಂಧವಾಗುವುದು; ಅನಾದಿರುದ್ರರಿಗೂ ಪರಮೇಶ್ವರರಿಗೂ ಉಂಟಾದ ಆಗ ಮಸಂಬಂಧವು 'ಮಹಾ' ಎನಿಸಿಕೊಳ್ಳುವುದು; ಪರಮೇಶ್ವರರಿಗೂ ದೇವತೆಗಳಿಗೂ ಉಂಟಾದ ಆಗಮಸಂಬಂಧವು ದಿವ್ಯವೆನಿಸಿಕೊಳ್ಳುವುದು; ದೇವತೆಗಳಿಗೂ ಋಷಿಗ ಳಿಗೂ ಉಂಟಾದ ಆಗಮಸಂಬಂಧವು ದಿವ್ಯಾದಿವ್ಯವೆನಿಸಿಕೊಳ್ಳುವುದು; ಋಷಿಗಳಿ ಗೂ ಮನುಷ್ಯರಿಗೂ ಉಂಟಾದ ಸಂಬಂಧವು ಅದಿವ್ಯವೆನಿಸಿಕೊಳ್ಳುವುದು. ||೧೨೭||

**ಅವತರಣಿಕೆ**—ಶೈವಾಗಮಗಳಲ್ಲಿ ಮೊದಲಿನ ಹತ್ತು ಆಗಮಗಳು ಶಿವ ಭೇದಗಳಾಗಿರುವುವು; ಮೇಲಿನ ಹದಿನೆಂಟು ಆಗಮಗಳು ರುದ್ರಭೇದಗಳಾಗಿರು ವುವು. ಇಂಥ ಇಪ್ಪತ್ತೆಂಟು ಆಗಮಗಳ ಹೆಸರುಗಳನ್ನೂ ನೂರಿಪ್ಪತ್ತೆಂಟನೆಯ ಮತ್ತು ನೂರಿಪ್ಪತ್ತೊಂಬತ್ತನೆಯ ಪದ್ಯಗಳಲ್ಲಿ ತೋರಿಸುತ್ತಾರೆ.—

**ಶೈವಾಃ ಕಾಮಿಕಯೋಗಜಾಜಿತಮಥೋಽಚಿಂತ್ಯಂ ಚ ದೀಪ್ತಾಹ್ವಯಂ**
**ಸೂಕ್ಷ್ಮಃ ಕಾರಣಮಂಶುಮಾಂಶ್ಚ ದಶಧಾ ಸಾಹಸ್ರಕಂ ಸುಪ್ರಭಂ ।**
**ರೌದ್ರಾಸ್ತೇ ವಿಜಯಂ ಚ ರೌರವಮಥೋ ನಿಶ್ವಾಸಮಾಗ್ನೇಯಕಂ**
**ಸಂತಾನಂ ಕಿರಣಾಖ್ಯಸಿದ್ಧವಿಮಲಂ ಶ್ರೀಚಂದ್ರಹಾಸಂ ಪರಂ ||೧೨೮||**

**ಉದ್ಗೀತಂ ಲಲಿತಂ ಚ ಮಾಕುಟಮಥೋ ಶ್ರೀನಾರಸಿಹ್ಮಂ ತಥಾ**
**ಶ್ರೀಸ್ವಾಯಂಭುವಪಾರಮೇಶಮುಖಯುಗ್ಬಿಂಬಾನಿ ಚಂದ್ರಾಹ್ವಯಂ ।**
**ತೇನಾಷ್ಟಾದಶಸಂಖ್ಯಯೋರ್ಧ್ವಮುಖತಸ್ಸಾಕ್ಷಾತ್ಸದೇಶೇನ ತೇ**
**ಪ್ರೋಕ್ತಾಸ್ತ್ವೋಽಪಿ ಪರಾಪ್ತ ಏವ ನಿಖಿಲೋತ್ತೀರ್ಣೋಽಖಿಲಜ್ಞಾನವಾ**
**||೧೨೯||**

ಈ ಎರಡು ಪದ್ಯಗಳಲ್ಲಿಯೂ ಛಂದಸ್ಸಿನ ನಿಯಮಕ್ಕಾಗಿ ಆಗಮಗಳ ಹೆಸ ರುಗಳು ಹಿಂದುಮುಂದಾಗಿ ವ್ಯತ್ಯಸ್ತಗಳಾಗಿದ್ದರೂ ಶಾಸ್ತ್ರಸಂಪ್ರದಾಯಕ್ರಮವ ನ್ನನುಸರಿಸಿಯೇ ಇವುಗಳ ಪ್ರತಿಪದಾರ್ಥವನ್ನು ಇಲ್ಲಿ ಬರೆವೆವು.—

**ಟೀಕೆ**— ಕಾಮಿಕಂ—ಕಾಮಿಕಾಗಮವು ೧, ಯೋಗಜಂ—ಯೋಗ ಜಾಗಮವು ೨, ಅಚಿಂತ್ಯಂ—ಅಚಿಂತ್ಯಾಗಮವು ೩, ಕಾರಣಂ—ಕಾರಣಾಗ ಮವು ೪, ಅಜಿತಂ—ಅಜಿತಾಗಮವು ೫, ದೀಪ್ತಾಹ್ವಯಂ—ದೀಪ್ತವೆಂಬ ಹೆಸ ರುಳ್ಳ ಆಗಮವು ೬, ಸೂಕ್ಷ್ಮಃ—ಸೂಕ್ಷ್ಮಾಗಮವು ೭, ಸಾಹಸ್ರಕಂ—ಸಹ

ಸ್ರಾಗಮವು ೮, ಅಂಶುಮಾನ್—ಅಂಶುಮದಾಗಮವು ೯, ಸುಪ್ರಭಂ—ಸುಪ್ರಬೋಧಾಗಮವು ೧೦, (ಇತಿ) ಶೈವಾಃ-ದಶಧಾ—ಹೀಗೆ ಶಿವಭೇದಾಗಮಗಳು ಹತ್ತು ಬಗೆಯಾಗಿರುವುವು. ಅಥೋ—ಅನಂತರದಲ್ಲಿ, ವಿಜಯಂ—ವಿಜಯಾಗಮವು ೧೧, ನಿಶ್ವಾಸಂ—ನಿಶ್ವಾಸಾಗಮವು ೧೨, ಸ್ವಾಯಂಭುವಂ—ಸ್ವಾಯಂಭುವಾಗಮವು ೧೩, ಆಗ್ನೇಯಕಂ—ಅನಲಾಗಮವು ೧೪, ಭದ್ರಾಹ್ವಯಂ—ಭದ್ರಾಗಮವು (ವೀರಾಗಮವು) ೧೫, ರೌರವಂ—ರೌರವಾಗಮವು ೧೬, ಮಾಕುಟಂ—ಮಕುಟಾಗಮವು ೧೭, ವಿಮಲಂ—ವಿಮಲಾಗಮವು ೧೮, ಶ್ರೀಚಂದ್ರಹಾಸಂ—ಚಂದ್ರಹಾಸಾಗಮವು (ಚಂದ್ರಜ್ಞಾನಾಗಮವು) ೧೯, ಮುಖಯುಗ್ಬಿಂಬಂ—ಮುಖಬಿಂಬಾಗಮವು ೨೦, ಉದ್ಗೀತಂ—ಪ್ರೋದ್ಗೀತಾಗಮವು ೨೧, ಲಲಿತಂ—ಲಲಿತಾಗಮವು ೨೨, ಸಿದ್ಧಂ—ಸಿದ್ಧಾಗಮವು ೨೩, ಸಂತಾನಂ—ಸಂತಾನಾಗಮವು ೨೪, ಶ್ರೀನಾರಸಿಹ್ಮಂ—ನಾರಸಿಹ್ಮಾಗಮವು (ಶರ್ವೋಕ್ತಾಗಮವು) ೨೫, ಪಾರಮೇಶಂ—ಪಾರಮೇಶ್ವರಾಗಮವು ೨೬, ಕಿರಣಂ—ಕಿರಣಾಗಮವು ೨೭, ಪರಂ—ಅವಶಿಷ್ಟವಾದ ವಾತುಳಾಗಮವು ೨೮, ಸಂಖ್ಯಯಾ—ಲೆಕ್ಕದಿಂದ, ಅಷ್ಟಾದಶ—ಹದಿನೆಂಟೆನಿಸಿಕೊಂಡಿರುವ ಇವುಗಳು, ರೌದ್ರಾಃ—ರುದ್ರಭೇದಾಗಮಗಳಾಗಿರುವುವು. ತೇ—ಪ್ರಸಿದ್ಧಗಳಾಗಿರುವ, (ಇಮೇ ಆಗಮಾಃ)—ಈ ಇಪ್ಪತ್ತೆಂಟು ಆಗಮಗಳೂ, ತೇನ ಸದೇಶೇನ—ಪ್ರಸಿದ್ಧನಾದ ಸದಾಶಿವನಿಂದ, ಸಾಕ್ಷಾತ್—ಮತ್ತೊಬ್ಬರ ಮೂಲಕವಾಗಿ ಅಲ್ಲದೆ ತನ್ನ ಮುಖದಿಂದಲೇ, ಪ್ರೋಕ್ತಾಃ—ಹೇಳಲ್ಪಟ್ಟಿರುವುವು. ಸ ಏವ—ಆ ಸದಾಶಿವನೇ, ಪರಾಪ್ತಃ—ಅತ್ಯಂತ ಆಪ್ತನಾದವನು (ವಸ್ತುಸ್ಥಿತಿಯನ್ನೇ ಉಪದೇಶಿಸುವ ಸ್ವಭಾವವುಳ್ಳವನಾಗಿರುವನು.) ಅಪಿಚ—ಮತ್ತು ನಿಖಿಲೋತ್ತೀರ್ಣಃ—ಸಮಸ್ತ ಪಾಶಗಳನ್ನೂ ದಾಟಿದವನಾಗಿರುವನು. ಅಖಿಲಜ್ಞಾನವಾನ್—ಸಮಸ್ತಪದಾರ್ಥವಿಷಯಕವಾದ ಜ್ಞಾನವುಳ್ಳವನು. ||೧೨೮|| ||೧೨೯||

**ಅವತರಣಿಕೆ**— ಪವಿತ್ರೋತ್ಸವದ ಕಾಲನಿರ್ಣಯವನ್ನು ನೂರುಮೂವತ್ತನೆಯ ಪದ್ಯದಲ್ಲಿ ವಿವರವಾಗಿ ತೋರಿಸುತ್ತಾರೆ.—

**ಅರ್ಕೇ ಯುಗ್ಮಗತೇ ಹರಿರ್ನಿಜತಿಥೌ ಶೇತೇ ಸಿತಾಯಾಂ ತತಃ**
**ಸೂತ್ರಾರ್ಚಾ ತ್ರಿಷು ಕಿಂತು ಷಟ್ಸ್ವಧಿಕತಾ ಮಾಸೇಷು ದರ್ಶದ್ವಯೋಃ ।**
**ಸಂಧಿಸ್ಥೈಕತಮೇ ದ್ವಿಜಾತಿಷು ಯದಾ ಶೇತೇ ತದಾ ಕರ್ಕಟೇ**

**ತಸ್ಮಿನ್ ದರ್ಶಯುಗಂ ಭವೇದ್ಯದಿ ತದಾ ಸಿಹ್ಮೇ ಪವಿತ್ರೋದ್ಯಮಃ**
**||೧೩೦||**

**ಟೀಕೆ**— ಅರ್ಕೇ—ಸೂರ್ಯನು, ಯುಗ್ಮಗತೇ (ಸತಿ)—ಮಿಥುನರಾಶಿಯನ್ನು ಹೊಂದುತ್ತಿರಲು, ಹರಿಃ—ಶ್ರೀಮಹಾವಿಷ್ಣುವು, ಸಿತಾಯಾಂ—ಶುಕ್ಲಪಕ್ಷಾಂತರ್ಗತವಾದ, ನಿಜತಿಥೌ—ದ್ವಾದಶೀತಿಥಿಯಲ್ಲಿ, ಶೇತೇ—ಮಲಗುತ್ತಾನೆ. ತತಃ—ಹರಿಶಯನಾನಂತರದಲ್ಲಿ, ತ್ರಿಷು—ಮೂರು ತಿಂಗಳುಗಳಲ್ಲಿ, ಸೂತ್ರಾರ್ಚಾ—ರೇಷ್ಮೆ-ಹತ್ತಿ ಇವುಗಳಿಂದ ಮಾಡಿರುವ ಪವಿತ್ರಗಳಿಂದ ಅರ್ಚನೆಯು ನಡೆಯಿಸಲ್ಪಡತಕ್ಕುದು. ಕಿಂತು—ಆದರೆ, ಯದಾ—ಯಾವ ವರ್ಷದಲ್ಲಿ, ಷಟ್ಸು ಮಾಸೇಷು—ಮೇಷ-ಮೊದಲಾದ ಆರು ಮಾಸಗಳಲ್ಲಿ, ದರ್ಶದ್ವಯೇ (ಸತಿ)—ಒಂದು ತಿಂಗಳಲ್ಲಿ ಎರಡು ಅಮಾವಾಸ್ಯೆಗಳು ಸಂಭವಿಸಿದಾಗ, ಅಧಿಕತಾ—ಮಾಸದ ಆಧಿಕ್ಯವುಂಟಾಗುವುದೋ, ತದಾ—ಆ ವರ್ಷದಲ್ಲಿ, ಹರಿಃ—ಶ್ರೀಮಹಾವಿಷ್ಣುವು, ಕರ್ಕಟೇ—ಕಟಕಮಾಸದಲ್ಲಿ, ಶೇತೇ—ಮಲಗುತ್ತಾನೆ. ತದಾ—ಆಗ, ದ್ವಿಜಾತಿಷು—ಅರವತ್ತು ದಿನಗಳಾಗಿರುವ ಒಂದೇ ಹೆಸರಿನ ಎರಡು ತಿಂಗಳೊಳಗೆ, ಸಂಧಿಸ್ಥೈಕತಮೇ—ಸೌರ-ಚಾಂದ್ರಮಾಸಗಳ ಸಂಧಿಯನ್ನು ಹೊಂದಿರುವ ಎರಡರಲ್ಲಿ ಒಂದಾದ ಉತ್ತರಮಾಸದಲ್ಲಿ, ಸೂತ್ರಾರ್ಚಾ (ಕಾರ್ಯಾ)—ಪವಿತ್ರಗಳಿಂದ ಪೂಜೆಯು ಮಾಡಲ್ಪಡತಕ್ಕುದು. ತಸ್ಮಿನ್—ಆಗ ಅಂಥ ಕಟಕಮಾಸದಲ್ಲಿ, ದರ್ಶಯುಗಂ—ಎರಡು ಅಮಾವಾಸ್ಯೆಗಳು, ಭವೇದ್ಯದಿ—ಸಂಭವಿಸುವುವಾದರೆ, ತದಾ—ಆಗ, ಸಿಹ್ಮೇ—ಸಿಹ್ಮಮಾಸದಲ್ಲಿ, ಪವಿತ್ರೋದ್ಯಮಃ—ಪವಿತ್ರೋತ್ಸವವು ಮಾಡಲ್ಪಡತಕ್ಕುದು ||೧೩೦||

**ಅವತರಣಿಕೆ**— ಪವಿತ್ರಾರೋಪಣಕ್ಕಾಗಿ—ಆತ್ಮಪವಿತ್ರ-ವಿದ್ಯಾಪವಿತ್ರ-ಶಿವಪವಿತ್ರ ಎಂಬ ತತ್ತ್ವತ್ರಯಪವಿತ್ರಗಳಿಗೂ, ಗಂಗಾವತಾರವೆಂಬ ನಾಲ್ಕನೆಯ ಪವಿತ್ರಕ್ಕೂ-ತಂತುಸಂಖ್ಯೆಯನ್ನೂ, ಗ್ರಂಥಿಸಂಖ್ಯೆಯನ್ನೂ, ಗ್ರಂಥಿಗಳ ಅಧಿದೇವತೆಗಳನ್ನೂ ನೂರುಮೂವತ್ತೊಂದು-ನೂರುಮೂವತ್ತೆರಡನೆಯ ಶ್ಲೋಕಗಳಲ್ಲಿ ತೋರಿಸುತ್ತಾರೆ.—

**ಕಾರ್ಪಾಸೋತ್ಥನವಾತ್ಮಸೂತ್ರಶತದಿಕ್ ಕ್ಲೃಪ್ತಂ ಶಿರೋಮಾನಕಂ**
**ಪೂಜಾಂಶಾಯ ಚತುರ್ಥಕಂ ತ್ರಯಮಥೋ ಸೂತ್ರಸ್ಯ ಸಂಖ್ಯಾವಶಾತ್ ।**
**ಗ್ರಂಥಿರ್ಬಿಂದುಶರೇಣ ವಾ ನವಕರೇ ಪಂಕ್ತ್ಯಷ್ಟವಿಂಶದ್ಧೃತೇ**
**ಸೂತ್ರಂ ಹಸ್ತಮಿತೇ ಕೃತೇ ಕಿಲ ಹೃತೇ ಚಾಷ್ಟಾದಶ ಗ್ರಂಥಯಃ ||೧೩೧**

**ಬಾಣಾದ್ಯೇಕತವರ್ಾರ್ಚಿತೇಷು ಯದಿ ವಾಽಶೀತಿಶ್ಚ ಸೈಕಾಷ್ಟಯುಕ್**
**ತ್ರಿಂಶದ್ಬಿಂದುಶರಾಖ್ಯಸಂಖ್ಯಮಪಿವಾ ತತ್ತ್ವೇ ಪ್ರಕೃತ್ಯಾದಿಕಾಃ।**
**ಗ್ರಂಥೀನಾಮಧಿಪಾಶ್ಶಿವಾಶ್ಶಿವಯುತಾ ಚಂದ್ರಾಂಶುಶೈವಾಃ ಕಲಾಃ**
**ಸೂತ್ರಾಣಾಂ ಪ್ರಣವಾದಯೋಽಧಿಪತಯೋ ವ್ಯಕ್ತೇಷು ಜಾನ್ವಂತಕಃ**
**॥೧೩೨॥**

**ಟೀಕೆ—** ಪೂಜಾಂಶಾಯ—ಶಿವಲಿಂಗಪೂಜೆಗೋಸ್ಕರ, ಕಾರ್ಪಾಸೋತ್ಥ ನವಾತ್ಮಸೂತ್ರಶತದಿಕ್‌ಕ್ಲೃಪ್ತಂ—ಹತ್ತಿಯಿಂದ ಉಂಟಾದ, ಒಂಬತ್ತು ಎಳೆಗಳುಳ್ಳ, ನೂಲುಗಳ ನೂರೆಂಟರಿಂದ ಮಾಡಲ್ಪಟ್ಟ, ತ್ರಯಂ—ಆತ್ಮಪವಿತ್ರ, ವಿದ್ಯಾಪವಿತ್ರ, ಶಿವಪವಿತ್ರ ಎಂಬ ಮೂರೂ, ಶಿರೋಽಮಾನಕಂ (ಸ್ಯಾತ್)—ಲಿಂಗದ ಶಿರಸ್ಸಿಗೆ, ಸರಿಯಾದ ಪ್ರಮಾಣವುಳ್ಳುದಾಗಿರಬೇಕು. ಅಥೋ—ಅನಂತರದಲ್ಲಿ, ಚತುರ್ಥಕಂ—ನಾಲ್ಕನೆಯದಾದ ಗಂಗಾವತಾರವೆಂಬ ಪವಿತ್ರವೂ ಮೊದಲಿನಂತೆಯೇ ಒಂಬತ್ತುಎಳೆಗಳುಳ್ಳ ನೂರೆಂಟುನೂಲುಗಳಿಂದ ಮಾಡಲ್ಪಡತಕ್ಕುದು; ಆದರೆ ಅದಕ್ಕೆ, ಸೂತ್ರಸ್ಯ—ನೂಲಿನ, ಸಂಖ್ಯಾವಶಾತ್—ಸಂಖ್ಯೆಗೆ ಅನುಸಾರವಾಗಿ, ಗ್ರಂಥಿಃ (ಕಾರ್ಯಃ)—ಗ್ರಂಥಿಯು ಮಾಡಲ್ಪಡತಕ್ಕುದು.

ನೂಲಿನಸಂಖ್ಯೆಯು ಹೇಗೆಂದರೆ—ನವಹಸ್ತಮೊದಲುಗೊಂಡು ಏಕಹಸ್ತದವರೆಗೆ--೧--ಉತ್ತಮೋತ್ತಮ-೨-ಉತ್ತಮಮಧ್ಯಮ-೩-ಉತ್ತಮಾಧಮ-೪-ಮಧ್ಯಮೋತ್ತಮ-೫-ಮಧ್ಯಮಮಧ್ಯಮ-೬-ಮಧ್ಯಮಾಧಮ-೭-ಅಧಮೋತ್ತಮ-೮-ಅಧಮಮಧ್ಯಮ ೯-ಅಧಮಾಧಮ ಎಂಬುದಾಗಿ ಲಿಂಗವು ಒಂಬತ್ತುಬಗೆಯಾಗಿರುವುದು; ಅವುಗಳೊಳಗೆ ಉತ್ತಮೋತ್ತಮವೆನಿಸಿಕೊಂಡ, ನವಕರೇ—ನವಹಸ್ತಲಿಂಗದಲ್ಲಿ ವಿಹಿತವಾದ ನೂರೆಂಟೆಂಬ ಸೂತ್ರಸಂಖ್ಯೆಯು, ಪಂಕ್ತ್ಯಾಹೃತೇ (ಸತಿ)—ಅಲ್ಲಿಂದ ಹಿಡಿದು ಕ್ರಮವಾಗಿ ಹತ್ತುಹತ್ತು ಸಂಖ್ಯೆಯಿಂದ ಕಡಮೆಮಾಡಲ್ಪಡಲು, ಹಸ್ತಮಿತೇ—ಏಕಹಸ್ತಪ್ರಮಾಣಲಿಂಗದಲ್ಲಿ, ಸೂತ್ರಂ—ಸೂತ್ರಸಂಖ್ಯೆಯು, ಅಷ್ಟಾವಿಂಶತ್ (ಅಷ್ಟಾವಿಂಶತಿಃ)—ಇಪ್ಪತ್ತೆಂಟಾಗುವುದು. ಆದುದರಿಂದ ಗ್ರಂಥಿಸಂಖ್ಯೆಯೂ ಅಷ್ಟೇ ಇರಬೇಕೆಂದು ತಿಳಿಯಬೇಕು. ನವಕರೇ—ನವಹಸ್ತಲಿಂಗದಲ್ಲಿ, ಬಿಂದುಶರೇಣ—ಐವತ್ತಾಗಿ ವಿಧಿಸಲ್ಪಟ್ಟ ಗ್ರಂಥಿಸಂಖ್ಯೆಯು, ಶ್ರುತೇಃ ಹೃತೇ—ಅಲ್ಲಿಂದ ಹಿಡಿದು ಕ್ರಮವಾಗಿ ನಾಲ್ಕು ನಾಲ್ಕು ಸಂಖ್ಯೆಯಿಂದ ಕಡಮೆ ಮಾಡಲ್ಪಟ್ಟುದಾದರೆ, ಹಸ್ತಮಿತೇ—ಏಕಹಸ್ತಪ್ರಮಾಣಲಿಂಗದಲ್ಲಿ, ಗ್ರಂಥಯಃ—ಗ್ರಂಥಿಗಳು, ಅಷ್ಟಾದಶ—ಹದಿನೆಂಟಾಗುವುವು. ಈ ಸೂತ್ರಸಂಖ್ಯೆಯೂ

ಗ್ರಂಥಿಸಂಖ್ಯೆಯೂ ಗಂಗಾವತಾರಪವಿತ್ರಕ್ಕೆ ಸಂಬಂಧಿಸುವುವೆಂದು ತಿಳಿಯ ಬೇಕು.

ಬಾಣಲಿಂಗ-ಸ್ವಾಯಂಭುವಲಿಂಗ ಮೊದಲಾದುವುಗಳಿಗೆ ಉತ್ತಮ-ಮಧ್ಯಮ-ಅಧಮ-ಕ್ರಮವಾಗಿ ಮೊದಲು ಹೇಳಲ್ಪಟ್ಟ (೧೦೮-೫೪-೨೭) ಸೂತ್ರಗಳೊಳಗೆ ಯಾವುದಾದರೊಂದು ಬಗೆಯಿಂದಲಾಗಲಿ, ಅಥವಾ ೮೧ ಮೊದಲಾಗಿ ವಿಧಿಸಿದ ಸೂತ್ರಗಳೊಳಗೆ ಯಾವುದಾದರೊಂದು ಬಗೆಯಿಂದಲಾಗಲಿ ಪವಿತ್ರಾರೋಪಣವನ್ನು ಮಾಡಬಹುದೆಂಬ ಅಭಿಪ್ರಾಯವನ್ನು ಮೇಲಿನ ಶ್ಲೋಕದಲ್ಲಿ ತೋರಿಸುತ್ತಾರೆ. ಹೇಗೆಂದರೆ--(೧೦೮-೫೪-೨೭) ಈ ಸೂತ್ರಗಳೊಳಗೆ—

ಏಕತಮಾರ್ಚಿತೇಷು ಬಾಣಾದಿಷು—ಒಂದು ಬಗೆಯಾದ ಪವಿತ್ರದಿಂದ ಪೂಜಿಸಲ್ಪಟ್ಟ ಬಾಣಲಿಂಗ-ಸ್ವಾಯಂಭುವಲಿಂಗಮೊದಲಾದ ಲಿಂಗವಿಶೇಷಗಳಲ್ಲಿ, ಸೈಕಾ-ಅಶೀತಿಃ— ಎಂಬತ್ತೊಂದುಸೂತ್ರಗಳ ಪವಿತ್ರವಾಗಲಿ, ಯದಿವಾ— ಅಥವಾ, ಅಷ್ಟಯುಕ್-ತ್ರಿಂಶತ್—ಮೂವತ್ತೆಂಟುಸೂತ್ರಗಳ ಪವಿತ್ರವಾಗಲಿ, ಅಪಿವಾ— ಅಥವಾ ಬಿಂದುಶರಾಖ್ಯಸಂಖ್ಯಂ—ಐವತ್ತುಸೂತ್ರಗಳ ಪವಿತ್ರವಾಗಲಿ ಸಮರ್ಪಿಸಲ್ಪಡಬೇಕು. ತತ್ತ್ವೇ—ಆತ್ಮ-ವಿದ್ಯೆ-ಶಿವ ಎಂಬ ತತ್ತ್ವತ್ರಯಪವಿತ್ರದಲ್ಲಿ, ಗ್ರಂಥೀನಾಂ—ಹತ್ತುಗ್ರಂಥಿಗಳಿಗೆ, ಪ್ರಕೃತ್ಯಾದಿಕಾಃ-ಶಿವಾಃ—ಪ್ರಕೃತಿಃ-ಪೌರುಷೀ-ವೀರಾ-ಅಪರಾಜಿತಾ-ಜಯಾ-ವಿಜಯಾ-ಅಜಿತಾ-ಸದಾಶಿವಾ-ಮನೋನ್ಮನೀ-ಸರ್ವತೋಮುಖೀ ಎಂಬ ಹತ್ತು ಶಿವಶಕ್ತಿಗಳು, ಅಧಿಪಾಃ—ಅಧಿದೇವತೆಗಳಾಗಿರುವುವು. ಗಂಗಾವತಾರಪವಿತ್ರದ ಹದಿನೆಂಟುಗ್ರಂಥಿಗಳೊಳಗೆ ಮೇಲೂ ಕೆಳಗೂ ಇರುವ ಎರಡು ಗ್ರಂಥಿಗಳಿಗೆ, ಅಧಿಪಾಃ—ಅಧಿದೇವತೆಗಳು, ಶಿವಯುತಾ (ಶಕ್ತಿಃ)—ಶಿವನೊಡನೆ ಕೂಡಿದ ಶಕ್ತಿಯೇ. ಅವುಗಳಲ್ಲಿ ಮೇಲಿನ ಗ್ರಂಥಿಗೆ ಶಿವನೂ-ಕೆಳಗಿನ ಗ್ರಂಥಿಗೆ ಶಕ್ತಿಯೂ ಅಧಿದೇವತೆಗಳಾಗಿರುವರು. ಚಂದ್ರಾಂಶುಶೈವಾಃ-ಕಲಾಃ—ಉಳಿದ ಹದಿನಾರುಗ್ರಂಥಿಗಳಿಗೆ ಚಂದ್ರಕಲೆಗಳು ಹದಿನಾರು, ಪ್ರಾಸಾದಮಂತ್ರದ ಕಲೆಗಳು ಹದಿನಾರು, ಅಧಿಪಾಃ—ಅಧಿದೇವತೆಗಳಾಗಿರುವುವು. ಸೂತ್ರಾಣಾಂ—ಒಂಬತ್ತು ಎಳೆಗಳಾಗಿ ಮಡಿಸಿರುವ ಸೂತ್ರಗಳ ನವಧಾತುಗಳಿಗೂ, ಪ್ರಣವಾದಯಃ—ಪ್ರಣವ-ಚಂದ್ರ-ಅಗ್ನಿ-ಬ್ರಹ್ಮ-ನಾಗ-ಗುಹ-ರವಿ-ಸಾದಾಖ್ಯ-ಸರ್ವದೇವ-ಎಂಬ ಒಂಬತ್ತುಮಂದಿಗಳಾಗಲಿ, ಅಥವಾ ಬ್ರಹ್ಮ-ವಿಷ್ಣು-ರುದ್ರ-ಈಶ್ವರ-ಸದಾಶಿವ-ಸೋಮ-ಸೂರ್ಯ-ಅಗ್ನಿ-ಸರ್ವದೇವ ಎಂಬ ಒಂಬತ್ತುಮಂದಿಗಳಾಗಲಿ, ಅಧಿಪತಯಃ—ಅಧಿದೇವತೆಗಳಾಗಿರುವರು. ಇದರಿಂದ ಈ ಒಂಬತ್ತು

ದೇವತೆಗಳನ್ನೇ ಸೂತ್ರಸಂಖ್ಯೆಗೆ ತಕ್ಕಂತೆ ತಿರುಗಿತಿರುಗಿಯೂ ನ್ಯಾಸಮಾಡಬೇಕೆಂದು ತಿಳಿಯಬೇಕು. ಮತ್ತು ಈ ಗಂಗಾವತಾರಪವಿತ್ರವು, ವ್ಯಕ್ತೇಃಷು—ಪ್ರತಿಮಾರೂಪವಾದ ವ್ಯಕ್ತಿಗಳಲ್ಲಿ, ಜಾನ್ವಂತಕಃ—ಮಂಡಿಯವರೆಗೆ ಉದ್ದವಾಗಿರಬೇಕು ||೧೩೧||೧೩೨||

**ಅವತರಣಿಕೆ—** ಉಕ್ತವಾದ ನಾಲ್ಕು ಬಗೆಯ ಪವಿತ್ರಗಳ ಸಮರ್ಪಣ ಕ್ರಮವನ್ನೂ, ಅದರ ಫಲವಿಶೇಷವನ್ನೂ ನೂರುಮೂವತ್ತುಮೂರನೆಯ ಶ್ಲೋಕದಲ್ಲಿ ಹೇಳುತ್ತಾರೆ.—

**ಶೈವಂ ಮಂತ್ರಮಥೋಚ್ಚರನ್ನಿಷುಕಲಾಯುಕ್ಚೇತನಾಸ್ಥಾನಯುಕ್**
**ದಂಡಾಂತಾಂತಮನಾಂತಕಾವಧಿ ಶಿವೇಽಪ್ಯಾತ್ಮಾದಿತತ್ತ್ವತ್ರಯಂ ।**
**ಸರ್ವಾತ್ಮಾಖ್ಯಚತುರ್ಥಕಂ ಕ್ರಮಯುತಂ ದದ್ಯಾಲ್ಲಯೋಚ್ಚಾರತಃ**
**ಸರ್ವಾಂತಂ ಪರಮಿಕೃತೌ ಚ ಕುಸುಮಂ ಪೂರ್ತ್ಯೈ ವಿಧೇರ್ವತ್ಸರೇ**
**||೧೩೩||**

**ಟೀಕೆ—** ಅಥ—ಹೀಗೆ ಪವಿತ್ರಗಳನ್ನು ನಿರ್ಮಿಸಿದ ಅನಂತರದಲ್ಲಿ, ಇಷುಕಲಾಯುಕ್—ನಿವೃತ್ತಿ-ಪ್ರತಿಷ್ಠೆ-ವಿದ್ಯೆ-ಶಾಂತಿ-ಶಾಂತ್ಯತೀತ ಎಂಬ ಐದು ಕಲೆಗಳ ಶುದ್ಧಿಯುಳ್ಳವನಾಗಿ, ಚೇತನಾಸ್ಥಾನಯುಕ್—ಅಂತರ್ಯಾಗದೊಡನೆಯೂ, ಅಂತರ್ಧ್ಯಾನದೊಡನೆಯೂ, ಸ್ಥಾನಶುದ್ಧಿ-ದ್ರವ್ಯಶುದ್ಧಿ-ಮಂತ್ರಶುದ್ಧಿ-ಲಿಂಗಶುದ್ಧಿಗಳೊಡನೆಯೂ ಕೂಡಿದವನಾಗಿ, ಶೈವಂ ಮಂತ್ರಂ—ಶಿವಮಂತ್ರವನ್ನು, ದಂಡಾಂತಾಂತಮನಾಂತಕಾವಧಿ—ನಾದನಾದಾಂತಶಕ್ತಿಗಳವರೆಗೆ ಸಮನೆಯವರೆಗೆ ಬ್ರಹ್ಮಾದಿಕಾರಣೇಶ್ವರರ, ಕ್ರಮಯುತಂ—ತ್ಯಾಗಕ್ರಮದೊಡನೆ ಕೂಡಿ, ಲಯೋಚ್ಚಾರತಃ—ದ್ವಾದಶಾಂತದವರೆಗೆ ಇರುವ ಉನ್ಮನಾಂತವಾದ ಉಚ್ಚಾರಣೆಯಾಗುವಂತೆ, ಉಚ್ಚರ್ (ನ್)—ಉಚ್ಚರಿಸುತ್ತಿರುವವನಾಗಿ, ಆತ್ಮಾದಿತತ್ತ್ವತ್ರಯಂ—ಆತ್ಮತತ್ತ್ವ-ವಿದ್ಯಾತತ್ತ್ವ-ಶಿವತತ್ತ್ವವೆಂಬ ಮೂರು ತತ್ತ್ವಗಳ ಪವಿತ್ರಗಳನ್ನೂ, ಸರ್ವಾತ್ಮಾಖ್ಯಚತುರ್ಥಕಂ—ಸರ್ವದೇವತಾಸ್ವರೂಪವಾದ ಗಂಗಾವತಾರವೆಂಬ ನಾಲ್ಕನೆಯ ಪವಿತ್ರವನ್ನೂ, ಶಿವೇ—ಶಿವಸ್ವರೂಪವಾದ ಲಿಂಗದ ಶಿರಸ್ಸಿನಲ್ಲಿ, ದದ್ಯಾತ್—ಸಮರ್ಪಿಸಬೇಕು. ಪರಮಿಕೃತೌ—ಮತ್ತು ಈ ನಾಲ್ಕರಲ್ಲಿಯೂ ಇರುವ ಶಿವನನ್ನು ಏಕರೂಪವಾಗಿ ಮಾಡುವ ವಿಷಯದಲ್ಲಿ, ಸರ್ವಾಂತಂ (ಜಪಿತ್ವಾ)—ಈ ನಾಲ್ಕು ಪವಿತ್ರಗಳನ್ನೂ ಸಮರ್ಪಿಸಿದ ಮೇಲೆ ಕೊನೆಯಲ್ಲಿ ನಮಶ್ಶಬ್ದದವರೆಗೆ ಮೂಲಮಂತ್ರವನ್ನು ಉಚ್ಚರಿಸಿ,

ಕುಸುಮಂ— ಮೂರು ಪುಷ್ಪಾಂಜಲಿಗಳನ್ನು, ದದ್ಯಾತ್— ಸಮರ್ಪಿಸಬೇಕು. ಹೀಗೆ ಮಾಡಿದ ಪವಿತ್ರಸಮರ್ಪಣವು, ವತ್ಸರೇ— ಒಂದು ಸಂವತ್ಸರದಲ್ಲಿ ಮಾಡಲ್ಪಟ್ಟ, ವಿಧೇಃ— ಶಿವಪೂಜೆಮೊದಲಾದ ಕ್ರಿಯಾಕಲಾಪಕ್ಕೆ, ಪೂರ್ತ್ಯೈ— ಲೋಪವಿಲ್ಲದಂತೆ ಪರಿಪೂರ್ತಿಯುಂಟಾಗುವುದಕ್ಕೋಸ್ಕರ, (ಭವೇತ್)— ಆಗುವುದು ||೧೩೩||

**ಅವತರಣಿಕೆ**— ಲೋಕದಲ್ಲಿ ಅವಿಚ್ಛಿನ್ನವಾಗಿ ಎಡೆಬಿಡದೆ ನಡೆದುಬಂದಿರುವ ಸಂಪ್ರದಾಯವುಳ್ಳವರೂ ಇರುವರು. ವಿಚ್ಛಿನ್ನವಾದ ಸಂಪ್ರದಾಯವುಳ್ಳವರೂ ಇರುವರು. ಆದರೆ ಅವಿಚ್ಛಿನ್ನಸಂಪ್ರದಾಯದವರು ವಿಚ್ಛಿನ್ನಸಂಪ್ರದಾಯದವರಲ್ಲಿ ಭೋಜನಮಾಡಿದರೆ ಆಗ ಪ್ರಸಕ್ತವಾಗುವ ದೋಷದ ಪರಿಹಾರಕ್ಕಾಗಿ ಅಷ್ಟವಿಧಪ್ರಾಸಾದಮಂತ್ರದ ನ್ಯಾಸಪೂರ್ವಕವಾಗಿ ಭೋಜನಮಾಡಿದರೆ ಆ ದೋಷವು ಇವನನ್ನು ಸ್ಪರ್ಶಿಸುವುದಿಲ್ಲವೆಂಬ ಅಂಶವನ್ನು ನೂರುಮೂವತ್ತುನಾಲ್ಕನೆಯ ಪದ್ಯದಿಂದ ಹಿಡಿದು ನಾಲ್ಕು ಪದ್ಯಗಳಲ್ಲಿ ತೋರಿಸುತ್ತಾರೆ.—

**ಶ್ರುತ್ಯೋರ್ದಕ್ಷಿಣವಾಮಯೋಸ್ತು ಖಮಳಂ ನ್ಯಸ್ಯೇತ್ ಕಲಾಢ್ಯಂ ತಥಾ**
**ನಾಸಾಯಾಂ ಸಕಳಾಕಳೌ ಕ್ಷಪಣಕಂ ಚಾಂತಸ್ಥಮುಕ್ಷ್ಣೋರ್ನ್ಯಸೇತ್ ।**
**ಪೂರ್ವೋಕ್ತೇಷು ವಿರಿಂಚಿಕೇಶವಹರೇಶಾನಾಂಶ್ಚ ಶಕ್ತಿಂ ಶಿವಂ**
**ದೃಷ್ಟ್ವಾ ಚಾನ್ನವಿಲೋಕನಂ ಗ್ರಹಮಥೋ ಶೂನ್ಯೇನ ಚೌಷ್ಮ್ಯೇನ ಚ ||೧೩೪||**

**ಖಂಡಾದೇಃ ಕ್ಷಪಣಾತ್ತು ಸಂಗ್ರಹಮಥೋ ಬಂಧಂ ತಥೋತ್ಕ್ಷೇಪಣಂ**
**ಗ್ರಾಸಸ್ಯಾಸ್ವದನಂ ವಿಮೋಚನಮಥಸ್ಸಂಚಾರಣಂ ಚೋಷ್ಮತಃ ।**
**ಕೃತ್ವಾ ಯಸ್ಸಕಲಾತ್ಕೃತಾತ್ಮಮಳಕಾಚ್ಛೂನ್ಯಾತ್ತಥಾ ನಿಷ್ಕಳಾತ್**
**ಧ್ಯಾನಾಚ್ಚ ಕ್ಷಯತೋನ್ನತೋಷ್ಮಮನುತೋ ಭುಂಜೀತ ಲೇಹ್ಯಾದಿಕಂ ||೧೩೫||**

**ಬ್ರಹ್ಮಾನ್ನಂ ತು ರಸೋಹರಿಸ್ತು ಭಗವಾನ್ ಭೋಕ್ತಾ ಮಹೇಶಸ್ಸ್ವಯಂ**
**ದಾತಾಪ್ಯೇಷ ಮಹೇಶ್ವರಸ್ತು ಯದಿವಾ ಭೋಜ್ಯಂ ತು ಮಾಯಾತ್ಮಕಂ ।**
**ಕರ್ತಾ ತಸ್ಯ ಮಹೇಶ್ವರಃ ಕಿಲ ಪರೋ ಭೋಕ್ತಾ ಶಿವಶ್ಶಕ್ತಿಮಾನ್**
**ಪ್ರಾಣಾಪಾನಗಮಾಗಮೀತಿ ಮತಿಮಾನ್ ಭುಂಜೀತ ನೀಚೇಷ್ವಪಿ ||೧೩೬||**

**ಏವಂ ಭಾವಯುಗೇವ ದೇಶಿಕವರೋ ಗೇಹೇ ಮಹಾಪಾಪಿನಾಂ**
**ಭುಂಜಾನೋಽಪಿ ನ ದೋಷಭಾಗಪಿ ತಥಾ ಶ್ರಾದ್ಧಾದಿದುರ್ಭೋಜನೇ ।**

ಭುಕ್ತ್ವೇಽಸ್ಮಿನ್ ಸಕೃದೇವ ವೇದವಿದುಷಾಂ ಕೋಟಿರ್ಭವೇದ್ಭೋಜಿತಾ
ನಿಶ್ವಾಸೋಕ್ತಮಿದಂ ತ್ರಿಸಪ್ತಕುಲಜಾ ದಾತುರ್ವ್ರಜೇಯುಶ್ಶಿವಂ ||೧೩೭||

ಟೀಕೆ— ಇಲ್ಲಿ ಅವಿಚ್ಛಿನ್ನವಾದ ಸಂಪ್ರದಾಯವುಳ್ಳ ಆಚಾರ್ಯೋತ್ತಮನು ಭೋಜನಮಾಡುವಾಗ ಕಾಲೋತ್ತರಸಂಹಿತೆಯಲ್ಲಿ ಹೇಳಿರುವಂತೆ ೧ ಸಕಳ, ೨ ನಿಷ್ಕಳ, ೩ ಶೂನ್ಯ, ೪ ಕಲಾಢ್ಯ, ೫ ಖಮಳ, ೬ ಕ್ಷಪಣ, ೭ ಅಂತಸ್ಥ, ೮ ಕಂಠೋಷ್ಠ ಎಂದು ಎಂಟುಬಗೆಯಾಗಿರುವ ಪ್ರಾಸಾದಮಂತ್ರದ ಉಚ್ಚಾರಣ ಭೇದಗಳನ್ನು ತಿಳಿದು ಅಲ್ಲಲ್ಲಿ ನ್ಯಾಸವನ್ನು ಮಾಡಿ ಭೋಜನಮಾಡಬೇಕಾದ ಕ್ರಮವೆಂತೆಂದರೆ—ದಕ್ಷಿಣವಾಮಯೋಃ ಶ್ರುತ್ಯೋಃ—ಬಲಗಿವಿ ಎಡಗಿವಿಗಳಲ್ಲಿ ಕ್ರಮವಾಗಿ, ಖಮಳಂ ತಥಾ-ಕಲಾಢ್ಯಂ—ಖಮಳ-ಕಲಾಢ್ಯ ಎಂಬ ಎರಡುಮಂತ್ರಗಳನ್ನು, ನ್ಯಸ್ಯೇತ್—ನ್ಯಾಸಮಾಡಬೇಕು. ನಾಸಾಯಾಂ—ಮೂಗಿನ ರಂಧ್ರಗಳೆರಡರಲ್ಲಿಯೂ ಸಕಳಾಕಳೌ—ಸಕಳ-ನಿಷ್ಕಳಮಂತ್ರಗಳೆರಡನ್ನು, ನ್ಯಸೇತ್—ಬಲ-ಎಡ ಎಂಬ ಕ್ರಮವನ್ನನುಸರಿಸಿ ನ್ಯಾಸಮಾಡಬೇಕು. ಅಕ್ಷ್ಣೋಃ—ಕಣ್ಣುಗಳೆರಡರಲ್ಲಿಯೂ (ಅದೇ ಕ್ರಮದಿಂದ) ಕ್ಷಪಣಕಂ-ಅಂತಸ್ಥಂ ಚ ಕ್ಷಪಣಕ-ಅಂತಸ್ಥ ಎಂಬ ಎರಡುಮಂತ್ರಗಳನ್ನು, ನ್ಯಸೇತ್—ನ್ಯಾಸಮಾಡಬೇಕು. ಪೂರ್ವೋಕ್ತೇಷು—ಹೀಗೆ ಹೇಳಿದ ಆರುಮಂತ್ರಗಳಲ್ಲಿಯೂ, ವಿರಿಂಚಿಕೇಶವಹರೇಶಾನಾಂಶ್ಚ ಶಕ್ತಿಂ-ಶಿವಂ—ಬ್ರಹ್ಮ-ವಿಷ್ಣು-ರುದ್ರ-ಮಹೇಶ್ವರ-ಶಕ್ತಿ-ಶಿವ ಈ ಆರುಮಂದಿಗಳನ್ನು ಅಧಿಪತಿಗಳನ್ನಾಗಿ, (ಧ್ಯಾಯೇತ್)—ಧ್ಯಾನಿಸಬೇಕು, ದೃಷ್ಟ್ವಾ—ಕಣ್ಣಿನಿಂದ, ಅನ್ನವಿಲೋಕನಂ—ಕಂಚುಮೊದಲಾದ ಪಾತ್ರಗಳಲ್ಲಿರುವ ಅನ್ನದ ಅವಲೋಕನವನ್ನೂ, ಶೂನ್ಯೇನ-ಓಷ್ಠ್ಯೇನ ಚ—ಶೂನ್ಯಮಂತ್ರದಿಂದಲೂ ಕಂಠೋಷ್ಠ್ಯಮಂತ್ರದಿಂದಲೂ, ಗ್ರಹಂ—ಕೈಯಿಂದ ಅನ್ನದ ರಾಶೀಕರಣವನ್ನೂ, ಕ್ಷಪಣಾತ್—ಕ್ಷಪಣಮಂತ್ರೋಚ್ಚಾರಣೆಯಿಂದ, ಖಂಡಾದೇಃ—ಖಂಡಖಂಡವಾಗಿರುವ ಪಲ್ಯಮುಂತಾದುದರ, ಸಂಗ್ರಹಂ—ಏಕೀಕರಣವನ್ನೂ, ಕೃತ್ವಾ—ಮಾಡಿ, ಅಥೋ—ಅನಂತರದಲ್ಲಿ, ಬಂಧಂ—ತೊವ್ವೆ-ವ್ಯಂಜನ ಮುಂತಾದುವುಗಳೊಡನೆ ಸೇರಿಸಿ ಅನ್ನದಕಲಸುವಿಕೆಯನ್ನೂ, ೧ ತಥಾ—ಹಾಗೆಯೇ, ಉತ್ಕ್ಷೇಪಣಂ—ಬಾಯಿಸಮೀಪಕ್ಕೆ ಅನ್ನದ ಎತ್ತುವಿಕೆಯನ್ನೂ, ೨ ಗ್ರಾಸಸ್ಯ— ಕಬಳದ (ತುತ್ತಿನ) ಆಸ್ವದನಂ—ಭುಜಿಸುವಿಕೆಯನ್ನೂ, ೩ ಓಷ್ಠತೋವಿಮೋಚನಂ—ತುಟಿಯದೆಸೆಯಿಂದ ದೂರವಾಗಿ ಕೈತೆಗೆಯುವಿಕೆಯನ್ನೂ, ೪ ಅಧಸ್ಸಂಚಾರಣಂ—ಅದಾದಮೇಲೆ ಕೆಳಕ್ಕೆ ಕೈತರುವಿಕೆಯನ್ನೂ ೫ ಅಂತು ಈ ಐದುಕೆಲಸಗಳನ್ನೂ

ಸಕಳತಃ—ಸಕಳಮಂತ್ರದಿಂದಲೂ, ೧ ಕೃತಾತ್—ಕೃತವೆಂಬ ಉಪನಾಮಧೇಯವುಳ್ಳ, ಖಮಳಕಾತ್—ಖಮಳಮಂತ್ರದಿಂದಲೂ, ೨ ಶೂನ್ಯಾತ್—ಶೂನ್ಯಮಂತ್ರದಿಂದಲೂ, ೩ ತಥಾನಿಷ್ಕಳಾತ್—ಹಾಗೆಯೇ ನಿಷ್ಕಳಮಂತ್ರದಿಂದಲೂ, ೪ ಕ್ಷಯತೋ ಧ್ಯಾನಾತ್—ಕ್ಷಯಮಂತ್ರಧ್ಯಾನದಿಂದಲೂ, ೫ ಅಂತು ಈ ಐದುಮಂತ್ರಗಳಿಂದಲೂ ಕ್ರಮವಾಗಿ, ಕೃತ್ವಾ—ಮಾಡಿ, ಓಷ್ಠಮನುತಃ—ಕಂಠೋಷ್ಠಮಂತ್ರದಿಂದ, ಲೇಹ್ಯಾದಿಕಂ—ಲೇಹ್ಯವೇಮೊದಲಾದ, ಅನ್ನಂ—ತಿನ್ನುವುದಕ್ಕೆ ಯೋಗ್ಯವಾದ ವಸ್ತುವನ್ನು, ಭುಂಜೀತ—ತಿನ್ನಬೇಕು. (ಕಿಂಚ)—ಮತ್ತು ಭೋಜನಮಾಡುವ ಸಮಯದಲ್ಲಿ, ಅನ್ನಂ ಬ್ರಹ್ಮ—ಅನ್ನವು ಬ್ರಹ್ಮಸ್ವರೂಪವಾಗಿರುವುದು; ರಸೋ ಭಗವಾನ್ ಹರಿಃ—ಮಧುರಾದಿರಸವೂ ಮಹಾವಿಷ್ಣುವಿನ ಸ್ವರೂಪವಾಗಿರುವುದು. ಭೋಕ್ತಾ—ಭೋಜನಮಾಡುವವನು, ಸ್ವಯಂ ಮಹೇಶಃ—ಸಾಕ್ಷಾತ್‌ಮಹೇಶ್ವರನೇ ಆಗಿರುವನು. ಏಷ ದಾತಾಽಪಿ—ಅನ್ನವನ್ನು ಬಡಿಸುವ ಈ ಮನುಷ್ಯನೂ, ಮಹೇಶ್ವರಃ—ಸಾಕ್ಷಾನ್ಮಹೇಶ್ವರನೇ ಆಗಿರುವನು ಎಂದಾಗಲಿ; ಯದಿವಾ—ಅಥವಾ, ಭೋಜ್ಯಂ—" ತಿನ್ನುವುದಕ್ಕೆ ಯೋಗ್ಯವಾದ ಸಮಸ್ತವಸ್ತುವೂ, ಮಾಯಾತ್ಮಕಂ—ಎರಡುಬಗೆಯಾದ ಮಾಯಾಸ್ವರೂಪವಾಗಿರುವುದು; ತಸ್ಯ ಕರ್ತಾ ಕಿಲ—ಅಂಥ ಅನ್ನಕ್ಕೆ ಕರ್ತೃವೆನಿಸಿಕೊಂಡವನು, ಮಾಹೇಶ್ವರಃ—ಸಾಕ್ಷಾನ್ಮಹೇಶ್ವರನೇ ಆಗಿರುವನು. ಭೋಕ್ತಾ ಚ—ಅಂಥ ಅನ್ನವನ್ನು ಭುಜಿಸುವವನೂ, ಪರಃ—ಸರ್ವೋತ್ಕೃಷ್ಟನಾದ, ಶಕ್ತಿಮಾನ್—ಶಕ್ತಿಸಹಿತನಾಗಿರುವ, ಶಿವಃ—ಪರಶಿವನೇ ಆಗಿರುವನು ಎಂದಾಗಲಿ ಧ್ಯಾನಿಸಿ, (ಸ ಏವ)-ಅಂಥ ಪರಶಿವನೇ, ಪ್ರಾಣಾಪಾನಗಮಾಗಮಿ—ಪ್ರಾಣಾಪಾನಾದಿವಾಯುಸ್ವರೂಪಿಯಾಗಿ ಗಮನಾಗಮನಕೆಲಸಗಳನ್ನು ನಡೆಯಿಸುತ್ತಿರುವನು, ಇತಿಮತಿಮಾನ್—ಹೀಗೆಂಬ ಬುದ್ಧಿಯುಳ್ಳವನಾಗಿರುವನಾದರೆ, ನೀಚೇಷ್ವಪಿ—ಸಂಪ್ರದಾಯವಿಚ್ಛೇದವುಳ್ಳ ನೀಚಜನರಲ್ಲಿಯೂ, ಭುಂಜೀತ—ಭೋಜನವನ್ನು ಮಾಡಬಹುದು. ಏವಂ ಭಾವಯುಗೇವ—ಭೋಜನಕಾಲದಲ್ಲಿ ಇಂಥ ಭಾವನೆಯುಳ್ಳವನೇ, ದೇಶಿಕವರಃ—ಶ್ರೇಷ್ಠನಾದ ಗುರುವೆನಿಸಿಕೊಳ್ಳುವನು, (ಸಃ)—ಅಂಥವನು, ಮಹಾಪಾಪಿನಾಂ—ಪ್ರಬಲವಾದ ಪಾಪವುಳ್ಳವರ, ಗೇಹೇ—ಮನೆಯಲ್ಲಿ, ಭುಂಜಾನೋಽಪಿ—ಭುಜಿಸುವವನಾದರೂ, ನ ದೋಷಭಾಕ್—ದೋಷವನ್ನು ಹೊಂದಲಾರನು. ತಥಾ—ಹಾಗೆಯೇ, ಶ್ರಾದ್ಧಾದಿದುರ್ಭೋಜನೇ—ಶ್ರಾದ್ಧಾನ್ನವೇ ಮೊದಲಾದ ದುಷ್ಟಾನ್ನಭೋಜನದಲ್ಲಿಯೂ, ನ ದೋಷಭಾಕ್—ದೋ

ಷವನ್ನು ಹೊಂದಲಾರನು. (ಕಿಂಚ)—ಮತ್ತು ಸಕೃದೇವ—ಒಂದೇಆವರ್ತಿ, ಅಸ್ಮಿನ್ ಭುಕ್ತೇ ಸತಿ—ಇಂಥ ಆಚಾರ್ಯನು ಭೋಜನಮಾಡಿದವನಾದರೆ, ವೇದವಿದುಷಾಂ ಕೋಟಿಃ—ವೇದವನ್ನು ಅರ್ಥಸಹಿತವಾಗಿ ತಿಳಿದಿರುವ ಬ್ರಾಹ್ಮಣರ ಒಂದುಕೋಟಿಸಂಖ್ಯೆಯು, ಭೋಜಿತಾ ಭವೇತ್—ಭೋಜನಮಾಡಿಸಲ್ಪಟ್ಟದಾಗುವುದು. (ಕಿಂಚ)—ಮತ್ತು, ದಾತುಃ—ಅಂಥ ಆಚಾರ್ಯನಿಗೋಸ್ಕರ ಅನ್ನದಾನವನ್ನು ಮಾಡಿದವನ, ಕುಲಜಾಃ—ಕುಲದಲ್ಲಿ ಹುಟ್ಟಿದ, ತ್ರಿಸಪ್ತ—ಇಪ್ಪತ್ತೊಂದುಪುರುಷರು, ಶಿವಂ—ಪರಶಿವನನ್ನು, ವ್ರಜೇಯುಃ—ಹೊಂದುವರು. ಇದಂ—ಇಂಥ ಶಿವಭಕ್ತಭೋಜನಮಹಿಮೆಯು, ನಿಶ್ವಾಸೋಕ್ತಂ—ನಿಶ್ವಾಸಾಗಮದಲ್ಲಿ ಹೇಳಲ್ಪಟ್ಟಿರುವುದು ||೧೩೪-೧೩೫-೧೩೬-೧೩೭||

**ಅವತರಣಿಕೆ**— ಪಾಪಿಷ್ಠರಾದವರಿಂದ ದ್ರವ್ಯವನ್ನು ಪರಿಗ್ರಹಿಸಿದರೆ ಆಗ ಪ್ರಸಕ್ತವಾಗುವ ದೋಷದ ಪರಿಹಾರಕ್ಕಾಗಿ ಎಂಟು ಬಗೆಯಾದ ಪ್ರಾಸಾದಮಂತ್ರದ ನ್ಯಾಸವಿಶೇಷವನ್ನು ಎರಡು ಬಗೆಯಾಗಿ ನೂರುಮೂವತ್ತೆಂಟು ಮತ್ತು ನೂರುಮೂವತ್ತೊಂಬತ್ತನೆಯ ಶ್ಲೋಕಗಳಲ್ಲಿ ಉಪದೇಶಿಸುತ್ತಾರೆ.—

**ಹೃದ್ಯಂತರ್ಬಹಿರೇವ ಮೂರ್ಧ್ನಿ ನಯನೇ ದಕ್ಷೇ ಚ ಸವ್ಯೇ ತಥಾ**
**ಚೂಡಾಯಾಂ ವದನೇ ತನೌ ಚ ಸಕಳಾದ್ಯೋಽಷ್ಟಾತಮಂತ್ರಾನ್ ನ್ಯಸೇತ್।**
**ಯದ್ವಾಷ್ಟಂ ಸಕಲಾಂಗಕೇಽಮೃತರುಚಂ ನ್ಯಸ್ಯೇತ್ತಥಾ ದೇಶಿಕೋ**
**ಹೃದ್ದೇಶೇ ಸಕಳಂ ತು ಪಂಚರುಚಿಕಂ ಭಾವಂ ತು ಶೂನ್ಯಂ ವರೇ ||೧೩೮||**
**ಸಿಂದೂರಾರುಣಸುಪ್ರಭಂ ಕ್ಷಪಣಕಂ ಚೂಡಾಪದೇ ನೇತ್ರಯೋ**
**ಶ್ಶಂಖಾಭಂ ಖಮಳಂ ಕಲಾಢ್ಯಮರುಣಂ ಚಾಂತಸ್ಥಮಬ್ಜಾಂಬುಜಂ।**
**ವಕ್ತ್ರೇ ಕುಂದಶಶಿಪ್ರಭಂ ಬಹಿರತೋಽಪ್ಯಂತಸ್ತನೌ ನಿಷ್ಕಳಂ**
**ಪಾಪಿದ್ರವ್ಯಪರಿಗ್ರಹಾದ್ಯಘಹರೋ ನ್ಯಾಸಶ್ಕತೋಽರ್ಥಾಧಿಕಃ ||೧೩೯||**

**ಟೀಕೆ**— ದೇಶಿಕಃ—ಪೂರ್ವೋಕ್ತನಾದ ಆಚಾರ್ಯನು, ಹೃದಿ—ಬ್ರಹ್ಮಸ್ಥಾನವಾದ ಹೃದಯದಲ್ಲಿ, ಅಂತಃ-ಬಹಿಃ—ಒಳಗೂ ಹೊರಗೂ ೧-೨, ಮೂರ್ಧ್ನಿ—ಶಿರಸ್ಸಿನಲ್ಲಿಯೂ ೩, ದಕ್ಷೇ ಸವ್ಯೇ ಚ ನಯನೇ—ಬಲಗಣ್ಣಿನಲ್ಲಿಯೂ ಎಡಗಣ್ಣಿನಲ್ಲಿಯೂ ೪-೫, ತಥಾ ಚೂಡಾಯಾಂ—ಹಾಗೆಯೇ ಶಿಖೆಯಲ್ಲಿಯೂ ೬, ವದನೇ—ಮುಖದಲ್ಲಿಯೂ ೭, ತನೌ ಚ—ಸರ್ವಶರೀರದಲ್ಲಿಯೂ ೮, ಸಕಳಾದ್ಯೋಽಷ್ಟಾಂತಮಂತ್ರಾನ್—ಸಕಳಮಂತ್ರಮೊದಲುಗೊಂಡು ಕಂಠೋಷ್ಠಮಂತ್ರ

ದವರಿಗೆ ಇರುವ ಪ್ರಾಸಾದಮಂತ್ರಗಳೆಂಟನ್ನೂ, ನ್ಯಸೇತ್—ಕ್ರಮವಾಗಿ ನ್ಯಾಸ ಮಾಡಬೇಕು; ಯದ್ವಾ—ಅಥವಾ ಪಕ್ಷಾಂತರದಲ್ಲಿ, ಓಷ್ಠಂ—ಕಂಠೋಷ್ಠಮಂತ್ರವನ್ನು, ಅಮೃತರುಚಂ (ಧ್ಯಾತ್ವಾ)—ಅಮೃತಕಾಂತಿಯುಳ್ಳದನ್ನಾಗಿ ಧ್ಯಾನಿಸಿ, ತಥಾ—ಹಾಗೆಯೇ (ಮೊದಲು ಹೇಳಿದಂತೆಯೇ), ಸಕಲಾಂಗಕೇ—ಸರ್ವಶರೀರ ದಲ್ಲಿಯೂ, ನ್ಯಸೇತ್—ನ್ಯಾಸಮಾಡಬೇಕು: ಸಕಳಂ— ಸಕಳಮಂತ್ರವನ್ನು ಪಂಚರುಚಿಕಂ—(ಧ್ಯಾತ್ವಾ)—ಐದುಬಣ್ಣಗಳುಳ್ಳದನ್ನಾಗಿ ಧ್ಯಾನಿಸಿ, ಹೃದ್ದೇಶೇ —ಹೃದಯಪ್ರದೇಶದಲ್ಲಿ, ನ್ಯಸೇತ್—ನ್ಯಾಸಮಾಡಬೇಕು. ಶೂನ್ಯಂ—ಶೂನ್ಯ ಮಂತ್ರವನ್ನು, ಭಾವಂ (ಧ್ಯಾತ್ವಾ)—ಭಾವಾಕಾರವಾಗಿ ಧ್ಯಾನಿಸಿ, ವರೇ— ಶ್ರೇಷ್ಠವಾದ ಅಂಗವೆನಿಸಿಕೊಂಡ ಶಿರಸ್ಸಿನಲ್ಲಿ, ನ್ಯಸೇತ್—ನ್ಯಾಸಮಾಡಬೇಕು, ಕ್ಷಪಣಕಂ—ಕ್ಷಪಣಕಮಂತ್ರವನ್ನು, ಸಿಂದೂರಾರುಣಸುಪ್ರಭಂ (ಧ್ಯಾತ್ವಾ) —ಸಿಂದೂರದಂತೆ ಕೆಂಪಾದಕಾಂತಿಯುಳ್ಳದನ್ನಾಗಿ ಧ್ಯಾನಿಸಿ, ಚೂಡಾಪದೇ— ಶಿಖಾಸ್ಥಾನದಲ್ಲಿ, ನ್ಯಸೇತ್—ನ್ಯಾಸಮಾಡಬೇಕು. ಖಮಳಂ—ಖಮಳಮಂತ್ರ ವನ್ನು, ಶಂಖಾಭಂ—ಶಂಖದಂತೆ ಬಿಳುಪಾದ ಕಾಂತಿಯುಳ್ಳದಾಗಿಯೂ, ಕಲಾಢ್ಯಂ—ಕಲಾಢ್ಯಮಂತ್ರವನ್ನು, ಅರುಣಂ (ಧ್ಯಾತ್ವಾ)—ಕೆಂಪಾದಕಾಂತಿಯುಳ್ಳ ದಾಗಿಯೂ ಧ್ಯಾನಿಸಿ, ನೇತ್ರಯೋಃ—ಎರಡು ಕಣ್ಣುಗಳಲ್ಲಿಯೂ, ನ್ಯಸೇತ್— ನ್ಯಾಸಮಾಡಬೇಕು. ಅಂತಸ್ಥಂ—ಅಂತಸ್ಥಮಂತ್ರವನ್ನು, ಅಬ್ಜಾಂಬುಜಂ (ಧ್ಯಾತ್ವಾ)—ಬಿಳಿದಾವರೆಯಂತೆಯೂ ಕೆಂದಾವರೆಯಂತೆಯೂ ಧ್ಯಾನಿಸಿ, ವಕ್ತ್ರೇ —ಮುಖದಲ್ಲಿ, ನ್ಯಸೇತ್—ನ್ಯಾಸಮಾಡಬೇಕು. ನಿಷ್ಕಳಂ—ನಿಷ್ಕಳಮಂತ್ರ ವನ್ನು, ಕುಂದಶಶಿಪ್ರಭಂ (ಧ್ಯಾತ್ವಾ)—ಮಲ್ಲಿಗೆಯ ಹೂವಿನಂತೆಯೂ ಚಂದ್ರ ನಂತೆಯೂ ಬಿಳುಪಾದಕಾಂತಿಯುಳ್ಳದನ್ನಾಗಿ ಧ್ಯಾನಿಸಿ, ತನೌ—ಶರೀರದಲ್ಲಿ, ಬಹಿ ರಂತರಪಿ—ಹೊರಗೂ ಒಳಗೂ, ನ್ಯಸೇತ್—ನ್ಯಾಸಮಾಡಬೇಕು. ಏವಂ ನ್ಯಾಸಃ —ಹೀಗೆ ಮಾಡಲ್ಪಟ್ಟ ನ್ಯಾಸವು, ಪಾಪಿದ್ರವ್ಯಪರಿಗ್ರಹಾದ್ಯಘಹರಃ—ಪಾಪಿ ಷ್ಠರಾದವರ ದ್ರವ್ಯವ ಸ್ವೀಕರಿಸುವಿಕೆಯೇ ಮೊದಲಾದುದರಿಂದ ಉಂಟಾದ ದೋಷ ವನ್ನು ಪರಿಹರಿಸುವಂಥದಾಗುವುದು. (ಕಿಂಚ)—ಮತ್ತು, ಅರ್ಧಾಧಿಕಶ್ಶತಃ— ಉಳಿದ ಮಂತ್ರಗಳ ನ್ಯಾಸದ ಮಹಿಮೆಗಿಂತಲೂ ನೂರೈವತ್ತುಪಾಲು ಹೆಚ್ಚಾದ ಮಹಿಮೆಯುಳ್ಳದಾಗಿರುವುದು ||೧೩೮-೧೩೯||

**ಅವತರಣಿಕೆ**= ಶಿವಲಿಂಗಪ್ರತಿಷ್ಠಾವಿಷಯದಲ್ಲಿ ಪ್ರತಿಷ್ಠಾ, ಸ್ಥಾಪನಂ, ಸ್ಥಿತಸ್ಥಾಪನಂ, ಉತ್ಥಾಪನಂ, ಆಸ್ಥಾಪನಂ ಎಂಬ ಐದು ಭೇದಗಳನ್ನು ನೂರುನಲವತ್ತನೆಯ ಪದ್ಯದಲ್ಲಿ ವಿವರಿಸುತ್ತಾರೆ.

**ಪೀಠಂ ಲಿಂಗಮುಮಾ ಶಿವಸ್ತದನಯೋರ್ಯೋಗಃ ಪ್ರತಿಷ್ಠೋದಿತಾ**
**ವಿಧ್ಯುಕ್ತಃ ಪರದೃಕ್ಕ್ರಿಯಾತ್ಮಕತನುಸ್ಸಾ ಪಂಚಧೈವೋದಿತಾ ।**
**ಲಿಂಗೇ ಬ್ರಹ್ಮಶಿಲಾದಿಕೇ ಶಿವಯುತೇ ಪಿಠೇ ಸ್ಥಿತಸ್ಥಾಪನಂ**
**ಬಾಣೇ ಸ್ಥಾಪನಮೇವ ಬೇರಮನು ಯಚ್ಚಾಸ್ಥಾಪನೋತ್ಥಾಪನೇ**
**॥೧೪೦॥**

**ಟೀಕೆ**— ಶಿವಪೂಜೆಗೋಸ್ಕರ ಕಲ್ಲುಮೊದಲಾದುವುಗಳಿಂದ ಮಾಡಿದ ಪೀಠಂ—ಪಿಂಡಿಕೆಯೆಂಬ ಆಸನವು, ಉಮಾ—ಶಕ್ತಿಸ್ವರೂಪವಾಗಿರುವುದು. ಲಿಂಗಂ—ಅದರ ಮೇಲಿರುವ ಲಿಂಗವು, ಶಿವಃ—ಶಿವಸ್ವರೂಪವಾಗಿರುವುದು. ತತ್—ಆದಕಾರಣ, ಅನಯೋಃ—ಈ ಪೀಠಲಿಂಗಗಳಿಗೆ, ವಿಧ್ಯುಕ್ತಃ—ಶೈವಾಗಮವಿಧಿಯಲ್ಲಿ ಹೇಳಲ್ಪಟ್ಟ, ಯೋಗಃ—ಸಂಬಂಧಮಾಡಿಸುವಿಕೆಯು, ಪ್ರತಿಷ್ಠಾ-ಉದಿತಾ—ಪ್ರತಿಷ್ಠೆಯೆಂದು ಹೇಳಲ್ಪಟ್ಟಿರುವುದು. ಪರದೃಕ್‌ಕ್ರಿಯಾತ್ಮಕತನುಃ—ಮೇಲಾದ ಜ್ಞಾನಶಕ್ತಿಯೇನು ಕ್ರಿಯಾಶಕ್ತಿಯೇನು ಇವುಗಳೇ ಸ್ವರೂಪವಾಗಿ ಉಳ್ಳ ಶಿವಶಕ್ತಿಮೂರ್ತಿಯೆಂಬ, ಸಾ—ಆ ಪೀಠಲಿಂಗಗಳ ಸಂಯೋಗರೂಪವಾದ ಪ್ರತಿಷ್ಠೆಯು, ಪಂಚಧಾ—ಐದುಪ್ರಕಾರವಾಗಿ, ಉದಿತಾ—ಹೇಳಲ್ಪಟ್ಟಿರುವುದು. ಹೇಗೆಂದರೆ; ಬ್ರಹ್ಮಶಿಲಾದಿಕೇ—ಆಧಾರಶಿಲೆಮೊದಲಾದ, ಲಿಂಗೇ—ಲಿಂಗದಲ್ಲಿ ಉಂಟುಮಾಡಲ್ಪಡುವ ಆ ಪೀಠಸಂಯೋಗವು ಪ್ರತಿಷ್ಠೆಯೆನಿಸಿಕೊಳ್ಳುವುದು. ೧. ಶಿವಯುತೇ—ಅಭಿನ್ನವಾಗಿ ಲಿಂಗಸಹಿತವಾಗಿರುವ, ಪೀಠೇ—ಸ್ಫಟಿಕಾದಿಪೀಠದಲ್ಲಿ ಮಂತ್ರಪೂತವಾಗಿ ಮಾಡುವ ಸಂಯೋಗವು, ಸ್ಥಿತಸ್ಥಾಪನಂ—ಸ್ಥಿತಸ್ಥಾಪನವೆನಿಸಿಕೊಳ್ಳುವುದು ೨. ಬಾಣೇ—ಬಾಣಲಿಂಗದಲ್ಲಿ ಮಾಡುವ ಪ್ರತಿಷ್ಠೆಯು, ಸ್ಥಾಪನಂ—ಸ್ಥಾಪನವೆನಿಸಿಕೊಳ್ಳುವುದು ೩. ಬೇರಂ—ಸದಾಶಿವಾದಿಮೂರ್ತಿಬಿಂಬವನ್ನು ಉದ್ದೇಶಿಸಿ ಮಾಡುವ ಪ್ರತಿಷ್ಠೆಯು ಆಸ್ಥಾಪನಂ—ಆಸ್ಥಾಪನವೆನಿಸಿಕೊಳ್ಳುವುದು ೪. (ಕಿಂಚ)—ಮತ್ತು, ಅನು ಯತ್—ಯಾವ ಲಿಂಗಪೀಠಸಂಯೋಗವು ಜೀರ್ಣವಾಗಿದ್ದು ತಿರುಗಿ ಸುಧಾರಿಸಲ್ಪಡುವುದೋ, ತತ್ ಉತ್ಥಾಪನಂ—ಅದು ಉತ್ಥಾಪನವೆನಿಸಿಕೊಳ್ಳುವುದು ೫. ॥೧೪೦॥

**ಅವತರಣಿಕೆ**— ಶಿವಪೂಜೆಗೆ ಮುಖ್ಯಾಧಾರವಾಗಿರುವ ಲಿಂಗಗಳ ಲಕ್ಷಣಗಳನ್ನು ಹೇಳಲುಪಕ್ರಮಿಸಿ, ಅಂಥ ಲಕ್ಷಣವು ಆಗಮಗ್ರಂಥಗಳಲ್ಲಿ ಅನೇಕ ವಿಧವಾಗಿ ಉಕ್ತವಾಗಿರುವುದರಿಂದ ಇಲ್ಲಿ ಅಷ್ಟನ್ನೂ ಹೇಳುವುದಾದರೆ ಈ ಗ್ರಂಥವು ದೊಡ್ಡದಾದೀತೆಂಬ ಭೀತಿಯಿಂದ ಅವುಗಳಲ್ಲಿ ಮುಖ್ಯವಾಗಿರುವ ಆಢ್ಯ-ಅನಾಢ್ಯ-

ಸುರೇಡ್ಯ-ಸರ್ವಸಮ ಎಂಬ ನಾಲ್ಕುವಿಧವಾದ ಲಿಂಗಗಳ ಲಕ್ಷಣಗಳನ್ನು ನೂರು ನಲವತ್ತೊಂದನೆಯ ಶ್ಲೋಕದಲ್ಲಿ ತೋರಿಸುತ್ತಾರೆ.—

**ಸಾರ್ಧಾಶಾವಸುಸಾರ್ಧಸಿಂಧುಚರಣೋನಾಗಾದ್ರಿಸಾಂಘ್ರ್ಯಷ್ಟಕೋ**
**ದನ್ವನ್ಮಂಗಳನಂದದಿಕ್ಷಣಿನಗೈ ಸ್ತ್ರ್ಯಂಶೋನ್ನತಿಸ್ತ್ರ್ಯಷ್ಟಕೇ ।**
**ದೈರ್ಘ್ಯೇ ಚೇದ್ವಿಕೃತೌ ರಸಾಕ್ಷಜಲಧಿ ತ್ರ್ಯಂಶಾನ್ವಿತೇಷ್ವಂಶಕೈ**
**ರಾಢ್ಯಾನಾಢ್ಯಸುರೇಡ್ಯಸರ್ವಸಮಕೇ ಲಿಂಗೇ ವಿದುರ್ವಿಸ್ತೃತಿಂ ॥೧೪೧॥**

**ಟೀಕೆ—** ಈ ಶ್ಲೋಕದಲ್ಲಿ "ಆಢ್ಯಾನಾಢ್ಯಸುರೇಡ್ಯಸರ್ವಸಮಕೇ" ಎಂಬ ದ್ವಂದ್ವಸಮಾಸಾಂತವಾದ ಪದದಲ್ಲಿ ಸೇರಿರುವ ನಾಲ್ಕು ಪದಗಳೂ ಪ್ರತ್ಯೇಕವಾಗಿ "ಲಿಂಗೇ" ಎಂಬ ಸಪ್ತಮ್ಯಂತಪದಕ್ಕೆ ವಿಶೇಷಣವಾಗಿರುವುದರಿಂದ ವ್ಯಾಖ್ಯಾನಸೌಕರ್ಯಕ್ಕಾಗಿ ಸಮಾಸವನ್ನು ಒಡೆದು ಆ ನಾಲ್ಕುಪದಗಳನ್ನೂ ಪ್ರತ್ಯೇಕವಾಗಿ ಸಪ್ತಮ್ಯಂತಪದದಂತೆ ಮಾಡಿ ವ್ಯಾಖ್ಯಾನಮಾಡುವೆವು ; ಮತ್ತು ಆಢ್ಯ, ಅನಾಢ್ಯ, ಸುರೇಡ್ಯ, ಸರ್ವಸಮಕ ಎಂಬ ನಾಲ್ಕುಬಗೆಯ ಲಿಂಗಗಳಿಗೆ ಪ್ರತಿಯೊಂದರಲ್ಲಿಯೂ ಬ್ರಹ್ಮಭಾಗ, ವಿಷ್ಣುಭಾಗ, ರುದ್ರಭಾಗವೆಂಬ ಮೂರು ಭಾಗಗಳ ಔನ್ನತ್ಯಪರಿಮಾಣವನ್ನು ಪೂರ್ವಾರ್ಧದಲ್ಲಿರುವ ತೃತೀಯಾಂತವಾದ ದೊಡ್ಡ ಸಮಾಸಪದದಿಂದ ತಿಳುಹಿಸುವುದಾಗಿರುವುದು. ಆದುದರಿಂದ ಈ ಸಮಾಸ ಪದದಲ್ಲಿ ಸೇರಿರುವ ಹನ್ನೆರಡುಪದಗಳನ್ನೂ ನಾಲ್ಕುರಾಶಿಮಾಡಿ ಆಢ್ಯಾದಿ ನಾಲ್ಕು ಲಿಂಗಗಳಿಗೆ ಹಂಚಬೇಕು. ಹನ್ನೆರಡು ಪದಗಳನ್ನು ನಾಲ್ಕು ರಾಶಿಯಾಗಿ ವಿಭಾಗಿಸುವಾಗ ಒಂದೊಂದು ರಾಶಿಗೆ ಮೂರುಮೂರು ಪದಗಳು ಬರುವುವು. ಪ್ರತಿಯೊಂದು ರಾಶಿಯಲ್ಲಿಯೂ ಅಡಗಿರುವ ಈ ಮೂರುಮೂರು ಪದಗಳೂ ಆಢ್ಯಾದಿಲಿಂಗಗಳು ನಾಲ್ಕರ ಬ್ರಹ್ಮಭಾಗ, ವಿಷ್ಣುಭಾಗ, ರುದ್ರಭಾಗಗಳ ಔನ್ನತ್ಯದ ಪರಿಮಾಣವನ್ನು ಕ್ರಮವಾಗಿ ತೋರಿಸುವುವು.

ಆಗ—ಸಾರ್ಧಾಶಾ, ವಸು, ಸಾರ್ಧಸಿಂಧು ಎಂಬ ಮೊದಲನೆಯ ಮೂರು ಪದಗಳು ಆಢ್ಯವೆಂಬ ಮೊದಲನೆಯ ಲಿಂಗದ ಬ್ರಹ್ಮಭಾಗ, ವಿಷ್ಣುಭಾಗ, ರುದ್ರ ಭಾಗಗಳ ಔನ್ನತ್ಯಪರಿಮಾಣವನ್ನು ಕ್ರಮವಾಗಿ ತೋರಿಸುವುವು.

ಚರಣೋನಾಗ, ಅದ್ರಿ, ಸಾಂಘ್ರ್ಯಷ್ಟಕ ಎಂಬ ಎರಡನೆಯ ಮೂರು ಪದಗಳು ಅನಾಢ್ಯವೆಂಬ ಎರಡನೆಯ ಲಿಂಗದ ಬ್ರಹ್ಮಭಾಗ, ವಿಷ್ಣುಭಾಗ, ರುದ್ರ ಭಾಗಗಳ ಔನ್ನತ್ಯಪರಿಮಾಣವನ್ನು ಕ್ರಮವಾಗಿ ತೋರಿಸುವುವು.

ಉದನ್ವತ್, ಮಂಗಳ, ನಂದ ಎಂಬ ಮೂರನೆಯ ಮೂರು ಪದಗಳು ಸುರೇಡ್ಯವೆಂಬ ಮೂರನೆಯ ಲಿಂಗದ ಬ್ರಹ್ಮಭಾಗ, ವಿಷ್ಣುಭಾಗ, ರುದ್ರಭಾಗಗಳ ಔನ್ನತ್ಯಪರಿಮಾಣವನ್ನು ಕ್ರಮವಾಗಿ ತೋರಿಸುವುವು.

ದಿಕ್, ಫಣಿ, ನಗ ಎಂಬ ನಾಲ್ಕನೆಯ ಮೂರು ಪದಗಳು ಸರ್ವಸಮವೆಂಬ ನಾಲ್ಕನೆಯ ಲಿಂಗದ ಬ್ರಹ್ಮಭಾಗ, ವಿಷ್ಣುಭಾಗ, ರುದ್ರಭಾಗಗಳ ಔನ್ನತ್ಯ ಪರಿಮಾಣವನ್ನು ಕ್ರಮವಾಗಿ ತೋರಿಸುವುವು. ಹೇಗೆಂದರೆ—

ಆಢ್ಯೇಲಿಂಗೇ—ಆಢ್ಯವೆಂದು ಹೇಳಲ್ಪಡುವ ಲಿಂಗದಲ್ಲಿ, ತ್ರ್ಯಷ್ಟಕೇ (ಕೃತೇ ಸತಿ)—ಮೂರೆಂಟು (ಇಪ್ಪತ್ತುನಾಲ್ಕು) ಭಾಗಗಳು ಮಾಡಲ್ಪಟ್ಟಮೇಲೆ, ತ್ರ್ಯಂಶೋನ್ನತಿಃ—ಬ್ರಹ್ಮಭಾಗ-ವಿಷ್ಣುಭಾಗ-ರುದ್ರಭಾಗಗಳೆಂಬ ಮೂರು ಭಾಗಗಳ ಔನ್ನತ್ಯಪ್ರಮಾಣವು ಹೇಗೆಂದರೆ; ಸಾರ್ಧಾಶಾ—ಇಪ್ಪತ್ತುನಾಲ್ಕು ಭಾಗಗಳಾಗಿ ಭಾಗಿಸಲ್ಪಟ್ಟ ಲಿಂಗದ ಮೂಲಭಾಗದಲ್ಲಿ ಚತುರಶ್ರವಾದ ಬ್ರಹ್ಮಭಾಗವು ಎಂಟೂವರೆ ಭಾಗ ಉನ್ನತವಾಗಿರುವುದು; ವಸು—ಮಧ್ಯಭಾಗದಲ್ಲಿ ಎಂಟು ಮೂಲೆಗಳುಳ್ಳ ವಿಷ್ಣುಭಾಗವು ಎಂಟುಭಾಗವುಳ್ಳುದಾಗಿರುವುದು; ಸಾರ್ಧಸಿಂಧು—ತುದಿಯಲ್ಲಿ ವರ್ತುಳವಾದ ರುದ್ರಭಾಗವು ಏಳೂವರೆ ಭಾಗವುಳ್ಳುದಾಗಿರುವುದು. ಅಂತು ಭಾಗಗಳು ಇಪ್ಪತ್ತುನಾಲ್ಕುಳ್ಳ ಆಢ್ಯಲಿಂಗದಲ್ಲಿ ಬ್ರಹ್ಮಾದಿಭಾಗಗಳು ಈ ಉಕ್ತರೀತಿಯಲ್ಲಿರುವುವು. ಅನಾಢ್ಯೇ ಲಿಂಗೇ—ಅನಾಢ್ಯವೆಂಬ ಎರಡನೆಯ ಲಿಂಗದಲ್ಲಿ—ಚರಣೋನಾಗ—ಬುಡದಲ್ಲಿ ಬ್ರಹ್ಮಭಾಗವು—ಒಂದು ಪಾದ ಕಡಿಮೆಯಾದ ಎಂಟುಭಾಗಗಳುಳ್ಳುದಾಗಿರುವುದು; ಎಂದರೆ ಏಳೂಮುಕ್ಕಾಲು ಭಾಗಗಳುಳ್ಳುದಾಗಿರುವುದು. ಅದ್ರಿ—ಮಧ್ಯದಲ್ಲಿ ವಿಷ್ಣುಭಾಗವು ಎಂಟುಭಾಗಗಳುಳ್ಳುದಾಗಿರುವುದು. ಸಾಂಘ್ರ್ಯಷ್ಟಕ—ತುದಿಯಲ್ಲಿ ರುದ್ರಭಾಗವು—ಒಂದು ಪಾದ ಹೆಚ್ಚಾಗಿರುವ ಎಂಟು ಭಾಗಗಳುಳ್ಳುದಾಗಿರುವುದು; ಎಂದರೆ ಎಂಟೂಕಾಲುಭಾಗಗಳುಳ್ಳುದಾಗಿರುವುದು. ಅಂತು ಭಾಗಗಳು ಇಪ್ಪತ್ತುನಾಲ್ಕುಳ್ಳ ಅನಾಢ್ಯಲಿಂಗದಲ್ಲಿ ಬ್ರಹ್ಮಾದಿಭಾಗಗಳು ಉಕ್ತರೀತಿಯಲ್ಲಿರುವುವು. ಸುರೇಡ್ಯೇ ಲಿಂಗೇ—ಸುರೇಡ್ಯವೆಂಬ ಲಿಂಗದಲ್ಲಿ—ಉದನ್ವತ್—ಬುಡದಲ್ಲಿ ಬ್ರಹ್ಮಭಾಗವು ಏಳುಭಾಗಗಳುಳ್ಳುದಾಗಿರುವುದು. ಮಂಗಳ—ಮಧ್ಯದಲ್ಲಿ ವಿಷ್ಣುಭಾಗವು ಎಂಟು ಭಾಗಗಳುಳ್ಳುದಾಗಿರುವುದು. ನಂದ—ಮೇಲೆ ರುದ್ರಭಾಗವು ಒಂಬತ್ತು ಭಾಗಗಳುಳ್ಳುದಾಗಿರುವುದು. ಅಂತು ಭಾಗಗಳು ಇಪ್ಪತ್ತುನಾಲ್ಕುಳ್ಳ ಸುರೇಡ್ಯಲಿಂಗದಲ್ಲಿ ಬ್ರಹ್ಮಾದಿಭಾಗಗಳು ಉಕ್ತರೀತಿಯಲ್ಲಿರುವುವು. ಸರ್ವಸಮಕೇ-ಲಿಂಗೇ—ಸರ್ವಸಮಲಿಂಗದಲ್ಲಿ—ದಿಕ್

—ಬುಡದಲ್ಲಿ ಬ್ರಹ್ಮಭಾಗವು ಎಂಟುಭಾಗಗಳುಳ್ಳುದಾಗಿರುವುದು. ಫಣಿ— ಮಧ್ಯ ದಲ್ಲಿ ವಿಷ್ಣುಭಾಗವು ಎಂಟು ಭಾಗಗಳುಳ್ಳುದಾಗಿರುವುದು. ನಗ— ತುದಿಯಲ್ಲಿ ರುದ್ರಭಾಗವು ಎಂಟುಭಾಗಗಳುಳ್ಳುದಾಗಿರುವುದು. ಅಂತು ಭಾಗಗಳು ಇಪ್ಪತ್ತು ನಾಲ್ಕುಳ್ಳ ಸರ್ವಸಮಲಿಂಗದಲ್ಲಿ ಬ್ರಹ್ಮಾದಿಭಾಗಗಳು ಉಕ್ತರೀತಿಯಲ್ಲಿ ಸಮಾನಗಳಾಗಿರುವುವು.

ಹೀಗೆ ನಾಲ್ಕುಬಗೆಯಾದ ಲಿಂಗಗಳಲ್ಲಿಯೂ ಬ್ರಹ್ಮ, ವಿಷ್ಣು, ರುದ್ರಭಾಗ ಗಳಿಗೆ ಹೇಳಿದ ಅಳತೆಗಳೆಲ್ಲವೂ, ದೈರ್ಘ್ಯೇ (ಸ್ಯುಃ)—ಔನ್ನತ್ಯದ (ಎತ್ತರದ) ಅಳತೆಗಳಾಗಿರುವುವೆಂದು ತಿಳಿಯಬೇಕು. ಚೇತ್—ಹಾಗಾದರೆ ಅಗಲದ ಅಳತೆ ಗಳನ್ನು ತಿಳಿಯುವ ಕ್ರಮವು ಹೇಗೆಂದರೆ—ತ್ರ್ಯಂಶಾನ್ವಿತೇಷು—ಬ್ರಹ್ಮ, ವಿಷ್ಣು, ರುದ್ರ ಎಂಬ ಮೂರುಭಾಗಗಳೊಡನೆ ಕೂಡಿರುವ ನಾಲ್ಕುಬಗೆಯ ಲಿಂಗ ಗಳಲ್ಲಿಯೂ, ದೈರ್ಘ್ಯೇ—ಉದ್ದದಲ್ಲಿರುವ ಅಳತೆಯು, ವಿಕೃತೌ—ಹದಿನಾರುಭಾಗ ಮಾಡಲ್ಪಟ್ಟರೆ ಲಬ್ಧವಾಗುವ ಭಾಗಗಳೊಳಗೆ, ರಸ—ಆಢ್ಯಲಿಂಗದಲ್ಲಿ ಆರುಭಾಗ ಗಳ ಅಳತೆಯು ಬ್ರಹ್ಮ, ವಿಷ್ಣು, ರುದ್ರ ಎಂಬ ಮೂರುಭಾಗಗಳಲ್ಲಿಯೂ, ಸಮಾನ ವಾಗಿರಬೇಕು. ಅಕ್ಷ—ಅನಾಢ್ಯಲಿಂಗದಲ್ಲಿ ಐದುಭಾಗಗಳ ಅಳತೆಯು ಬ್ರಹ್ಮ, ವಿಷ್ಣು, ರುದ್ರ ಎಂಬ ಮೂರುಭಾಗಗಳಲ್ಲಿಯೂ ಸಮಾನವಾಗಿರಬೇಕು. ಜಲಧಿ— ಸುರೇಡ್ಯಲಿಂಗದಲ್ಲಿ ನಾಲ್ಕುಭಾಗಗಳ ಅಳತೆಯು ಬ್ರಹ್ಮ, ವಿಷ್ಣು, ರುದ್ರ ಎಂಬ ಮೂರುಭಾಗಗಳಲ್ಲಿಯೂ ಸಮಾನವಾಗಿರಬೇಕು. ಅಂಶಕ—ಸರ್ವಸಮಲಿಂಗದಲ್ಲಿ ಐದು ಭಾಗಗಳ ಅಳತೆಯು ಬ್ರಹ್ಮ, ವಿಷ್ಣು, ರುದ್ರ ಎಂಬ ಮೂರು ಭಾಗಗಳಲ್ಲಿ ಯೂ ಸಮಾನವಾಗಿರಬೇಕು. (ಇತಿ)—ಈ ರೀತಿಯಲ್ಲಿ, ವಿಸ್ತೃತಿಂ—ನಾಲ್ಕು ಲಿಂಗಗಳಲ್ಲಿಯೂ ಅಗಲದ ಅಳತೆಯನ್ನು, ವಿದುಃ—ಶೈವಶಾಸ್ತ್ರಜ್ಞರು ತಿಳಿಯು ತ್ತಾರೆ ||೧೪೧||

**ಅವತರಣಿಕೆ**— ಉಕ್ತವಾದ ನಾಲ್ಕುಬಗೆಯ ಲಿಂಗಗಳ ಶಿರೋಭಾಗದ ಆಕಾರವಿಶೇಷಗಳನ್ನು ನೂರುನಲವತ್ತೆರಡನೆಯ ಶ್ಲೋಕದಲ್ಲಿ ಹೇಳುತ್ತಾರೆ—

**ಚಂದ್ರಾರ್ಧಮಾಢ್ಯೇ ತ್ರಿಪುಷಂ ತ್ವನಾಢ್ಯೇ**
**ಲಿಂಗೇ ಸುರೇಡ್ಯೇ ಚರಣಾಯುಧಾಂಡಂ ||**
**ಛತ್ರಂ ಶಿರಸ್ಸರ್ವಸಮೇಽಪಿ ಕುರ್ಯಾತ್**
**ಪೃಥಕ್ಪೃಥಗ್ಭಿನ್ನವಪುಶ್ಚತುರ್ಧಾ** ||೧೪೨||

**ಟೀಕೆ**— ಆಢ್ಯೇ ಲಿಂಗೇ—ಆಢ್ಯಲಿಂಗದಲ್ಲಿ, ಶಿರಃ—ಶಿರೋಭಾಗವನ್ನು, ಚಂದ್ರಾರ್ಧಂ—ಅರ್ಧಚಂದ್ರಾಕಾರವಾಗಿಯೂ, ಅನಾಢ್ಯೇ ಲಿಂಗೇ—ಅನಾಢ್ಯಲಿಂ

ಗದಲ್ಲಿ, ತ್ರಿಪುಷಂ—ಸೌತೇಕಾಯಿಯ ಆಕಾರವಾಗಿಯೂ, ಸುರೇಡ್ಯೇ ಲಿಂಗೇ—ಸುರೇಡ್ಯಲಿಂಗದಲ್ಲಿ, ಚರಣಾಯುಧಾಂಡಂ—ಕೋಳಿಮೊಟ್ಟೆಯ ಆಕಾರವಾಗಿಯೂ, ಸರ್ವಸಮೇ ಲಿಂಗೇ—ಸರ್ವಸಮಲಿಂಗದಲ್ಲಿ, ಛತ್ರಂ—ಕೊಡೆಯ ಆಕಾರವಾಗಿಯೂ, ಕುರ್ಯಾತ್—ಮಾಡಬೇಕು. (ಇದಂ)—ಈಗ ಹೇಳಿದ ಈ ನಾಲ್ಕು ಆಕಾರವೂ, ಪೃಥಕ್ಪೃಥಕ್—ಪ್ರತ್ಯೇಕಪ್ರತ್ಯೇಕವಾಗಿ ಒಂದೊಂದೂ ಚತುರ್ಧಾ—ನಾಲ್ಕುವಿಧವಾಗಿ, ಭಿನ್ನವಪುಃ—ಭೇದಪಟ್ಟಿರುವ ಆಕಾರವುಳ್ಳದಾಗಿ, (ಸ್ಯಾತ್)—ಆಗುವುದು. ||೧೪೨||

**ಅವತರಣಿಕೆ**— ಆಢ್ಯ-ಸುರೇಡ್ಯಲಿಂಗಗಳಲ್ಲಿ ಮಾಡಬೇಕಾದ ಚಿಹ್ನರೂಪವಾದ ಲಿಂಗದ ಸಂಖ್ಯಾವಿಶೇಷವನ್ನೂ, ಸರ್ವಸಮಲಿಂಗದಲ್ಲಿ ಮಾಡಬೇಕಾದ ಮುಖಲಿಂಗಸಂಖ್ಯಾವಿಶೇಷವನ್ನೂ ನೂರುನಲವತ್ತುಮೂರನೆಯ ಪದ್ಯದಲ್ಲಿ ತೋರಿಸುತ್ತಾರೆ—

**ಏಕಾಧಿಕಂ ಲಿಂಗಸಹಸ್ರಮಾಢ್ಯೇ**
**ತ್ವಷ್ಟೋತ್ತರಂ ಲಿಂಗಶತಂ ಸುರೇಡ್ಯೇ ।**
**ವಿಶೇಷತಸ್ಸರ್ವಸಮೇ ಸವಕ್ತ್ರ**
**ಮಾಢ್ಯೇಽಪ್ಯನಾಢ್ಯೇಽಪಿ ನ ದೇವಪೂಜ್ಯೇ ||೧೪೩||**

**ಟೀಕೆ**— ಆಢ್ಯೇ—ಆಢ್ಯಲಿಂಗದಲ್ಲಿ, ಏಕಾಧಿಕಂ ಲಿಂಗಸಹಸ್ರಂ—ಸಾವಿರದ ಒಂದು ಲಿಂಗಗಳನ್ನು, (ಕುರ್ಯಾತ್)—ಮಾಡಬೇಕು. ಸುರೇಡ್ಯೇ—ಸುರೇಡ್ಯಲಿಂಗದಲ್ಲಿ, ಅಷ್ಟೋತ್ತರಂ ಲಿಂಗಶತಂ—ನೂರೆಂಟುಲಿಂಗಗಳನ್ನು, (ಕುರ್ಯಾತ್)—ಮಾಡಬೇಕು. ವಿಶೇಷತಃ—ವಿಶೇಷವಾಗಿ, ಸರ್ವಸಮೇ—ಸರ್ವಸಮಲಿಂಗದಲ್ಲಿ, ಸವಕ್ತ್ರಂ—ಐದು ಮುಖಗಳುಳ್ಳ ಲಿಂಗವನ್ನು, (ಕುರ್ಯಾತ್)—ಮಾಡಬೇಕು. ಆಢ್ಯೇಽಪಿ—ಆಢ್ಯಲಿಂಗದಲ್ಲಿಯೂ, ಅನಾಢ್ಯೇಽಪಿ—ಅನಾಢ್ಯಲಿಂಗದಲ್ಲಿಯೂ, ದೇವಪೂಜ್ಯೇ—ಸುರೇಡ್ಯಲಿಂಗದಲ್ಲಿಯೂ, (ವಕ್ತ್ರಂ ನ ಕುರ್ಯಾತ್)—ಮುಖವನ್ನು ಮಾಡಕೂಡದು ||೧೪೩||

**ಅವತರಣಿಕೆ**— ಬಾಣಲಿಂಗದ ಲಕ್ಷಣಗಳನ್ನೂ ಅದರ ಪೂಜೆಯಿಂದ ಆಗುವ ಫಲವಿಶೇಷಗಳನ್ನೂ ನೂರುನಲವತ್ತುನಾಲ್ಕನೆಯ ಪದ್ಯದಲ್ಲಿ ತೋರಿಸುತ್ತಾರೆ—

**ಬಾಣಂ ಲಿಂಗಮಧಿಷ್ಠಿತೇಶಮನಿಶಂ ಮಾಷಾದಿಹಸ್ತಾಂತಕಂ**
**ಜಂಬೂಪಕ್ವಫಲೋಪಮಂ ಮಧುನಿಭಂ ಭೃಂಗಪ್ರಭಂ ಕಾಚಭಂ ।**

**ನೀಲಂ ವಾ ಪ್ರತಿಬಿಂಬವದ್ಧರಿತಭಂ ತದ್ವರ್ಣಪೀಠಂ ಕಕುಪ್
ತುಲ್ಯಂ ಗೋಸ್ತನಕುಕ್ಕುಟಾಂಡಸದೃಶಂ ಸ್ನಿಗ್ಧಂ ಸದಾಽರ್ಚ್ಯಂ ಶ್ರಿಯೈ**
||೧೪೪||

**ಟೀಕೆ**— ಬಾಣಂ ಲಿಂಗಂ—ಬಾಣಲಿಂಗವು, ಅನಿಶಂ—ಸರ್ವಕಾಲದಲ್ಲಿಯೂ, ಅಧಿಷ್ಠಿತೇಶಂ—ಈಶ್ವರನಿಂದ ಅಧಿಷ್ಠಿಸಲ್ಪಟ್ಟಿರುವುದು. ಮತ್ತು ಆ ಬಾಣಲಿಂಗಸ್ವರೂಪವು, ಮಾಷಾದಿಹಸ್ತಾಂತಕಂ—ಅರ್ಧಅಂಗುಲಮೊದಲುಗೊಂಡು ಒಂದು ಹಸ್ತದವರೆಗೆ ಆಗುವ ಪರಿಮಾಣವುಳ್ಳುದಾಗಿಯೂ, ಜಂಬೂಪಕ್ವಫಲೋಪಮಂ—ಪಕ್ವವಾದ ನೇರಳೆಹಣ್ಣಿಗೆ ಸಮಾನವಾಗಿಯೂ, ಮಧುನಿಭಂ—ಜೇನುತುಪ್ಪದ ಬಣ್ಣದಂತೆ ಬಣ್ಣವುಳ್ಳುದಾಗಿಯೂ, ಭೃಂಗಪ್ರಭಂ—ದುಂಬಿಯ ಬಣ್ಣದಂತೆ ಬಣ್ಣವುಳ್ಳುದಾಗಿಯೂ, ಕಾಚಭಂ—ಕಾಜಿಗೆ ಸಮಾನವಾದ ಬಣ್ಣವುಳ್ಳುದಾಗಿಯೂ, ನೀಲಂ—ನೀಲವರ್ಣವುಳ್ಳುದಾಗಿಯೂ, ಪ್ರತಿಬಿಂಬವತ್—ತೊಂಡೆಯ ಹಣ್ಣಿನಂತೆ ಇರುವದಾಗಿಯೂ, ಹರಿತಭಂ—ಹಸರು ಬಣ್ಣವುಳ್ಳುದಾಗಿಯೂ, ತದ್ವರ್ಣಪೀಠಂ—ತನ್ನ ಬಣ್ಣಕ್ಕೆ ಸಮಾನವಾದ ಬಣ್ಣವುಳ್ಳ ಪೀಠವುಳ್ಳುದಾಗಿಯೂ, ಕಕುಪ್ತುಲ್ಯಂ—ದಿಕ್ಪಾಲಕರ ಬಣ್ಣದಂತೆ ಬಣ್ಣವುಳ್ಳುದಾಗಿಯೂ, ಗೋಸ್ತನಕುಕ್ಕುಟಾಂಡಸದೃಶಂ—ಹಸುವಿನ ಸ್ತನ, ಮತ್ತು ಕೋಳಿಯ ಮೊಟ್ಟೆ ಇವುಗಳ ಆಕಾರದಂತೆ ಆಕಾರವುಳ್ಳುದಾಗಿಯೂ, ಸ್ನಿಗ್ಧಂ—ಕನ್ನಡಿಯಂತೆ ಹೊಳೆಯುವಂಥದಾಗಿಯೂ, ಹೀಗೆ ಹಲವು ಬಗೆಯಾದ ಲಕ್ಷಣಗಳುಳ್ಳುದಾಗಿರುವುದು. (ತತ್)—ಅಂಥ ಲಕ್ಷಣೋಪೇತವಾದ ಬಾಣಲಿಂಗವು, ಶ್ರಿಯೈ—ಭೋಗಮೋಕ್ಷಗಳೆಂಬ ಎರಡು ವಿಧವಾದ ಸಂಪತ್ಪ್ರಾಪ್ತಿಗೋಸ್ಕರ, ಸದಾ--ಸರ್ವಕಾಲದಲ್ಲಿಯೂ, ಅರ್ಚ್ಯಂ--ಪೂಜಿಸಲ್ಪಡತಕ್ಕುದಾಗಿರುವುದು. ||೧೪೪||

**ಅವತರಣಿಕೆ**— ಪೂಜೆಗೆ ಉಪಯೋಗಿಸಬಾರದೆಂದು ನಿಷಿದ್ಧಗಳಾಗಿರುವ ಬಾಣಲಿಂಗವಿಶೇಷಗಳ ಸ್ವರೂಪವನ್ನು ನೂರುನಲವತ್ತೈದನೆಯ ಶ್ಲೋಕದಲ್ಲಿ ತೋರಿಸುತ್ತಾರೆ.—

**ವರ್ಜ್ಯಂ ಕರ್ಕಶರೂಕ್ಷಕುಬ್ಜಮುಗುರು ಸ್ಥೂಲಂ ಶಿತಾಗ್ರಂ ಕೃಶಂ
ತ್ರ್ಯಶ್ರಂ ದೀರ್ಘಮಲಕ್ಷಣಂ ಸಸುಷಿರಂ ನೀಲಾಸಿನೀಚಕ್ಷತಂ ।
ರೇಖಾಬಿಂದುಕಳಂಕಶೂಲಚಿಪುಟಂ ಪಿಂಗಂ ಸ್ಫುರದ್ಧೀರಕಂ
ಪೀಠಂ ವಾ ಸ್ಫುಟಿತಂ ಸಕರ್ಣಿಕಮಿದಂ ಸರ್ವಂ ಮುಮುಕ್ಷೋಶ್ಶುಭಂ**
||೧೪೫||

**ಟೀಕೆ**— ಕರ್ಕಶರೂಕ್ಷಕುಬ್ಜಂ—ಬಹಳ ಕಠಿನವಾಗಿಯೂ, ಬಹಳಕ್ರೂರವಾಗಿಯೂ, ಬಹಳ ಹ್ರಸ್ವವಾಗಿಯೂ, ಅಗುರು—ಭಾರವಿಲ್ಲದುದಾಗಿಯೂ, ಸ್ಥೂಲಂ—ಬಹಳ ದಪ್ಪವಾಗಿಯೂ, ಶಿತಾಗ್ರಂ—ಬಹಳ ಹದವಾದ ತುದಿಯುಳ್ಳುದಾಗಿಯೂ, ಕೃಶಂ—ಬಹಳ ಸಣ್ಣದಾಗಿಯೂ, ತ್ರ್ಯಶ್ರಂ—ತ್ರಿಕೋಣವಾಗಿಯೂ, ದೀರ್ಘಂ—ಬಹಳ ಉದ್ದವಾಗಿಯೂ, ಅಲಕ್ಷಣಂ—ಶಾಸ್ತ್ರೋಕ್ತಲಕ್ಷಣವಿಲ್ಲದುದಾಗಿಯೂ, ಸಸುಷಿರಂ—ರಂಧ್ರವುಳ್ಳುದಾಗಿಯೂ, ನೀಲಾಸಿನೀಚಕ್ಷತಂ—ಬಹಳ ಕಪ್ಪಾಗಿಯೂ, ಖಡ್ಗಾಕಾರವಾಗಿಯೂ, ಚಂಡಾಲರೇ ಮೊದಲಾದ ನೀಚಜಾತಿಯುವರಿಂದ ಸ್ಪರ್ಶಿಸಲ್ಪಟ್ಟದಾಗಿಯೂ, ರೇಖಾಬಿಂದುಕಳಂಕ ಶೂಲ ಚಿಪುಟಂ—ರೇಖೆ, ಬೊಟ್ಟು (ಚುಕ್ಕಿ), ಕಳಂಕ, ಶೂಲ ಇವುಗಳೊಡನೆ, ಕೂಡಿದುದಾಗಿಯೂ, ಮಧ್ಯದಲ್ಲಿ ಬಿಳುಪು ಬಣ್ಣವುಳ್ಳುದಾಗಿಯೂ, ಪಿಂಗಂ—ತುದಿಯಲ್ಲಿ ಕಪಿಲಬಣ್ಣವುಳ್ಳುದಾಗಿಯೂ, ಸ್ಫುರತ್ ಹೀರಕಂ—ಪ್ರಕಾಶಮಾನವಾದ ಹೀರಕವೆಂಬ ಮಣಿಯ ದೋಷಕ್ಕೆ ಸಮಾನವಾಗಿರುವ ದೋಷವುಳ್ಳುದಾಗಿಯೂ ಪೀಠಂ ವಾ ಸ್ಫುಟಿತಂ—ಪೀಠವು ಒಡೆದಿರುವಂಥವಾಗಿಯೂ, ಸ್ಫುಟಿತಂ—ಅಥವಾ ತಾನೇ ಒಡೆದಿರುವಂಥದಾಗಿಯೂ, ಸಕರ್ಣಿಕಂ—ಕರ್ಣಿಕೆಯೊಡನೆ ಕೂಡಿದುದಾಗಿಯೂ ಇರುವ ಬಾಣಲಿಂಗವು ವರ್ಜ್ಯಂ—ತ್ಯಾಜ್ಯವಾಗಿರುವುದು. (ಪೂಜೆಗೆ ಯೋಗ್ಯವಲ್ಲ.) ಇದಂ ಸರ್ವಂ—ಆದರೆ ಈಗ ಹೇಳಿದ ಎಲ್ಲಾ ಲಿಂಗವೂ, ಮುಮುಕ್ಷೋಃ—ಮೋಕ್ಷಕಾಮನಾದವನಿಗೆ, ಶುಭಂ—ಶುಭಫಲವನ್ನು ಕೊಡುವಂಥದಾಗಿ ಶ್ರೇಷ್ಠವಾಗಿರುವುದು ||೧೪೫||

**ಅವತರಣಿಕೆ**— ಈ ಭೂಲೋಕದಲ್ಲಿರುವ ಹದಿನಾಲ್ಕು ಕೋಟಿ ಬಾಣಲಿಂಗಗಳಿರುವ ಸ್ಥಳವಿಶೇಷಗಳನ್ನು ನೂರುನಲವತ್ತಾರನೆಯ ಶ್ಲೋಕದಲ್ಲಿ ಉಪದೇಶಿಸುತ್ತಾರೆ.—

**ಪ್ರತ್ಯೇಕಂ ಕೋಟಿರೇಕಾ ಹ್ಯಮರಪತಿಮಹೇಂದ್ರಾದ್ರಿನೇಪಾಳಕನ್ಯಾ**
**ತೀರ್ಥಾರಣ್ಯೇಷು ಕೋಟಿತ್ರಿತಯಮಥ ಪೃಥಕ್ಛ್ರೀಗಿರೌ ಲಿಂಗಶೈಲೇ ।**
**ಕಾಳೀಗರ್ತೇ ಚ ಪೀಠೈರ್ವಿರಹಿತಸಹಿತಾನ್ಯೇವ ಲಿಂಗಾನಿ ಸರ್ವ**
**ಪ್ರಾಸಾದೋಪೇತಪೀಠಾನ್ಯಥ ಹರಿದಧಿಪಾರ್ಚ್ಯಾನಿ ಕಾಮ್ಯಾನಿ ಚ ಸ್ಯುಃ**
**||೧೪೬||**

**ಟೀಕೆ**— ಅಮರಪತಿ—ಅಮರೇಶ್ವರವೆಂಬ ಪರ್ವತ, ಮಹೇಂದ್ರಾದ್ರಿ—ಮಹೇಂದ್ರಪರ್ವತ, ನೇಪಾಳ—ನೇಪಾಳಪರ್ವತ, ಕನ್ಯಾತೀರ್ಥಾರಣ್ಯೇಷು, ಈ

ಹೆಸರಿನಿಂದ ಪ್ರಸಿದ್ಧನಾಗಿರುವ ತೀರ್ಥವಿಶೇಷ, ಅದರ ಸಮೀಪದಲ್ಲಿರುವ ಅಡವಿ ಈ ಐದು ಕ್ಷೇತ್ರಗಳಲ್ಲಿ, ಪ್ರತ್ಯೇಕಂ—ಒಂದೊಂದರಲ್ಲಿ, ಏಕಾಕೋಟಿಃ—ಒಂದೊಂದು ಕೋಟಿ ಬಾಣಲಿಂಗವು ಇರುವುದು. ಅಂತು ಐದು ಕೋಟಿ ಲಿಂಗಗಳಾದುವು. ಶ್ರೀಗಿರೌ—ಶ್ರೀಶೈಲದಲ್ಲಿಯೂ, ಲಿಂಗಶೈಲೇ—ಲಿಂಗಾಚಲದಲ್ಲಿಯೂ, ಕಾಳೀ ಗರ್ತೇ ಚ—ಕಾಳೀಗರ್ತವೆಂಬ ಪರ್ವತದಲ್ಲಿಯೂ, ಪೃಥಕ್—ಪ್ರತ್ಯೇಕವಾಗಿ ಒಂದೊಂದರಲ್ಲಿಯೂ, ಕೋಟಿತ್ರಿತಯಂ—ಮೂರು ಮೂರು ಕೋಟಿ ಬಾಣಲಿಂಗಗಳಿರುವುವು. ಅಂತು ಈ ಒಂಬತ್ತು ಕೋಟಿ ಬಾಣಲಿಂಗಗಳೂ ಮೊದಲು ಹೇಳಿದ ಐದುಕೋಟಿ ಬಾಣಲಿಂಗಗಳೂ ಸೇರಿ ಹದಿನಾಲ್ಕುಕೋಟಿ ಬಾಣಲಿಂಗಗಳು ಈ ಭೂಮಂಡಲದಲ್ಲಿರುವುವು. ಇಂಥ ಬಾಣಲಿಂಗಗಳೊಳಗೆ, (ಕತಿ ಚಿತ್) ಲಿಂಗಾನಿ —ಕೆಲವು ಲಿಂಗಗಳು, ಪೀಠೈಃ—ಪೀಠಗಳಿಂದ, ವಿರಹಿತಸಹಿತಾನಿ—ಶೂನ್ಯಗಳಾಗಿಯೂ ಸಹಿತಗಳಾಗಿಯೂ, ಸ್ಯುಃ—ಇರುವುವು. ಅವುಗಳಲ್ಲಿ ಪೀಠವಿಲ್ಲದ ಲಿಂಗಗಳಿಗೆ,ಮಣ್ಣು-ಮರ-ಕಲ್ಲು ಮೊದಲಾದುವುಗಳಿಂದ ಮಾಡಲ್ಪಟ್ಟ, ಸರ್ವಪ್ರಾಸಾದೋಪೇತ—ಆಲಯಗಳೆಲ್ಲದರಲ್ಲಿಯೂ ಅಂಥ ಆಲಯಗಳಿಗೆ ಸಮಾನವಾಗಿಯೇ ಇರುವ ಮಣ್ಣು-ಮರ-ಕಲ್ಲು-ಮೊದಲಾದುವುಗಳಿಂದ ಕೂಡಿರುವ, ಪೀಠಾನಿ —ಪೀಠಗಳು, (ಕಾರ್ಯಾಣಿ)—ಮಾಡಲ್ಪಡಬೇಕು. ಹರಿದಧಿಪ—ಇಂದ್ರಾದಿ ದಿಕ್ಪಾಲಕರಿಂದ, ಅರ್ಚ್ಯಾನಿ—ಪೂಜಿಸಲ್ಪಡತಕ್ಕವುಗಳಾದ ಲಿಂಗಗಳು, ಕಾಮ್ಯಾನಿ ಸ್ಯುಃ—ಅವರಿಗೆ ಇಂದ್ರಾದಿಪದಗಳನ್ನು ಕೊಟ್ಟಿರುವುವಾದುದರಿಂದ ಕಾಮ್ಯಗಳೆನಿಸಿಕೊಳ್ಳುವುವು. ||೧೪೬||

**ಅವತರಣಿಕೆ**—'ಮಂಡೂಕವಾಸ್ತು' ಎಂಬ ಹೆಸರಿನಿಂದ ಪ್ರಸಿದ್ಧಿಗೊಂಡಿರುವ ಅರವತ್ತುನಾಲ್ಕು ಪದಗಳುಳ್ಳ ವಾಸ್ತುಕ್ಷೇತ್ರದಲ್ಲಿ ಐವತ್ತುಮೂರು ದೇವತೆಗಳಿಂದ ಅಧಿಷ್ಠಿಸಲ್ಪಟ್ಟಿರುವ ವಾಸ್ತುಪುರುಷನ ಉದ್ಧಾರಕ್ರಮವನ್ನು ನೂರುನಲವತ್ತೇಳನೆಯ ಶ್ಲೋಕದಲ್ಲಿ ಹೇಳುತ್ತಾರೆ.—

**ಕ್ಷೇತ್ರೇ ಚಾಷ್ಟಪದೀಕೃತೇ ಯುಮರಸ್ಯೈ ರಜ್ಜ್ವಷ್ಟಕಂ ವಂಶಕೌ**
**ಕೋಣಸ್ಥೌ ವಿಧಿರಂತರೇ ಶ್ರುತಿಪದೇ ಪೂರ್ವಾದಿಷಡ್ಭಾಗಗಾಃ ।**
**ಚತ್ವಾರಸ್ತ್ರಿದಶಾ ವಿದಿಕ್ಷುಪರಯೋರ್ದ್ವೌ ದ್ವೌ ಪದಸ್ಥೌ ಬಹಿಃ**
**ಕೋಣಾರ್ಧೇಷು ತಥಾ ಪರೇಷ್ವಿಪದಗಾ ಬಾಹ್ಯೇಽನ್ಯ ಐಶೇಂದ್ರತಃ**
**||೧೪೭||**

ಟೀಕೆ— ಅಷ್ಟಪದೀಕೃತೇ—ಪೂರ್ವಪಶ್ಚಿಮವಾಗಿಯೂ ದಕ್ಷಿಣೋತ್ತರವಾಗಿಯೂ ಒಂಬೊಂಬತ್ತು ದಾರಗಳನ್ನು ಹೊಡೆದು ಎಂಟೆಂಟು ಪದಗಳುಳ್ಳದಾಗಿ ಮಾಡಲ್ಪಟ್ಟ, ಕ್ಷೇತ್ರೇ—ಚತುಷ್ಕೋಣಕ್ಷೇತ್ರದಲ್ಲಿ, ಯಮ—ಎರಡು ಪಾರ್ಶ್ವಗಳಲ್ಲಿಯೂ ಕೊನೆಯಲ್ಲಿರುವ ಎರಡನೆಯ ಪದಗಳಿಂದ ಹಿಡಿದು ಮೂಲೆಮೂಲೆಯಾಗಿ ಹಾಕಲ್ಪಟ್ಟ ಎರಡು ಜೋಡಿಗಳಾದ ನಾಲ್ಕು ದಾರಗಳಿಂದಲೂ, ರಸ್ಯೈಃ—ಹಾಗೆಯೇ ಅದಕ್ಕೆ ಪಕ್ಕದಲ್ಲಿರುವ ಮೂರನೆಯ ಪದಗಳಿಂದ ಹಿಡಿದು ಆರು ಪದಗಳವರೆಗೆ ಮೂಲೆಮೂಲೆಯಾಗಿ ಹಾಕಲ್ಪಟ್ಟ ನಾಲ್ಕು ಸೂತ್ರಗಳಿಂದಲೂ, ರಜ್ಜ್ವಷ್ಟಕಂ—ವಾಸ್ತುಪುರುಷನನ್ನು ಕಟ್ಟುವ ಪಾಶಗಳೆಂಟರ ಸಮಷ್ಟಿ ಏರ್ಪಡುವುದು. ಕೋಣಸ್ಥೌ—ಈಶಾನಮೂಲೆಯಿಂದ ಹಿಡಿದು ನೈಋತ್ಯಮೂಲೆಯವರೆಗೂ, ಆಗ್ನೇಯಮೂಲೆಯಿಂದ ಹಿಡಿದು ವಾಯವ್ಯಮೂಲೆಯವರೆಗೂ ಇರುವ ದೇವತೆಗಳು ವಂಶಕೌ_ವಂಶಕರೆನಿಸಿಕೊಳ್ಳುವರು. ಅಂತರೇ—ಮಧ್ಯದಲ್ಲಿ, ಶ್ರುತಿಪದೇ—ನಾಲ್ಕು ಪದಗಳೊಳಗೆ ಪೂಜಿಸಲ್ಪಡಬೇಕಾದ ದೇವತೆಯು, ವಿಧಿಃ—ಬ್ರಹ್ಮದೇವನೇ ಆಗಿರುವನು. ಪೂರ್ವಾದಿಷಡ್ಭಾಗಗಾಃ—ಆ ಬ್ರಹ್ಮಸ್ಥಾನಕ್ಕೆ ಪೂರ್ವಭಾಗಮೊದಲಾಗಿ ನಾಲ್ಕು ಪಾರ್ಶ್ವಗಳಲ್ಲಿಯೂ ಸಮೀಪಪಂಕ್ತಿಯಲ್ಲಿ ಎರಡು ಪದಗಳು, ಅದರ ಹೊರಪಂಕ್ತಿಯಲ್ಲಿ ಎರಡು ಪದಗಳು ಈ ಆರು ಪದಗಳಲ್ಲಿರುವ, ತ್ರಿದಶಾಃ— ದೇವತೆಗಳು, ಚತ್ವಾರಃ—ಮರೀಚಿ-ವಿವಸ್ವಾನ್-ಮಿತ್ರ-ಪೃಥಿವಿ-ಎಂದು ನಾಲ್ವರಾಗಿರುವರು. ವಿದಿಕ್ಷು—ಆಗ್ನೇಯಮೊದಲಾದ ನಾಲ್ಕು ಮೂಲೆಗಳಲ್ಲಿಯೂ, ಪದಯೋಃ—ಎರಡೆರಡು ಪದಗಳಂತೆ ಆಗುವ ಎಂಟು ಪದಗಳಲ್ಲಿ, ಪದಸ್ಥಾ—ಒಂದೊಂದು ಪದದಲ್ಲಿ ಒಬ್ಬೊಬ್ಬರಂತೆ ಇರುವ ದೇವತೆಗಳು, ದ್ವಾವ್ದ್ವಾ—ಇಬ್ಬಿಬ್ಬರಾದ-ಆಪ-ಆಪವತ್ಸ ಎಂದೂ, ಸವಿತೃ-ಸಾವಿತ್ರ ಎಂದೂ, ಇಂದ್ರ-ಇಂದ್ರಜಯ ಎಂದೂ, ರುದ್ರ-ರುದ್ರದಾಸ ಎಂದೂ ಎಂಟುಮಂದಿಗಳಾಗಿರುವರು. ಬಹಿಃ—ಹೊರಗಿನ ಪಂಕ್ತಿಯಲ್ಲಿ, ಕೋಣಾರ್ಧೇಷು—ನಾಲ್ಕುಮೂಲೆಗಳಲ್ಲಿಯೂ ಇರುವ ಅರ್ಧ ಅರ್ಧಪದಗಳಲ್ಲಿ, ಪದಗಾಃ—ಒಂದೊಂದು ಅರ್ಧಪದಕ್ಕೆ ಒಬ್ಬೊಬ್ಬರಂತೆ ಇರುವ ದೇವತೆಗಳು, ಅಪರೇ ತಥಾಅಷ್ಟ—ಈಶ-ಅಗ್ನಿ-ಪಿತೃ-ವಾಯು ಮೊದಲಾಗಿ ಬೇರೆಯಾದ ಎಂಟುದೇವತೆಗಳಾಗಿರುವರು. ಬಾಹ್ಯೇ—ಆ ಪಂಕ್ತಿಗೆ ಹೊರಭಾಗದಲ್ಲಿ, ಐಶೇಂದ್ರತಃ—ಈಶಾನಾದಿನಾಲ್ಕುಮೂಲೆಗಳಲ್ಲಿಯೂ, ಪೂರ್ವಾದಿಯಾದ ನಾಲ್ಕು ದಿಕ್ಕುಗಳಲ್ಲಿಯೂ ಕ್ರಮವಾಗಿ ಇರುವ ದೇವತೆಗಳು, ಅನ್ಯೇ—ಚರಕೀ-ವಿದಾರೀ-ಪೂತನಾ-ಪಾಪರಾಕ್ಷಸೀ ಎಂದೂ, ಸ್ಕಂದ-ಅರ್ಯಮಾ-ಜಂಭ-ಬಲಿಪಿಂಛ ಎಂದೂ

ಬೇರೆಯಾದ ಎಂಟುಜನಗಳಾಗಿರುವರು. ಈ ಐವತ್ತುಮೂರು ವಾಸ್ತುದೇವತೆಗಳು ಅರವತ್ತುನಾಲ್ಕುಪದಗಳುಳ್ಳ ಮಂಡೂವಾಸ್ತುವೆಂಬ ವಾಸ್ತುಕ್ಷೇತ್ರದಲ್ಲಿ ಪೂಜಿಸಲ್ಪಡತಕ್ಕವರು. ||೧೪೭||

**ಅವತರಣಿಕೆ**— ಎಂಬತ್ತೊಂದು ಕೋಷ್ಠಗಳುಳ್ಳ ಕ್ಷೇತ್ರದಲ್ಲಿ ವಾಸ್ತುಪುರುಷನ ಉದ್ಧಾರಕ್ರಮವನ್ನೂ, ಐವತ್ತುಮೂರು ವಾಸ್ತುದೇವತೆಗಳ ಹೆಸರುಗಳನ್ನೂ ನೂರುನಲವತ್ತೆಂಟು ನೂರುನಲವತ್ತೊಂಬತ್ತು ಮತ್ತು ನೂರೈವತ್ತನೆಯ ಶ್ಲೋಕಗಳಲ್ಲಿ ಹೇಳುತ್ತಾರೆ.—

**ಏಕಾಶೀತಿಪದೇಽಬ್ಜಜೋ ನವಪದಷ್ಷಟ್ತ್ರಿಸ್ಥರಜ್ಜ್ವಷ್ಟಕಂ**
**ಚಾಪಾದ್ಯಾ ದ್ವಿಪದಾ ಮರೀಚಿಕಮುಖಾಷ್ಷಡಾಗ್ನಿಃ ಪದಸ್ಥಾಃ ಪರೇ ।**
**ಬ್ರಹ್ಮಾಽದ್ಯೋಽಥ ಮರೀಚಿಕಶ್ಚ ಸವಿತಾ ಸಾವಿತ್ರವೈವಸ್ವತಾ**
**ವಿಂದ್ರಶ್ಚೇಂದ್ರಜಯೋಽಥ ಮಿತ್ರ ಇತರೋ ರುದ್ರಾಹ್ವಯೋ**
**ರೌದ್ರಕಃ ||೧೪೮||**

**ದಾಸಶ್ಚಾನ್ಯೋ ಧರಾದ್ಯೋ ಧರ ಇತಿ ಚ ತಥಾ ಪಾಪವತ್ಸೌ ಬಹಿಸ್ಸ್ಯಾ**
**ದೀಶಃ ಪರ್ಜನ್ಯನಾಮಾ ಜಯ ಇತಿ ಮಘವಾನ್ ಸೂರ್ಯಸತ್ಯೌ ಭೃಶಶ್ಚ ।**
**ವ್ಯೋಮಾಖ್ಯೋಽಗ್ನಿಶ್ಚ ಪೂಷಾ ವಿತಥ ಇತಿ ಗೃಹಾಧ್ಯಕ್ಷಕಃ ಶ್ರಾದ್ಧದೇವೋ**
**ಗಂಧರ್ವೋ ಭೃಂಗರಾಜೋ ಮೃಗ ಇತಿ ಪಿತೃದೌವಾರಸುಗ್ರೀವ**
**ಸಂಜ್ಞಾಃ ||೧೪೯||**

**ಪೌಷ್ಪೋದಂತಃ ಪ್ರಚೇತಾ ಅಥ ದಿತಿತನುಜಶ್ಶೋಽಷರೋಗೌ ಚ ವಾಯು**
**ರ್ನಾಗೋ ಮುಖ್ಯೋಽಥಭಲ್ಲೋ ವಿಧುರಪಿ ಚ ವರಸ್ಸೌಮ್ಯನಾಮಾಽದಿತಿಶ್ಚ**
**ದಿತ್ಯಾಖ್ಯಾ ಬಾಹ್ಯ ಐಶಾಶ್ಚರಕಿಸುವಿದರೀಪೂತನಾ ಪಾಪರಾಕ್ಷ**
**ಸ್ಯಾಖ್ಯಾಃ ಸ್ಕಂದೋಽರ್ಯಮಾ ಜಂಭಕ ಇತಿ ಬಲಿಪಿಂಛಸ್ತ್ರಿಪಂಚಾಶ**
**ದುಕ್ತಾಃ ||೧೫೦||**

**ಟೀಕೆ**— ಏಕಾಶೀತಿಪದೇ—ಪೂರ್ವಪಶ್ಚಿಮವಾಗಿಯೂ, ದಕ್ಷಿಣೋತ್ತರವಾಗಿಯೂ, ಹತ್ತು ಹತ್ತು ದಾರಗಳನ್ನು ಹೊಡೆದು ಒಂಬೊಂಬತ್ತು ಪದಗಳಂತೆ ಎಂಬತ್ತೊಂದು ಪದಗಳುಳ್ಳುದಾಗಿ ಮಾಡಲ್ಪಟ್ಟ ವಾಸ್ತುಕ್ಷೇತ್ರದಲ್ಲಿ, ಅಬ್ಜಜಃ—ಬ್ರಹ್ಮದೇವನು, ನವಪದಃ—ಮಧ್ಯದಲ್ಲಿ ಒಂಬತ್ತು ಪದಗಳುಳ್ಳವನಾಗುವನು.

ರಜ್ಜ್ವಷ್ಟಕಂ—ಎಂಟು ಪಾಶಸೂತ್ರಗಳ ಸಮಷ್ಟಿಯು, ಷಟ್ಪ್ರಸ್ಥಂ—ಆರು ಪದಗಳಲ್ಲಿಯೂ ಮೂರು ಪದಗಳಲ್ಲಿಯೂ ಇರುವುದು.

ಹೇಗೆಂದರೆ—ಈಶಾನಮೂಲೆಗೆ ದಕ್ಷಿಣಭಾಗದಲ್ಲಿಯೂ, ಪಶ್ಚಿಮಭಾಗದಲ್ಲಿಯೂ, ನಾಲ್ಕನೆಯ ಪದದಿಂದ ಹಿಡಿದು ನೈಋತ್ಯಮೂಲೆಯ ಪೂರ್ವಭಾಗದಲ್ಲಿಯೂ, ಉತ್ತರಭಾಗದಲ್ಲಿಯೂ, ನಾಲ್ಕನೆಯ ಪದದವರೆಗೆ ಹಾಕಿದ ಎರಡು ಸೂತ್ರಗಳೂ, ಹಾಗೆಯೇ ಆಗ್ನೇಯಮೂಲೆಯ ಉತ್ತರಭಾಗದಲ್ಲಿಯೂ, ಪಶ್ಚಿಮಭಾಗದಲ್ಲಿಯೂ, ನಾಲ್ಕನೆಯ ಪದದಿಂದ ಹಿಡಿದು ವಾಯುಮೂಲೆಯ ಪೂರ್ವಭಾಗದಲ್ಲಿಯೂ, ದಕ್ಷಿಣಭಾಗದಲ್ಲಿಯೂ, ನಾಲ್ಕನೆಯ ಪದದವರೆಗೆ ಹಾಕಿದ ಎರಡು ಸೂತ್ರಗಳೂ, ಸೇರಿ ಆರುಪದಗಳಲ್ಲಿ ಪಾಶಸೂತ್ರಗಳು ನಾಲ್ಕು;

ಮತ್ತು—ಈಶಾನಮೂಲೆಯ ದಕ್ಷಿಣಭಾಗದಲ್ಲಿಯೂ ಪಶ್ಚಿಮಭಾಗದಲ್ಲಿಯೂ ಮೂರನೆಯಪದದಿಂದ ಹಿಡಿದು ನೈಋತ್ಯಮೂಲೆಯ ಪೂರ್ವಭಾಗದಲ್ಲಿಯೂ ಉತ್ತರಭಾಗದಲ್ಲಿಯೂ ಮೂರನೆಯಪದದವರೆಗೆ ಹಾಕಿದ ಎರಡುಸೂತ್ರಗಳೂ, ಹಾಗೆಯೇ ಆಗ್ನೇಯಮೂಲೆಯ ಉತ್ತರಭಾಗದಲ್ಲಿಯೂ ಪಶ್ಚಿಮಭಾಗದಲ್ಲಿಯೂ ಮೂರನೆಯಪದದಿಂದ ಹಿಡಿದು ವಾಯುಮೂಲೆಯ ಪೂರ್ವಭಾಗದಲ್ಲಿಯೂ ದಕ್ಷಿಣಭಾಗದಲ್ಲಿಯೂ ಮೂರನೆಯಪದದವರೆಗೆ ಹಾಕಿದ ಎರಡು ಸೂತ್ರಗಳೂ ಸೇರಿ ಮೂರುಪದಗಳಲ್ಲಿ ಪಾಶಸೂತ್ರಗಳು ನಾಲ್ಕು, ಹೀಗೆ ಎಂಟುಪಾಶಸೂತ್ರಗಳ ವಿನ್ಯಾಸಕ್ರಮವನ್ನು ತಿಳಿಯಬೇಕು. ಆಪಾದ್ಯಾಃ—ಆಪ-ಆಪವತ್ಸ ಇವರೇ ಮೊದಲಾದ ಎಂಟು ದೇವತೆಗಳು, ದ್ವಿಪದಾಃ—ಬ್ರಹ್ಮಸ್ಥಾನಕ್ಕೆ ಈಶಾನಭಾಗದಿಂದ ಹಿಡಿದು ಎರಡೆರಡು ಪದಗಳುಳ್ಳವರಾಗಿರುವರು. ಮರೀಚಿಕಮುಖಾಃ—ಮರೀಚಿ-ವಿವಸ್ವಾನ್ ಮೊದಲಾದ ನಾಲ್ಕು ದೇವತೆಗಳು, ಷಡ್ಗಾಃ—ಬ್ರಹ್ಮಸ್ಥಾನದ ಪೂರ್ವಭಾಗಮೊದಲುಗೊಂಡು ನಾಲ್ಕುದಿಕ್ಕುಗಳಲ್ಲಿಯೂ ಆಪ ಮತ್ತು ಆಪವತ್ಸನೇಮೊದಲಾದವರಿರುವ ಪದಗಳಿಗೆ ಸಮೀಪವಾದ ಹೊರಗಡೆಯ ಪಂಕ್ತಿಯಲ್ಲಿ ಪೂರ್ವಭಾಗಮೊದಲಾಗಿ ಆರಾರುಪದಗಳುಳ್ಳವರಾಗಿರುವರು. ಪರೇ—ಉಳಿದ ಈಶಾನಮೊದಲಾದಮೂವತ್ತೆರಡುದೇವತೆಗಳೂ. ಪದಸ್ಥಾಃ—ಎಲ್ಲಕ್ಕಿಂತಲೂ ಹೊರಗಡೆಯದಾದ ಪಂಕ್ತಿಯಲ್ಲಿ ಈಶಾನಮೂಲೆಮೊದಲುಗೊಂಡು ಪ್ರದಕ್ಷಿಣವಾಗಿ ಮೂವತ್ತೆರಡು ಪದಗಳಲ್ಲಿ ಒಬ್ಬೊಬ್ಬರು ಒಂದೊಂದು ಪದವುಳ್ಳವರಾಗಿರುವರು.

ಆದರಮೇಲೆ ಎಲ್ಲಾ ಪದಗಳಿಗೂ ಹೊರಗಡೆಯಲ್ಲಿ ಈಶಾನಾದಿಮೂಲೆಗಳು ನಾಲ್ಕರಲ್ಲಿ ಚರಕೀಮೊದಲಾದ ನಾಲ್ಕು ಸ್ತ್ರೀದೇವತೆಗಳೂ, ಪೂರ್ವಾದಿದಿಕ್ಕುಗಳ

ನಾಲ್ಕರಲ್ಲಿ ಸ್ಕಂದನೇಮೊದಲಾದ ನಾಲ್ಕುಪುಂದೇವತೆಗಳೂ ಪದವಿಲ್ಲದವರಾಗಿಯೇ ಇರುವರು. ಇನ್ನು ವಾಸ್ತುದೇವತೆಗಳ ಹೆಸರುಗಳೆಂತೆಂದರೆ—ಆದ್ಯಃ—ವಾಸ್ತುದೇವತೆಗಳಲ್ಲಿ ಮೊದಲನೆಯವನಾದವನು—ಬ್ರಹ್ಮಾ—ಚತುರ್ಮುಖಬ್ರಹ್ಮದೇವನು ೧. ಅಥ—ಅನಂತರದಲ್ಲಿ, ಮರೀಚಿಕಶ್ಚ—ಮರೀಚಿ ಎಂಬುವನು ೨. ಸವಿತಾ—ಸವಿತಾ ಎಂಬುವನು ೩. ಸಾವಿತ್ರ-ವೈವಸ್ವತೌ—ಸಾವಿತ್ರ-ವೈವಸ್ವತ ಎಂಬುವರಿಬ್ಬರು ೪-೫, ಇಂದ್ರಶ್ಚ—ಇಂದ್ರನು ೬, ಇಂದ್ರಜಯಃ—ಇಂದ್ರಜಯನು ೭, ಮಿತ್ರಃ—ಮಿತ್ರನು ೮, ರುದ್ರಾಹ್ವಯಃ—ರುದ್ರನೆಂಬ ಹೆಸರುಳ್ಳವನು ೯, ರೌದ್ರಕೋದಾಸಃ—ರುದ್ರದಾಸನೆಂಬವನು ೧೦, ಧರಾದ್ಯೋ ಧರಃ-(ಧರಾಧರಃ) ಪೃಥಿವೀಧರನೆಂಬವನು ೧೧, ಆಪಾಪವತ್ಸೌ—ಆಪ-ಆಪವತ್ಸ ಇವರಿಬ್ಬರು ೧೨-೧೩; ಅಂತು ಮರೀಚಿಮೊದಲಾದ ಹನ್ನೆರಡುಜನಗಳಲ್ಲಿ ಮೊದಲನೆಯ ನಾಲ್ವರನ್ನು ಬಿಟ್ಟು ಉಳಿದ ಎಂಟುಜನಗಳೂ ಬ್ರಹ್ಮಸ್ಥಾನಕ್ಕೆ ಸಮೀಪದಲ್ಲಿರುವ ಪಂಕ್ತಿಯಲ್ಲಿರುವರು. ಮರೀಚಿಮೊದಲಾದ ನಾಲ್ವರು ಮಾತ್ರ ಅದಕ್ಕೆ, ಬಹಿಃ—ಹೊರಗಡೆಯ ಪಂಕ್ತಿಯಲ್ಲಿರುವರೆಂದು ತಿಳಿಯಬೇಕು. ಅದರ ಮೇಲೆ ಎಲ್ಲಕ್ಕಿಂತಲೂ ಹೊರಗೆ ಕೊನೆಯ ಪಂಕ್ತಿಯಲ್ಲಿ ಮೂವತ್ತೆರಡು ಪದಗಳೊಳಗೆ ಇರುವ ಮೂವತ್ತೆರಡು ದೇವತೆಗಳ ಹೆಸರೆಂತೆಂದರೆ—ಈಶಃ—ಈಶನು ೧೪, ಪರ್ಜನ್ಯನಾಮಾ—ಪರ್ಜನ್ಯನು ೧೫, ಜಯಃ—ಜಯನು ೧೬, ಮಘವಾನ್—ಮಹೇಂದ್ರನು ೧೭, ಸೂರ್ಯಃ—ಸೂರ್ಯನು ೧೮, ಸತ್ಯಃ—ಸತ್ಯನು ೧೯, ಭೃಶಃ—ಭೃಶನೆಂಬವನು ೨೦, ವ್ಯೋಮಾಖ್ಯಃ—ಅಂತರಿಕ್ಷನು ೨೧, ಅಗ್ನಿಃ—ಅಗ್ನಿಯು ೨೨, ಪೂಷಾ—ಪೂಷನೆಂಬವನು ೨೩, ವಿತಥಃ—ವಿತಥನು ೨೪, ಗೃಹಾಧ್ಯಕ್ಷಕಃ—ಗೃಹಾಧ್ಯಕ್ಷಕನು ೨೫, ಶ್ರಾದ್ಧದೇವಃ—ಯಮನು ೨೬, ಗಂಧರ್ವಃ—ಗಂಧರ್ವನು ೨೭, ಭೃಂಗರಾಜಃ—ಭೃಂಗರಾಜನು ೨೮, ಮೃಗಃ—ಮೃಗನೆಂಬವನು ೨೯, ಪಿತೃದೌವಾರಸುಗ್ರೀವಸಂಜ್ಞಾಃ—ಪಿತೃದೇವತೆಯು ೩೦, ದೌವಾರನು ೩೧, ಸುಗ್ರೀವನು ೩೨, ಪೌಷ್ಪೋದಂತಃ—ಪುಷ್ಪದಂತನು ೩೩, ಪ್ರಚೇತಾಃ—ವರುಣನು ೩೪, ದಿತಿತನುಜಃ—ಅಸುರನು ೩೫, ಶೋಷರೋಗೌ—ಶೋಷನು ೩೬, ರೋಗನು ೩೭, ವಾಯುಃ—ವಾಯುವು ೩೮, ನಾಗಃ—ನಾಗನು ೩೯, ಮುಖ್ಯಃ—ಮುಖ್ಯನೆಂಬವನು ೪೦, ಭಲ್ಲಃ—ಭಲ್ಲನೆಂಬವನು ೪೧, ವಿಧುಃ—ಚಂದ್ರನು (ಸೋಮನು) ೪೨, ಸೌಮ್ಯನಾಮಾ—ಸೌಮ್ಯನೆಂಬ ಹೆಸರುಳ್ಳವನು ೪೩, ಅದಿತಿಶ್ಚ—ಅದಿತಿಯು ೪೪, ದಿತ್ಯಾಖ್ಯಾ—ದಿತಿಯೆಂಬ ಹೆಸರುಳ್ಳ ದೇವತೆಯು ೪೫.

ಈರೀತಿಯಲ್ಲಿ ಈ ಮೂವತ್ತೆರಡು ದೇವತೆಗಳೂ, ಮೊದಲು ಹೇಳಿದ ಹದಿಮೂರು ದೇವತೆಗಳೂ ಅಂತು ಈ ನಲವತ್ತೈದು ದೇವತೆಗಳೂ ಕ್ಷೇತ್ರದ ಪದಗಳನ್ನು ಅವಲಂಬಿಸಿಕೊಂಡಿರುವರು. ಅದರ ಮೇಲೆ ಎಲ್ಲಾ ಪಂಕ್ತಿಗಳಿಗಿಂತಲೂ ಬಾಹ್ಯೇ—ಹೊರಭಾಗದಲ್ಲಿ, ಐಶಾತ್—ಈಶಾನಮೂಲೆಯಿಂದ ಹಿಡಿದು ಕ್ರಮವಾಗಿ, ಚರಕೀ—ಚರಕಿಯು ೪೬, ಸುವಿದರೀ—ವಿದಾರಿಯೆಂಬ ದೇವತೆಯು ೪೭, ಪೂತನಾ—ಪೂತನೆಯು ೪೮, ಪಾಪರಾಕ್ಷಸ್ಯಾಖ್ಯಾ—ಪಾಪರಾಕ್ಷಸೀ ಎಂಬ ದೇವತೆಯು ೪೯, ಈ ನಾಲ್ವರು ಮೂಲೆಗಳಲ್ಲಿ ಪದವಿಲ್ಲದವರಾಗಿರುವರು ; ಮತ್ತು ಅದೇ ಹೊರಭಾಗದಲ್ಲಿ ಪೂರ್ವಮೊದಲಾದ ನಾಲ್ಕು ದಿಕ್ಕುಗಳಲ್ಲಿ ಕ್ರಮವಾಗಿ ಸ್ಕಂದಃ—ಸ್ಕಂದನು ೫೦, ಆರ್ಯಮಾ—ಆರ್ಯಮನೆಂಬವನು ೫೧, ಜಂಭಃ—ಜಂಭನೆಂಬವನು ೫೨, ಬಲಿಪಿಂಛಃ—ಬಲಿಪಿಂಛನೆಂಬವನು ೫೩, ಈ ನಾಲ್ವರೂ ಪದವಿಲ್ಲದವರಾಗಿರುವರು; ತ್ರಿಪಂಚಾಶತ್—ಹೀಗೆ ಈ ಪದಹೀನರಾದ ಎಂಟು ಜನಗಳೂ, ಪದದಲ್ಲಿರುವ ಪೂರ್ವೋಕ್ತರಾದ ನಲವತ್ತೈದುಜನಗಳೂ ಸೇರಿ ಈ ಐವತ್ತುಮೂರು ದೇವತೆಗಳು, ಉಕ್ತಾಃ—ವಾಸ್ತುದೇವತೆಗಳಾಗಿ ಶೈವಾಗಮಗಳಲ್ಲಿ ಹೇಳಲ್ಪಟ್ಟಿರುವರು ||೧೪೮-೧೪೯-೧೫೦||

**ಅವತರಣಿಕೆ**= ಲಿಂಗ, ಪೀಠ ಇವೇ ಮೊದಲಾದವುಗಳಲ್ಲಿ ಧ್ಯಾನಮಾಡಬೇಕಾದ ಆತ್ಮ, ವಿದ್ಯೆ, ಶಿವ ಎಂಬ ಮೂರು ತತ್ತ್ವಗಳ ಸ್ವರೂಪಗಳನ್ನೂ ಆಧಾರಶಕ್ತಿಸ್ವರೂಪವನ್ನೂ ನೂರೈವತ್ತೊಂದನೆಯ ಶ್ಲೋಕದಲ್ಲಿ ತೋರಿಸುತ್ತಾರೆ—

**ಆತ್ಮಾ ವಿದ್ಯಾ ಶಿವಶ್ಚೇತ್ಯುದಿತಮಿಹ ಪದಂ ಯತ್ತು ತತ್ತ್ವತ್ರಯಂ ಸ್ಯಾತ್**
**ಇಚ್ಛಾ ಜ್ಞಾನಕ್ರಿಯಾಽಽವಿಷ್ಕರಣಮಪಿ ಚ ತದ್ಬ್ರಹ್ಮವಿಷ್ಣ್ವೀಶದೇವಂ ।**
**ಪ್ರತ್ಯಾತ್ಮಸ್ಥಂ ಪುನಶ್ಚೋದಿತಮಪಿ ಕುಟಿಲಾಯಾಂ ನಿವೃತ್ತ್ಯಾದಿಭಿನ್ನಂ**
**ಪೂಜ್ಯಾಧಾರಖ್ಯಶಕ್ತ್ಯಾವೃತಮಿತಿ ಚ ತಥಾಹುಸ್ತ್ರಿಧ್ಯಾಽವಸ್ಥಿತಂ ಚ**
**||೧೫೧||**

**ಟೀಕೆ**= ಇಹ—ಈ ಶೈವಸಿದ್ಧಾಂತದಲ್ಲಿ, ಆತ್ಮೇತಿ—ಆತ್ಮತತ್ತ್ವವೆಂಬುದಾಗಿಯೂ, ವಿದ್ಯೇತಿ—ವಿದ್ಯಾತತ್ತ್ವವೆಂಬುದಾಗಿಯೂ, ಶಿವಶ್ಚೇತಿ—ಶಿವತತ್ತ್ವವೆಂಬುದಾಗಿಯೂ, ಉದಿತಂ— ಹೇಳಲ್ಪಟ್ಟ, ತತ್ತ್ವತ್ರಯಂ ಯತ್ಪದಂ—ತತ್ತ್ವತ್ರಯವೆಂಬ ವಸ್ತು ಯಾವುದುಂಟೋ, ತತ್—ಅದು, ಕ್ರಿಯಾಜ್ಞಾನೇಚ್ಛಾಽಽವಿಷ್ಕರಣಂ —ಕ್ರಮವಾಗಿ ಕ್ರಿಯಾಶಕ್ತಿ-ಜ್ಞಾನಶಕ್ತಿ-ಇಚ್ಛಾಶಕ್ತಿಗಳೆಂಬ ಮೂರು

ಶಕ್ತಿಗಳಿಗೆ ಪ್ರಕಾಶಕವಾಗಿಯೂ, ಬ್ರಹ್ಮವಿಷ್ಣ್ವೀಶದೇವಂ—ಬ್ರಹ್ಮ-ವಿಷ್ಣು-ರುದ್ರ ಈ ಮೂವರು ಕ್ರಮವಾಗಿ ಅಧಿದೇವತೆಗಳಾಗಿ ಉಳ್ಳುದಾಗಿಯೂ, ಪ್ರತ್ಯಾತ್ಮಸ್ಥಂ—ಪ್ರತಿಯೊಂದು ಶರೀರಕ್ಕೂ ಉಪಾದಾನಕಾರಣವಾಗಿ ಇರುವಂಥದಾಗಿಯೂ, ಕುಟಿಲಾಯಾಂ—ಕುಂಡಲಿನೀಶಕ್ತಿಯಲ್ಲಿ, ಉದಿತಂ—ಉಂಟಾದುದಾಗಿಯೂ, ನಿವೃತ್ತ್ಯಾದಿಭಿನ್ನಂ—ನಿವೃತ್ತಿ-ಪ್ರತಿಷ್ಠೆ-ವಿದ್ಯೆ-ಶ್ಯಾಂತಿ-ಶಾಂತ್ಯತೀತ ಎಂಬ ಐದುಕಲೆಗಳಿಗಿಂತಲೂ ಭಿನ್ನವಾಗಿಯೂ, ಮತ್ತು ಅವುಗಳಿಗೂ ಉಪಾದಾನಕಾರಣವಾಗಿಯೂ, ಪೂಜ್ಯಾಽಽಧಾರಾಖ್ಯಶಕ್ತ್ಯಾವೃತಂ—ಲಿಂಗದ ಕೆಳಭಾಗದಲ್ಲಿ ಪೂಜಿಸಲ್ಪಡಬೇಕಾದ ಆಧಾರಶಕ್ತಿಯಿಂದ ವ್ಯಾಪಿಸಲ್ಪಟ್ಟುದಾಗಿಯೂ, ತಥಾ—ಹಾಗೆಯೇ, ತ್ರಿಧ್ಯಾವಸ್ಥಿತಂ ಚ—ಬ್ರಹ್ಮಭಾಗವೆಂದೂ, ವಿಷ್ಣುಭಾಗವೆಂದೂ, ರುದ್ರಭಾಗವೆಂದೂ ಮೂರುವಿಧವಾಗಿ ಇರುವಂಥದಾಗಿಯೂ, ಸ್ಯಾದಿತಿ—ಆಗುವುದೆಂದು, ಆಹುಃ—ಶೈವಾಗಮಾಭಿಜ್ಞರು ಹೇಳುತ್ತಾರೆ. ||೧೫೧||

**ಅವತರಣಿಕೆ—** ಕಲ್ಲಿನಿಂದ ಕಟ್ಟುವ ದೇವಾಲಯಕ್ಕೆ ಪ್ರಥಮ ಶಿಲೆಯು ಕಲ್ಲೇ ಆಗಿರಬೇಕು. ಇಟ್ಟಿಗೆಯಿಂದ ಕಟ್ಟುವ ಆಲಯಕ್ಕೆ ಪ್ರಥಮಶಿಲೆಯೂ ಇಟ್ಟಿಗೆಯೇ ಆಗಿರಬೇಕು. ಇಂಥ ಪ್ರಥಮಶಿಲೆಗೆ ಪಾದಶಿಲೆಯೆಂದು ಹೆಸರು. ಇಂಥ ಶಿಲೆಯಲ್ಲಿ ನ್ಯಾಸಮಾಡುವ ಕ್ರಮವನ್ನು ನೂರೈವತ್ತೆರಡನೆಯ ಶ್ಲೋಕದಲ್ಲಿ ಉಪದೇಶಿಸುತ್ತಾರೆ.—

**ಧಾಮ್ನಃ ಪಾದಶಿಲಾ ತ್ರಿಖಂಡಸರಣಿರ್ಧೀಚಿತ್ತಮಾತ್ರಾಂತಿಕಾ**
**ಭೂತಾಂತಾ ಕ್ಷ್ಮಾಂಬು ಶಬ್ದಾವಧಿ ಚ ಹುತವಹಃ ಕರ್ಮಖಾಂತಶ್ಚ ವಾಯುಃ ।**
**ಬುದ್ಧ್ಯಕ್ಷಾಂತಶ್ಚ ಮೇಧಾವಧಿ ಚ ತು ಗಗನಂ ಬ್ರಹ್ಮಮುಖ್ಯಾಸ್ತಥೇಶಾ**
**ಶ್ಯರ್ವಾದ್ಯಾಸ್ತ್ವಷ್ಟಪಕ್ಷೇ ಶಶಿತರಣಿಸಖೋ ಯಜ್ಞಮೂರ್ತಿಶ್ಚ ಬುದ್ಧ್ವಾ ||೧೫೨||**

**ಟೀಕೆ=** ಧಾಮ್ನಃ—ದೇವಾಲಯದ, ಪಾದಶಿಲಾ—ಪಾದಶಿಲೆಯೆಂಬುದು, ತ್ರಿಖಂಡಸರಣಿಃ—ಮೂರುಖಂಡಗಳಾಗಿ ವಿಭಾಗಿಸಲ್ಪಟ್ಟ ಮಾರ್ಗವುಳ್ಳುದಾಗುವುದು. ಧೀಚಿತ್ತಮಾತ್ರಾಂತಿಕಾ—ಬುದ್ಧಿತತ್ತ್ವ, ಮನಸ್ತತ್ತ್ವ, ತನ್ಮಾತ್ರೆ ಇವುಗಳವರೆಗೆ ವ್ಯಾಪ್ತಿಯುಳ್ಳುದಾಗಿಯೂ ಇರುವುದು.

ಇಂಥ ಪಾದಶಿಲೆಯಲ್ಲಿ ಮೂರು ಖಂಡಗಳಲ್ಲಿಯೂ ಮೂರ್ತಿನ್ಯಾಸವನ್ನು ಮಾಡಬೇಕು; ಅದು ಅಷ್ಟಮೂರ್ತಿನ್ಯಾಸವೆಂದೂ ಪಂಚಮೂರ್ತಿನ್ಯಾಸವೆಂದೂ

ಎರಡುವಿಧವಾಗಿರುವುದು ; ಅವುಗಳೊಳಗೆ ಪಂಚಮೂರ್ತಿನ್ಯಾಸಪಕ್ಷದಲ್ಲಿ ಮೂರ್ತಿಗಳಿಗೆ ತತ್ತ್ವವ್ಯಾಪ್ತಿ ಹೇಗೆಂದರೆ—ಕ್ಷ್ಮಾ—ಪೃಥಿವೀಮೂರ್ತಿಯು (ಪಾರ್ಥಿವಮೂರ್ತಿಯು), ಭೂತಾಂತಾ—ಪೃಥಿವಿಮೊದಲುಗೊಂಡು ಆಕಾಶದವರೆಗೆ ವ್ಯಾಪ್ತಿಯುಳ್ಳುದಾಗಿರುವುದು. ಅಂಬು—ಆಪ್ಯಮೂರ್ತಿಯು, ಶಬ್ದಾವಧಿ—ಗಂಧಮೊದಲುಗೊಂಡು ಶಬ್ದದವರೆಗೆ ವ್ಯಾಪ್ತಿಯುಳ್ಳುದಾಗಿರುವುದು. ಹುತವಹಃ—ತೈಜಸಮೂರ್ತಿಯು, ಕರ್ಮಖಾಂತಃ—ಕರ್ಮೇಂದ್ರಿಯಗಳವರೆಗೆ ವ್ಯಾಪ್ತಿಯುಳ್ಳುದಾಗಿರುವುದು. ವಾಯುಃ—ವಾಯವೀಯಮೂರ್ತಿಯು, ಬುದ್ಧ್ಯಕ್ಷಾಂತಃ—ಜ್ಞಾನೇಂದ್ರಿಯಗಳವರೆಗೆ ವ್ಯಾಪ್ತಿಯುಳ್ಳುದಾಗಿರುವುದು, ಗಗನಂ—ನಾಭಸಮೂರ್ತಿಯು (ಆಕಾಶಮೂರ್ತಿಯು), ಮೇಧಾವಧಿ—ಬುದ್ಧಿತತ್ತ್ವದವರೆಗೆ ವ್ಯಾಪ್ತಿಯುಳ್ಳುದಾಗಿರುವುದು.

ಇದರಿಂದ—ಪಾದಶಿಲೆಗಳಲ್ಲಿ ಬುದ್ಧಿತತ್ತ್ವದಿಂದ ಹಿಡಿದು ಪೃಥಿವೀತತ್ತ್ವದವರೆಗೆ ತತ್ತ್ವನ್ಯಾಸವನ್ನು ಮಾಡಬೇಕೆಂದು ಹೇಳಿದಂತಾಯಿತು. ಬ್ರಹ್ಮಮುಖ್ಯಾಃ—ಬ್ರಹ್ಮ-ವಿಷ್ಣು-ರುದ್ರ-ಮಹೇಶ್ವರ-ಸದಾಶಿವ ಎಂಬವರೈವರೂ, ತಥಾ—ಹಾಗೆಯೇ ಕ್ರಮವಾಗಿ ಪ್ರಥಿವ್ಯಾದಿಪಂಚಮೂರ್ತಿಗಳಿಗೂ, ಈಶಾಃ—ಮೂರ್ತೀಶ್ವರರಾಗಿರುವರು. ಅಷ್ಟಪಕ್ಷೇ ತು—ಅಷ್ಟಮೂರ್ತಿನ್ಯಾಸಪಕ್ಷದಲ್ಲಿ, ಶಶಿತರಣಿಸಖಃ—ಚಂದ್ರಮೂರ್ತಿ-ಸೂರ್ಯಮೂರ್ತಿ ಈ ಎರಡರೊಡನೆ ಕೂಡಿದ, ಯಜ್ವಮೂರ್ತಿಶ್ಚ—ಯಜಮಾನಮೂರ್ತಿಯೆಂಬ ಈ ಮೂರು ಮೂರ್ತಿಗಳೊಡನೆ ಸೇರಿ ಮೊದಲಿನ ಐದುಮೂರ್ತಿಗಳು ಅಷ್ಟಮೂರ್ತಿಗಳಾಗುವುವು.

ಇಲ್ಲಿ ಮೂರ್ತಿಗಳಿಗೆ ತತ್ತ್ವವ್ಯಾಪ್ತಿಯು ಹೇಗೆಂದರೆ—ಮೊದಲಿನಂತೆಯೇ ಪೃಥಿವ್ಯಾದಿಮೂರ್ತಿಗಳೈದಕ್ಕೂ ಬುದ್ಧಿತತ್ತ್ವದವರೆಗೆ ವ್ಯಾಪ್ತಿಯಿರುವುದು. ಮೇಲೆ ಚಂದ್ರಸೂರ್ಯಯಜಮಾನಮೂರ್ತಿಗಳು, ಮೂರಕ್ಕೂ ಆಕಾಶಮೂರ್ತಿಗೆ ಹೇಗೋ ಹಾಗೆಯೇ ಬುಧ್ಯಾ—ಬುದ್ಧಿತತ್ತ್ವದಲ್ಲಿಯೇ ವ್ಯಾಪ್ತಿಯು ಅಡಗುವುದು. ಶರ್ವಾದ್ಯಾಃ—ಮತ್ತು ಈ ಪಕ್ಷದಲ್ಲಿ—ಶರ್ವ-ಪಶುಪತಿ-ಉಗ್ರ-ರುದ್ರ-ಭವ-ಮಹೇಶ್ವರ-ಮಹಾದೇವ-ಭೀಮ ಈ ಎಂಟುಮೂರ್ತಿಗಳೂ, ಈಶಾಃ (ಸ್ಯುಃ)—ಮೂರ್ತೀಶ್ವರರಾಗುವರು.

ಹೀಗೆ ಎರಡು ಪಕ್ಷಗಳಲ್ಲಿಯೂ ಮೂರ್ತಿ-ಮೂರ್ತೀಶ್ವರರ ವ್ಯಾಪ್ತಿಯನ್ನು ತಿಳಿದು ಒಂಬತ್ತು ಶಿಲೆಗಳಲ್ಲಿಯೂ ಮೂರ್ತಿ-ಮೂರ್ತೀಶ್ವರರ ನ್ಯಾಸವನ್ನು ಮಾಡಬೇಕೆಂದು ತಿಳಿಯಬೇಕು ||೧೫೨||

**ಅವತರಣಿಕೆ—** ಲಿಂಗದಲ್ಲಿ ಅಂಕಿತವಮಾಡಬೇಕಾದ ಚಿಹ್ನವಿಶೇಷಗಳ ಲಕ್ಷಣಗಳನ್ನು ನೂರೈವತ್ತುಮೂರನೆಯ ಪದ್ಯದಲ್ಲಿ ಹೇಳುತ್ತಾರೆ.—

**ಅರ್ಚ್ಯಾಂಶತ್ರಿದ್ವಿಭಾಗಾತ್ತದಹಿವಿಭಜನಾದೇಕತೋ ವಿಸ್ತರಂ ತ**
**ದ್ರಂಧ್ರಾಂಶಾದ್ರೇಖಯೋಸ್ತದ್ವಿತತಿಸುವಿತತೇ ಲಕ್ಷ್ಮಣೋಽರ್ಧಾಚ್ಚ ಪಕ್ಷ್ಯೌ**
**ಅಷ್ಟಾಭಿರ್ಭಾಜಿತೇಽರ್ಧೇ ನವಭಿರಪಿ ಬಹಿಸ್ಸಪ್ತಭಿಷ್ಷಟ್ಕತೋ ವಾ**
**ಭ್ರಾಂತ್ಯಾಽಧಃ ಪೃಷ್ಠಯೋಗೇ ದ್ವಿತಯವಿರಹತೋ ಲಿಂಗಮೂರ್ಧೇವ**
**ಮೂರ್ಧಾ ||೧೫೩||**

**ಟೀಕೆ—** ಲಿಂಗದಬುಡವು ಬ್ರಹ್ಮಭಾಗವಾಗಿಯೂ, ಮಧ್ಯವು ವಿಷ್ಣುಭಾಗವಾಗಿಯೂ, ಅಗ್ರವು ರುದ್ರಭಾಗವಾಗಿಯೂ ಇರುವುದು. ಈ ರುದ್ರಭಾಗವನ್ನು ಮೂರಾಗಿ ಭಾಗಿಸಿ ಮೇಲಿನ ಒಂದು ಭಾಗವನ್ನು ತಳ್ಳಿ ಉಳಿದ ಎರಡು ಭಾಗಗಳಲ್ಲಿ ಗುರುತುಗಳನ್ನು ಮಾಡಬೇಕು; ಆದುದರಿಂದ ಅರ್ಚ್ಯಾಂಶತ್ರಿದ್ವಿಭಾಗಾತ್— ಪೂಜನೀಯವಾದ ರುದ್ರಭಾಗದಲ್ಲಿ ಮೂರರಲ್ಲೆರಡು ಭಾಗಗಳನ್ನು ತೆಗೆದುಕೊಂಡು, ತದಹಿವಿಭಜನಾತ್—ಅದನ್ನು ಎಂಟಾಗಿ ಭಾಗಿಸುವುದರ ಮೂಲಕ, ಏಕತಃ—ಒಂದು ಭಾಗದಲ್ಲಿ, ವಿಸ್ತರಂ—ಗುರುತಿನ ವಿಸ್ತಾರವನ್ನೂ, ತದ್ರಂಧ್ರಾಂಶಾತ್—ಆ ವಿಸ್ತಾರದ ಒಂಬತ್ತರಲ್ಲೊಂದಂಶದಿಂದ (ಒಂದಂಶದಲ್ಲಿ), ತದ್ರೇಖಯೋಃ—ಆ ಗುರುತಿನ ರೇಖೆಗಳೆರಡಕ್ಕೂ, ವಿತತಿಸುವಿತತೇ—ಅಗಲವನ್ನೂ ಆಳವನ್ನೂ, ಲಕ್ಷ್ಮಣೋಽರ್ಧಾತ್—ಗುರುತಿನ ವಿಸ್ತಾರದ ಅರ್ಧಅಳತೆಯಿಂದ, ಪಕ್ಷ್ಯೌ—ಎರಡು ಪಾರ್ಶ್ವಗಳಲ್ಲಿಯೂ ಕ್ಷೇತ್ರವಿಸ್ತಾರವನ್ನೂ ಮಾಡಿಕೊಂಡು— ಅನಂತರದಲ್ಲಿ, ಅಷ್ಟಾಭಿಃ-ನವಭಿರಪಿ ವಾ—ಎಂಟರಿಂದಲಾಗಲಿ ಒಂಬತ್ತರಿಂದಲಾಗಲಿ, ಭಾಜಿತೇ—ಭಾಗಮಾಡಲ್ಪಟ್ಟ, ಅರ್ಧೇ—ಆ ಗುರುತಿನ ವಿಸ್ತಾರದಲ್ಲಿ ಅರ್ಧವಾದ ಪಾರ್ಶ್ವವಿಸ್ತಾರದಲ್ಲಿ, ಬಹಿಃ—ಹೊರಗೆ ಎಂಟರಲ್ಲಿ ಒಂದನ್ನೂ ಒಂಭತ್ತರಲ್ಲಿ ಎರಡನ್ನೂ ತಳ್ಳಿ, ಸಪ್ತಭಿಃ—ಏಳು ಭಾಗದಿಂದಲಾಗಲಿ, ಅಥವಾ ಹೊರಗೆ ಎಂಟರಲ್ಲಿ ಎರಡು ಭಾಗವನ್ನೂ ಒಂಬತ್ತರಲ್ಲಿ ಮೂರು ಭಾಗವನ್ನೂ ತಳ್ಳಿ, ಷಟ್ಕತೋ ವಾ—ಆರು ಭಾಗದಿಂದಲಾಗಲಿ, ಅಧಃ—ಲಿಂಗದ ಕೆಳಗೆ, ದ್ವಿತಯವಿರಹತಃ—ಎರಡು ಭಾಗವನ್ನು ತಳ್ಳಿ ಐದು ಭಾಗವನ್ನಾಗಲಿ, ನಾಲ್ಕು ಭಾಗವನ್ನಾಗಲಿ ತೆಗೆದುಕೊಂಡು, ಭ್ರಾಂತ್ಯಾ—ಸೂತ್ರಭ್ರಮಣಮಾಡುವುದರಿಂದ, ಪೃಷ್ಠಯೋಗಃ (ಕಾರ್ಯಃ)—ಹಿಂಭಾಗದಲ್ಲಿ ರೇಖಾಸಂಯೋಗವು ಮಾಡಲ್ಪಡತಕ್ಕದು, ಮೂರ್ಧಾ—ಆ ರೇಖೆಯ ಶಿರೋಭಾಗವು, ಲಿಂಗಮೂರ್ಧೇವ—ಲಿಂಗದ ಶಿರೋ

ಭಾಗದಂತೆಯೇ, (ಸ್ಯಾತ್)—ಇರಬೇಕು. ರತ್ನ-ಲೋಹ-ಬಾಣ-ಚಲ ಈ ಲಿಂಗಗಳಿಗೆ ಈ ಗುರುತು ಬೇಕಾಗಿಲ್ಲವೆಂದು ತಿಳಿಯಬೇಕು ||೧೫೩||

**ಅವತರಣಿಕೆ**— ಲಿಂಗಕ್ಕೆ ಆಧಾರವಾಗಿರುವ ಪಿಂಡಿಕೆಯೆಂಬ ಪೀಠದಲ್ಲಿ ಅಂಕಿತವಮಾಡಬೇಕಾದ ಚಿಹ್ನವಿಶೇಷಗಳ ಲಕ್ಷಣಗಳನ್ನು ನೂರೈವತ್ತುನಾಲ್ಕನೆಯ ಪದ್ಯದಲ್ಲಿ ಹೇಳುತ್ತಾರೆ.—

**ಪೀಠೇ ಲಕ್ಷ್ಮ ಭಗಾಕೃತಿಸ್ತು ಪುರತಸ್ತೂರ್ಧ್ವಾಗ್ರಕಂ ಪಿಂಡಿಕಾ**
**ರಂಧ್ರ ಸ್ಯಾಪಿ ಗುಣಾಂಶಭಾಗಯುಗಳೀ ಮೂಲೇ ಭ್ರಮುದ್ವಂದ್ವಯುಕ್ ।**
**ನಾಳಸ್ಯಾರ್ಧತತಂ ಪೃಥುತ್ವನತಯೋರೇಖಾಸ್ಥಯೋಸ್ಸಾಂಘ್ರಿಕೇ**
**ಲಿಕ್ಷಾಯೂಕಯುಗೈಕಹಸ್ತಪರತೋ ಯೂಕೈಕಲಿಕ್ಷೈಕತಃ ||೧೫೪||**

**ಟೀಕೆ**— ಪೀಠೇ—ಲಿಂಗಾಧಾರವಾದ ಪಿಂಡಿಕೆಯೆಂಬ ಪೀಠದಲ್ಲಿ, ಲಕ್ಷ್ಮ—ಗುರುತು, ಪುರತಃ—ಲಿಂಗದ ಮುಂಭಾಗದಲ್ಲಿ, ಪಿಂಡಿಕಾರಂಧ್ರಸ್ಯ—ಪೀಠದ್ವಾರದ, ಗುಣಾಂಶ-ಭಾಗಯುಗಳೀ—ಮೂರರಲ್ಲೊಂದು ಭಾಗವನ್ನು ತಳ್ಳಿ ಉಳಿದ ಎರಡುಭಾಗಗಳಲ್ಲಿ, ಭಗಾಕೃತಿಃ—ಯೋನಿಯ ಆಕಾರವಾಗಿ, ಊರ್ಧ್ವಾಗ್ರಕಂ (ಕಾರ್ಯಂ)—ಮೇಲೆ ತುದಿಯುಳ್ಳುದಾಗುವಂತೆ ಮಾಡಲ್ಪಡಬೇಕು. ಮೂಲೇ—ಪೀಠದ ಮೂಲಭಾಗದಲ್ಲಿ, ಭ್ರಮುದ್ವಂದ್ವಯುಕ್—ಸುತ್ತುರೇಖೆಗಳೆರಡಿರುವಂತೆ ಮಾಡಬೇಕು. ನಾಳಸ್ಯಾರ್ಧತತಂ—ಅದರ ವಿಸ್ತಾರವು ಜಲಮಾರ್ಗದಲ್ಲಿ ಅರ್ಧವಾಗಿರಬೇಕು. ರೇಖಾಸ್ಥಯೋಃ—ಎರಡುರೇಖೆಗಳಲ್ಲಿರುವ, ಪೃಥುತ್ವನತಯೋಃ—ಅಗಲ-ಆಳ-ಇವುಗಳ ಆಳತೆಯು, ಸಾಂಘ್ರಿಕೇ ಲಿಕ್ಷೇ—ಎರಡೂಕಾಲು ಲಿಕ್ಷೆಯಾಗಿರುವುದು. (ಎಂಟುಕೂದಲುಗಳ ಎಳೆಗಳು ಒಂದು ಲಿಕ್ಷೆಯಾಗುವುದು.) ಲಿಕ್ಷಾ—ಎರಡುರೇಖೆಗಳ ಮಧ್ಯವು ಒಂದು ಲಿಕ್ಷೆಯಾಗಿಯೂ, ಯೂಕಯುಗಾ—ನಾಲ್ಕುಯೂಕವಾಗಿಯೂ ಇರಬೇಕು. (ಎಂಟುಲಿಕ್ಷೆಗಳು ಒಂದು ಯೂಕವೆನಿಸಿಕೊಳ್ಳುವುದು.) ಇವೆಲ್ಲವೂ ಏಕಹಸ್ತಲಿಂಗಕ್ಕೆ ಸಂಬಂಧಿಸುವುವು. ಏಕಹಸ್ತಪರತಃ—ಒಂದುಹಸ್ತದ ಪ್ರಮಾಣವನ್ನು ಮೀರಿದ ಲಿಂಗಗಳ ವಿಷಯದಲ್ಲಿ—ರೇಖೆಗಳ ಮಧ್ಯಭಾಗಕ್ಕೆ ಹೇಳಿದ ಆಳತೆಗೆ ಮೇಲೆ ಒಂದೊಂದು ಹಸ್ತಪ್ರಮಾಣ ಹೆಚ್ಚಿದ ಲಿಂಗಗಳಿಗೆ, ಯೂಕೈಕಲಿಕ್ಷೈಕತಃ—ಒಂದೊಂದು ಯೂಕೆಯ ಆಳತೆಯನ್ನೂ, ಒಂದೊಂದು ಲಿಕ್ಷೆಯ ಆಳತೆಯನ್ನೂ ಸೇರಿಸಿಕೊಳ್ಳಬೇಕೆಂದು ತಿಳಿಯಬೇಕು. ||೧೫೪||

**ಅವತರಣಿಕೆ**— ಲಿಂಗದ ಮೂರು ಕಂಠಗಳಲ್ಲಿಯೂ ಆತ್ಮ-ವಿದ್ಯೆ-ಶಿವ ಎಂಬ ಮೂರು ತತ್ತ್ವಗಳೊಡನೆ ಸೇರಿಸಿ ಪೃಥಿವಿಮೊದಲಾದ ಅಷ್ಟಮೂರ್ತಿಗ

ಳಿಗೂ ತತ್ತ್ವವ್ಯಾಪ್ತಿಕ್ರಮವನ್ನು ನೂರೈವತ್ತೈದನೆಯ ಶ್ಲೋಕದಲ್ಲಿ ತೋರಿಸುತ್ತಾರೆ.—

**ವಿದ್ಯಾಶಕ್ತ್ಯಂತಶೈವಾವಧಿ ಶಿವಜನಿತಂ ಚೈತದುಕ್ತಂ ತ್ರಿಖಂಡಂ**
**ಕ್ಷಿತ್ಯಾದ್ಯಾಶ್ಚಾಷ್ಟ ಶರ್ವಾತ್ಪ್ರಭೃತಿ ಚ ಪರಮಾ ಮೂರ್ತಯೋ ಮೂರ್ತಿಪಾಶ್ಚ ।**
**ರಾಗಾಂತಾ ಕ್ಷ್ಮಾಂಬು ಕಾಲಾವಧಿ ಚ ಹುತವಹಶ್ಶುದ್ಧವಿದ್ಯಾವಸಾನೋ**
**ವಾಯುರ್ವಿದ್ಯೇಶ್ವರಾಂತೋ ವಿಯದಪಿ ಚ ಶಶೀ ಯಜ್ವಸೂರ್ಯಶ್ಶಿವಾಂತಃ ॥೧೫೫॥**

**ಟೀಕೆ**— ಬ್ರಹ್ಮಭಾಗ-ವಿಷ್ಣುಭಾಗ-ರುದ್ರಭಾಗ ಎಂದು ಮುಂದಾಗಿ ವಿಭಾಗಿಸಲ್ಪಟ್ಟ ಲಿಂಗದ ಮೂರು ಕಂಠಗಳಲ್ಲಿ ಒಂದೊಂದನ್ನೂ ಮೂರು ಮೂರಾಗಿ ವಿಭಾಗಿಸಿ ಮೂರ್ತಿಗಳ ಮತ್ತು ಮೂರ್ತೀಶ್ವರರ ನ್ಯಾಸವನ್ನು ಮಾಡಬೇಕಾಗಿರುವುದು. ಆದುದರಿಂದ ಅವುಗಳೊಳಗೆ ರುದ್ರಭಾಗದ ಮೂರು ಕಂಠಗಳಲ್ಲಿಯೂ ತತ್ತ್ವವ್ಯಾಪ್ತಿಯನ್ನೂ ಮೂರ್ತಿವ್ಯಾಪ್ತಿಯನ್ನೂ ಈಗ ತೋರಿಸುತ್ತಾರೆ. ಶಿವಜನಿತಂ—ರುದ್ರಭಾಗದಲ್ಲಿ ಉಂಟಾಗಿರುವ, ಏತತ್-ತ್ರಿಖಂಡಂ—ಈ ತತ್ತ್ವತ್ರಯಕಂಠವೂ, ವಿದ್ಯಾಶಕ್ತ್ಯಂತಶೈವಾವಧಿ—ಆತ್ಮತತ್ತ್ವವು ಶುದ್ಧವಿದ್ಯಾತತ್ತ್ವದವರೆಗೂ, ವಿದ್ಯಾತತ್ತ್ವವು ಶಕ್ತಿತತ್ತ್ವದವರೆಗೂ, ಶಕ್ತಿತತ್ತ್ವವು ಶಿವತತ್ತ್ವದವರೆಗೂ ವ್ಯಾಪಿಸಿರುವುದೆಂದು, ಉಕ್ತಂ—ಹೇಳಲ್ಪಟ್ಟದೆ. ಮತ್ತು—ಇಲ್ಲಿ, ಕ್ಷಿತ್ಯಾದ್ಯಾಶ್ಚಾಷ್ಟ—ಪೃಥಿವಿ-ಜಲ-ತೇಜಸ್ಸು-ವಾಯು-ಆಕಾಶ-ಚಂದ್ರ-ಸೂರ್ಯ-ಯಜಮಾನ ಎಂಬ ಮೂರ್ತಿಗಳು ಅಷ್ಟಮೂರ್ತಿಗಳಾಗಿರುವರು; ಶರ್ವಾತ್ಪ್ರಭೃತಿ ಚ-ಅಷ್ಟ—ಶರ್ವನಿಂದ ಹಿಡಿದು ಎಂಟು ಮೂರ್ತಿಗಳು-ಎಂದರೆ ಶರ್ವ-ಪಶುಪತಿ-ಉಗ್ರ-ರುದ್ರ-ಭವ-ಈಶಾನ-ಮಹಾದೇವ-ಭೀಮ ಎಂಬ ಮೂರ್ತಿಗಳು ಅಷ್ಟಮೂರ್ತಿಗಳು, ಪರಮಾಃ—ಪೃಥಿವ್ಯಾದ್ಯಷ್ಟಮೂರ್ತಿಗಳಿಗೆ ಅಧಿಪತಿಗಳಾದ, ಮೂರ್ತಿಪಾಃ—ಮೂರ್ತೀಶ್ವರರಾಗಿರುವರು. ಈ ಮೂರ್ತಿಗಳಿಗೆ ತತ್ತ್ವವ್ಯಾಪ್ತಿಯು ಹೇಗೆಂದರೆ; ಕ್ಷ್ಮಾ—ಪೃಥಿವೀಮೂರ್ತಿಯು, ರಾಗಾಂತಾ—ರಾಗತತ್ತ್ವದವರೆಗೆ ವ್ಯಾಪಿಸಿರುವುದು. ಅಂಬು—ಆಪ್ಯಮೂರ್ತಿಯು, ಕಾಲಾವಧಿ ಚ—ಕಾಲತತ್ತ್ವದವರೆಗೆ ವ್ಯಾಪ್ತಿಯುಳ್ಳುದು. ಹುತವಹಃ—ತೈಜಸಮೂರ್ತಿಯು, ಶುದ್ಧವಿದ್ಯಾವಸಾನಃ—ಶುದ್ಧವಿದ್ಯಾತತ್ತ್ವದವರೆಗೆ ವ್ಯಾಪ್ತಿಯುಳ್ಳುದು. ವಾಯುಃ—ವಾಯವೀಯಮೂರ್ತಿಯೂ, ಅಪಿಚ—ಮತ್ತು, ಶಶೀ—ಚಂದ್ರಮೂರ್ತಿಯೂ, ಯಜ್ವಸೂರ್ಯಃ—ಯಜಮಾನಮೂರ್ತಿಸಹಿತವಾದ ಸೂರ್ಯಮೂರ್ತಿಯೂ (ಈ ನಾಲ್ಕು ಮೂರ್ತಿಗಳೂ),

ಶಿವಾಂತಾಃ—ಶಿವತತ್ತ್ವದವರೆಗೆ ವ್ಯಾಪ್ತಿಯುಳ್ಳವುಗಳಾಗಿರುವುವು. ಹೀಗೆ ತಿಳಿದುಕೊಂಡು ಲಿಂಗದಲ್ಲಿ ತ್ರಿಕಂಠನ್ಯಾಸವನ್ನು ಮಾಡಬೇಕು ||೧೫೫||

**ಅವತರಣಿಕೆ**—ಅಷ್ಟಮೂರ್ತಿಪಕ್ಷದಲ್ಲಿ ಪೀಠದೊಳಗೆ ಮೂರ್ತಿನ್ಯಾಸಸ್ಥಾನವನ್ನು ಹೇಳಿ, ಈಗ ಪಂಚಮೂರ್ತಿಪಕ್ಷದಲ್ಲಿ ತ್ರಿಕಂಠನ್ಯಾಸವನ್ನು ನೂರೈವತ್ತಾರನೆಯ ಶ್ಲೋಕದಲ್ಲಿ ಹೇಳುತ್ತಾರೆ.—

**ಪ್ರೋಕ್ತಾ ಖಂಡೇಷ್ವದಿಕ್ಷು ಸ್ಥಿತಿರಿತಿ ಖಲು ವಾ ಕ್ಷ್ಮಾದಯೋ ಬ್ರಹ್ಮಮುಖ್ಯಾಃ**
**ಪಂಚಾಜಾತಾದಿದಿಕ್ಸ್ಥಾಃ ಪತಯ ಇಹ ಕಿಲ ಪ್ರೋಕ್ತವದ್ವ್ಯಾಪ್ತಿಯುಕ್ತಾಃ**
**ಮಾಯಾಸಾದೇಶಶಕ್ತ್ಯಂತತತಮಿದಮಥಃ ಪೀಠಕಂಠಾಂತಮಾತ್ಮಾ**
**ವಿದ್ಯಾ ಪಿಂಡ್ಯಾಂ ಚ ನಾಳೇ ಶಿವ ಇಹ ಪತಯಸ್ಸ್ಯುಃ ಕ್ರಿಯಾ ದೃಕ್ತಥೇಚ್ಛಾ ||೧೫೬||**

**ಟೀಕೆ**= ಇತಿ—ಈ ರೀತಿಯಾಗಿ ಅಷ್ಟಮೂರ್ತಿನ್ಯಾಸಪಕ್ಷದಲ್ಲಿ, ಕಂಠೇ—ಪೀಠದ ಮೂರುಕಂಠಗಳಲ್ಲಿಯೂ, ಅಷ್ಟದಿಕ್ಷು—ಪೂರ್ವಮೊದಲಾದ ಎಂಟು ದಿಕ್ಕುಗಳಲ್ಲಿ, ಸ್ಥಿತಿಃ—ಅಷ್ಟಮೂರ್ತಿನ್ಯಾಸಕ್ರಮವು, ಪ್ರೋಕ್ತಾ—ಪೂರ್ವಾದಿಕ್ರಮವಾಗಿಯೇ ಹೇಳಲ್ಪಟ್ಟರುವುದು. (ಅಥವಾ)—ಹಾಗಿಲ್ಲದಿದ್ದರೆ-ಪಕ್ಷಾಂತರದಲ್ಲಿಯೂ, ಕ್ಷ್ಮಾದಯಃ ಪಂಚ—ಪೃಥಿವಿಮೊದಲಾದ ಪಂಚಭೂತಗಳೇ, (ಮೂರ್ತಯಃ)—ಮೂರ್ತಿಗಳಾಗುವುವು. ಇಹ—ಈ ಪಂಚಮೂರ್ತಿಪಕ್ಷದಲ್ಲಿ, ಪತಯಃ—ಮೂರ್ತೀಶ್ವರರು, ಬ್ರಹ್ಮಮುಖ್ಯಾಃ ಪಂಚ—ಬ್ರಹ್ಮ-ವಿಷ್ಣು-ರುದ್ರ-ಮಹೇಶ್ವರ-ಸದಾಶಿವ ಎಂಬವರು ಐವರಾಗಿರುವರು. (ತೇ ಚ)—ಆ ಬ್ರಹ್ಮಾದಿಗಳೈವರೂ ಕ್ರಮವಾಗಿ, ಅಜಾತಾದಿದಿಕ್ಸ್ಥಾಃ—ಸದ್ಯೋಜಾತನೇಮೊದಲಾದ ಪಂಚಮೂರ್ತಿಗಳಿರುವ ದಿಕ್ಕುಗಳಾದ ಪೂರ್ವ-ದಕ್ಷಿಣ-ಪಶ್ಚಿಮ-ಉತ್ತರ-ಈಶಾನ ಎಂಬ ಈ ಐದು ದಿಕ್ಕುಗಳಲ್ಲಿಯೂ ಕ್ರಮವಾಗಿ ಇರುವರು. ಪ್ರೋಕ್ತವತ್—ಮತ್ತು ಮೊದಲು ಹೇಳಿದಂತೆಯೇ, ವ್ಯಾಪ್ತಿಯುಕ್ತಾಃ—ತತ್ತ್ವವ್ಯಾಪ್ತಿಯುಳ್ಳವರಾಗಿರುವರು. ಇಹ—ಈ ಪೀಠದೊಳಗೆ (ಪಂಚಮೂರ್ತಿಪಕ್ಷದಲ್ಲಿ) ಇದಂ—ಆತ್ಮ-ವಿದ್ಯೆ-ಶಿವ ಎಂಬ ಈ ತತ್ತ್ವತ್ರಯವೂ ಕ್ರಮವಾಗಿ, ಮಾಯಾಸಾದೇಶಶಕ್ತ್ಯಂತತತಂ-ಆತ್ಮತತ್ತ್ವವು ಮಾಯಾತತ್ತ್ವದವರೆಗೂ, ವಿದ್ಯಾತತ್ತ್ವವು ಸದಾಶಿವತತ್ತ್ವದವರೆಗೂ (ಶಿವತತ್ತ್ವವು) ಶಕ್ತಿತತ್ತ್ವದವರೆಗೂ, ವ್ಯಾಪಿಸಿರುವುದು. (ಕಿಂಚ)—ಮತ್ತು ಆತ್ಮಾ—ಈ ಆತ್ಮತತ್ತ್ವವು, ಅಧಃ—ಪೀಠದ ಮೂಲದಿಂದ ಹಿಡಿದು, ಪೀಠ

ಕಂಠಾಂತಂ—ಪೀಠದ ಕಂಠಸ್ಥಾನದವರೆಗೂ, ವಿದ್ಯಾ—ವಿದ್ಯಾತತ್ತ್ವವು, ಪಿಂಡ್ಯಾಂ—ಕಂಠದಮೇಲಿರುವ ಪಿಂಡಿಕೆಯವರೆಗೂ, ಶಿವಃ—ಶಿವತತ್ತ್ವವು, ನಾಳೇ—ಗೋಮುಖಭಾಗದವರೆಗೂ—ನ್ಯಾಸಮಾಡಲ್ಪಡತಕ್ಕುವುಗಳಾಗಿರುವುವು. (ಕಿಂಚ)—ಮತ್ತು, ಇಹ—ಈ ತತ್ತ್ವತ್ರಯದಲ್ಲಿ (ಕ್ರಮವಾಗಿ) ಕ್ರಿಯಾ—ಕ್ರಿಯಾಶಕ್ತಿಯೂ, ದೃಕ್—ಜ್ಞಾನಶಕ್ತಿಯೂ, ಇಚ್ಛಾ—ಇಚ್ಛಾಶಕ್ತಿಯೂ, ಪತಯಃ-ಸ್ಯುಃ—ಅಧಿದೇವತೆಗಳಾಗಿರುವುವು. ಇಲ್ಲಿ ತತ್ತ್ವತ್ರಯದ ಅಧಿದೇವತೆಗಳನ್ನು ಹೇಳಿದುದಕ್ಕೆ ತತ್ತ್ವತ್ರಯದೊಡನೆ ಅವರನ್ನು ಸೇರಿಸಿ ನ್ಯಾಸಮಾಡಬೇಕೆಂಬುದೇ ವಿವಕ್ಷಿತವು. ||೧೫೬||

**ಅವತರಣಿಕೆ—** ಅಷ್ಟಮೂರ್ತಿಪಕ್ಷ-ಪಂಚಮೂರ್ತಿಪಕ್ಷಗಳೆಂಬ ಎರಡು ಪಕ್ಷಗಳನ್ನನುಸರಿಸಿ ಪಿಂಡಿಕೆಯಲ್ಲಿ ಮೂರ್ತಿನ್ಯಾಸವನ್ನು ಮಾಡುವ ಸಂದರ್ಭದಲ್ಲಿ ಧಾರಿಕೆಮೊದಲಾದ ಶಕ್ತಿಗಳು ಮೂರ್ತ್ಯಧಿದೇವತೆಗಳಾಗುವುವೆಂಬುದನ್ನೂ, ಬ್ರಹ್ಮಶಿಲಾದಿಗಳಲ್ಲಿ ತ್ರಿಕಂಠವ್ಯಾಪ್ತಿಸ್ಥಾನಾದಿಗಳನ್ನೂ ಸೂರೈವತ್ತೇಳನೆಯ ಪದ್ಯದಲ್ಲಿ ತೋರಿಸುತ್ತಾರೆ—

**ಕ್ಷ್ಮಾದ್ಯಾಸ್ವಷ್ಟಸು ಧಾರಿಕಾದಯ ಇಹಾಧೀಶಾಶ್ಚ ವಾ ಮೂರ್ತಯಃ**
**ಕ್ಷ್ಮಾದ್ಯಾಃ ಪಂಚ ತು ವಾಮಯಾ ತದಧಿಪಾಃ ಜ್ಯೇಷ್ಠಾ ಕ್ರಿಯಾದೃಕ್ತಥಾ ।**
**ಇಚ್ಛಾ ಬ್ರಹ್ಮಶಿಲಾತಲೇ ರವಮನಸ್ಸಾಧೀಶಖಂಡ ತ್ರಯಂ**
**ಗೌರ್ಯಾದೇರ್ಗಳಜಾನು ಖಂಡಪರಿಧಿಃ ಪೀಠೋಕ್ತಮೂರ್ತ್ಯಾದಯಃ ॥**
||೧೫೭||

**ಟೀಕೆ—** ಇಹ—ಈ ಪಿಂಡಿಕೆಯಲ್ಲಿ ನ್ಯಾಸಮಾಡಲ್ಪಡುವ, ಕ್ಷ್ಮಾದ್ಯಾಸು—ಪೃಥಿವಿಮೊದಲಾದ, ಅಷ್ಟಸು—ಎಂಟುಮೂರ್ತಿಗಳಲ್ಲಿಯೂ, ಧಾರಿಕಾದಯಃ—ಧಾರಿಕೆಮೊದಲಾದ (ಧಾರಿಕಾ-ದೀಪ್ತಿಮತೀ-ಉಗ್ರಾ-ಜ್ಯೋತ್ಸ್ನಾ-ಭೇದಾ-ಬಿಲೋತ್ಕಟಾ-ದಾತ್ರೀ-ಬಹ್ವೀ) ಎಂಬ ಎಂಟುಶಕ್ತಿಗಳು, ಅಧೀಶಾಃ—ಅಧಿದೇವತೆಗಳಾಗಿರುವುವು. ವಾ ತು—ಅಥವಾ ಪಂಚಮೂರ್ತಿಪಕ್ಷದಲ್ಲಿ, ಕ್ಷ್ಮಾದ್ಯಾಃ—ಪೃಥಿವಿಮೊದಲಾದ, ಪಂಚ—ಐದುಭೂತಗಳೂ, ಪಂಚಮೂರ್ತಯಃ—ಐದುಮೂರ್ತಿಗಳಾಗುವುವು. ತದಾ—ಆಗ, ವಾಮಯಾ—ವಾಮಾಶಕ್ತಿಯೊಡನೆ, ಜ್ಯೇಷ್ಠಾ—ಜ್ಯೇಷ್ಠಾಶಕ್ತಿಯೂ, ದೃಕ್—ಜ್ಞಾನಶಕ್ತಿಯೂ, ತಥಾ—ಹಾಗೆಯೇ ಇಚ್ಛಾ ಚ—ಇಚ್ಛಾಶಕ್ತಿಯೂ, ತದಧಿಪಾಃ—ಆ ಪಂಚಮೂರ್ತಿಗಳಿಗೆ ಅಧಿದೇವತೆಗಳಾಗುವುವು. ಬ್ರಹ್ಮಶಿಲಾತಲೇ—ಬ್ರಹ್ಮಶಿಲೆಯಲ್ಲಿ, ಖಂಡತ್ರಯಂ—ತತ್ತ್ವತ್ರಯದ ಮೂರುಖಂಡವು, ರವಮನಃಸಾಧೀಶಂ—ಆತ್ಮತತ್ತ್ವವು ಶಬ್ದತತ್ತ್ವ

ದವರೆಗೂ,ವಿದ್ಯಾತತ್ತ್ವವು ಮನಸ್ತತ್ತ್ವದವರೆಗೂ,ಶಿವತತ್ತ್ವವು ಸದಾಶಿವತತ್ತ್ವದ ವರೆಗೂ ವ್ಯಾಪಿಸಿರುವುದರಿಂದ ಹಾಗೆಯೇ ನ್ಯಾಸವಮಾಡಬೇಕು. ಗೌರ್ಯಾದೇಃ— ಗೌರೀ-ಮನೋನ್ಮನೀ-ಲಕ್ಷ್ಮೀವೊದಲಾದ ಶಕ್ತಿಗಳಿಗೆ, ಖಂಡಪರಿಧಿಃ—ಮೂರು ಖಂಡಗಳ ವ್ಯಾಪ್ತಿಯೂ, ಗಳಜಾನು—ಶಿರಸ್ಸಿನಿಂದ ಆರಂಭಿಸಿ ಕಂಠದವರೆಗೆ ಶಿವ ತತ್ತ್ವಕ್ಕೂ, ಕಂಠದಿಂದ ಆರಂಭಿಸಿ ಮಂಡಿಯವರೆಗೆ ವಿದ್ಯಾತತ್ತ್ವಕ್ಕೂ (ಪಾದಾವಧಿ)—ಮಂಡಿಯಿಂದ ಆರಂಭಿಸಿ ಪಾದದವರೆಗೆ ಆತ್ಮತತ್ತ್ವಕ್ಕೂ ಆಗುವುದೆಂದು ತಿಳಿದು ನ್ಯಾಸವನ್ನು ಮಾಡಬೇಕು. ಈ ಬ್ರಹ್ಮ-ಶಿರಸ್ಸು-ಗೌರೀವೊದಲಾದವರಿಗೆ ಅಷ್ಟಮೂರ್ತಿ-ಪಂಚಮೂರ್ತಿ ಎಂಬ ಎರಡುಪಕ್ಷಗಳಲ್ಲಿಯೂ ಮೂರ್ತಿನ್ಯಾಸವನ್ನು ಮಾಡುವಾಗ—ಪೀಠೋಕ್ತಮೂರ್ತ್ಯಾದಯಃ—ಮೂರ್ತಿಗಳೂ-ಮೂರ್ತೀಶ್ವರರೂ ಪೀಠಕ್ಕೆ ಹೇಳಿದಂತೆಯೇ ಸ್ಯುಃ—ಆಗುವರು ಎಂದು ತಿಳಿದು ನ್ಯಾಸ ಮಾಡಬೇಕು. ||೧೫೭||

**ಅವತರಣಿಕೆ**= ಲಿಂಗಕ್ಕೆ ಆಶ್ರಯವಾದ ಗರ್ಭಗೃಹವು ಪ್ರಾಸಾದವೆನಿಸಿಕೊಳ್ಳುವುದು. ಪರಮಶಿವನಿಗೆ ಲಿಂಗವು ಸೂಕ್ಷ್ಮಶರೀರವೆಂದೂ, ಪ್ರಾಸಾದವು ಸ್ಥೂಲಶರೀರವೆಂದೂ ಪ್ರಾಜ್ಞರು ಹೇಳುವರಾದಕಾರಣ ಪ್ರಾಸಾದಕ್ಕೆ ಚೈತನ್ಯವು ಸಿದ್ಧಿಸುವುದಕ್ಕಾಗಿ ಅದರ ಮಧ್ಯದಲ್ಲಿ ಸ್ಥಾಪಿಸಲ್ಪಡುವ ಕಲಶವು ಹೃದಯಕುಂಭವೆಂದು ವ್ಯವಹರಿಸಲ್ಪಡುವುದು. ಮತ್ತು ಅಂಥ ಕಲಶದಲ್ಲಿ ಒಂದು ಪುರುಷಾಕಾರ ಪ್ರತಿಮೆಯನ್ನೂ ಇಡಬೇಕು. ಆದಕಾರಣ ಆ ಕಲಶದಲ್ಲಿಯೂ ಆ ಪುರುಷರೂಪದಲ್ಲಿಯೂ ತ್ರಿಕಂಠನ್ಯಾಸದಲ್ಲಿ ತತ್ತ್ವವ್ಯಾಪ್ತಿಯನ್ನು ನೂರೈವತ್ತೆಂಟನೆಯ ಶ್ಲೋಕದಲ್ಲಿ ತೋರಿಸುತ್ತಾರೆ.—

**ಹೃತ್ಕುಂಭೇ ಚ ಮನಃ ಕಲಾ ಚ ಸರಣಿಃ ಖಂಡೇಷು ಮಾಯಾ ನರೇ**
**ಶಬ್ದೋ ಧೀಃ ಪುರುಷಶ್ಚ ಚೂಳಿಕವರೇ ಪ್ರಾಸಾದಕೇ ವಾರಿಧೌ ।**
**ವ್ಯಾಪ್ತಿರ್ಲಿಂಗವದೀರಿತಾತ್ರ ಶಿಖರೇ ಕಂಠೇ ಚ ಜಂಘಾಸ್ಪದೇ**
**ದ್ವಾರೋದುಂಬರಶಾಖಯೋರುಪರಿತಸ್ತತ್ತ್ವತ್ರಯಂ ಸೇಶ್ವರಂ ||೧೫೮||**

**ಟೀಕೆ**= ಹೃತ್ಕುಂಭೇ—ಗರ್ಭಗೃಹಮಧ್ಯದಲ್ಲಿ ಸ್ಥಾಪಿಸಲ್ಪಟ್ಟ ಹೃದಯ ಕುಂಭವೆಂಬ ಕಲಶದಲ್ಲಿಯೂ, ನರೇ ಚ—ಆ ಕಲಶದಲ್ಲಿ ಸ್ಥಾಪಿಸಲ್ಪಟ್ಟ ಪುರುಷ ಪ್ರತಿಮೆಯಲ್ಲಿಯೂ, ಖಂಡೇಷು—ಮೂರು ಕಂಠಗಳಲ್ಲಿಯೂ, ಸರಣಿಃ—ತತ್ತ್ವ ತ್ರಯದ ಮಾರ್ಗವು (ವ್ಯಾಪ್ತಿಯು) ಕ್ರಮವಾಗಿ, ಮನಃ—ಮನಸ್ತತ್ತ್ವದವರೆಗೆ ಆತ್ಮತತ್ತ್ವದ ವ್ಯಾಪ್ತಿಯಾಗಿಯೂ, ಕಲಾ—ಕಲಾತತ್ತ್ವದವರೆಗೆ ವಿದ್ಯಾತತ್ತ್ವದ

ವ್ಯಾಪ್ತಿಯಾಗಿಯೂ, ಮಾಯಾ ಚ—ಮಾಯಾತತ್ತ್ವದವರೆಗೆ ಶಿವತತ್ತ್ವದ ವ್ಯಾಪ್ತಿಯಾಗಿಯೂ ಇರುವುದು.

ಪ್ರಾಸಾದಾಗ್ರಕ್ಕೆ—ಚೂಳಿಕಾ ಅಥವಾ ಸ್ತೂಪಿಕಾ ಎಂಬ ಹೆಸರು ಆಗಮದಲ್ಲಿ ಕೊಡಲ್ಪಟ್ಟಿರುವುವು : ಈ ಚೂಳಿಕೆಯೆಂಬುದು ಪ್ರಾಸಾದದ ಊರ್ಧ್ವ ಭಾಗದಲ್ಲಿ ಲೋಹಮಯವಾಗಿ, ಅಥವಾ ದಾರುಮಯವಾಗಿ ನೀಲವರ್ಣವುಳ್ಳದಾಗಿ ಲಿಂಗದ ಆಕಾರದಂತೆ ಅಡಿಯಲ್ಲಿ ಚತುರಶ್ರವಾಗಿಯೂ, ಮಧ್ಯದಲ್ಲಿ ಎಂಟು ಕೋಣಗಳುಳ್ಳದಾಗಿಯೂ, ತುದಿಯಲ್ಲಿ ಒಂದಂಗುಲಪ್ರಮಾಣದಿಂದ ವರ್ತುಲವಾಗಿಯೂ ಇರಬೇಕು. ಇಂಥ ಲಕ್ಷಣದೊಡನೆ ಕೂಡಿದ ಚೂಳಿಕೆಯಲ್ಲಿಯೂ, ಪ್ರಾಸಾದದಲ್ಲಿಯೂ, ಮತ್ತು ತೀರ್ಥದಲ್ಲಿಯೂ, ತ್ರಿಕಂಠಗಳಲ್ಲಿ ತತ್ತ್ವತ್ರಯವ್ಯಾಪ್ತಿ ಹೇಗೆಂದರೆ —ಚೂಳಿಕವರೇ—ಪ್ರಾಸಾದಾಗ್ರದಲ್ಲಿಯೂ, ಪ್ರಾಸಾದಕೇ—ಪ್ರಾಸಾದದಲ್ಲಿಯೂ, ವಾರಿಧೌ—ದೇವಖಾತವಾದ ತಟಾಕಮೊದಲಾದ ತೀರ್ಥದಲ್ಲಿಯೂ, ಖಂಡೇಷು—ಮೂರು ಕಂಠಗಳಲ್ಲಿ, ಸರಣಿಃ—ತತ್ತ್ವತ್ರಯದ ಮಾರ್ಗವು (ವ್ಯಾಪ್ತಿಯು) ಕ್ರಮವಾಗಿ, ಶಬ್ದಃ—ಶಬ್ದತತ್ತ್ವದವರೆಗೆ ಆತ್ಮತತ್ತ್ವದ ವ್ಯಾಪ್ತಿಯೂ, ಧೀಃ—ಬುದ್ಧಿತತ್ತ್ವದವರೆಗೆ ವಿದ್ಯಾತತ್ತ್ವದ ವ್ಯಾಪ್ತಿಯೂ, ಪುರುಷಶ್ಚ—ಪುರುಷತತ್ತ್ವದವರೆಗೆ ಶಿವತತ್ತ್ವದವ್ಯಾಪ್ತಿಯೂ ಆಗಿರುವುದು. ಅತ್ರ—ಈ ಚೂಳಿಕೆಯೆಂಬ ಪ್ರಾಸಾದಾಗ್ರದಲ್ಲಿ—ಬ್ರಹ್ಮಭಾಗ, ವಿಷ್ಣುಭಾಗ, ರುದ್ರಭಾಗಗಳೆಂಬ ಮೂರು ಭಾಗಗಳ, ವ್ಯಾಪ್ತಿಃ—ವ್ಯಾಪ್ತಿಯು, ಲಿಂಗವತ್—ಲಿಂಗಕ್ಕೆ ಹೇಳಿದಂತೆಯೇ ಅಡಿಯಲ್ಲಿರುವ ಚತುರಶ್ರದಲ್ಲಿ ಬ್ರಹ್ಮಭಾಗವೂ, ಮಧ್ಯದಲ್ಲಿರುವ ಅಷ್ಟಕೋಣಗಳಲ್ಲಿ ವಿಷ್ಣುಭಾಗವೂ, ತುದಿಯಲ್ಲಿರುವ ವರ್ತುಳಾಕಾರದಲ್ಲಿ ರುದ್ರಭಾಗವೂ ಆಗಿರುವುದೆಂದು, ಈರೀತಾ—ಶೈವಾಗಮದಲ್ಲಿ ಹೇಳಲ್ಪಟ್ಟಿರುವುದು.

ಇದರಿಂದ—ತುದಿಯಲ್ಲಿರುವ ವರ್ತುಳಭಾಗದಲ್ಲಿ ರುದ್ರನೊಡನೆ ಶಿವತತ್ತ್ವವನ್ನು ಶಕ್ತಿತತ್ತ್ವಾಂತವಾಗಿಯೂ, ಮಧ್ಯದಲ್ಲಿರುವ ಅಷ್ಟಕೋಣದಲ್ಲಿ ವಿಷ್ಣುವಿನೊಡನೆ ವಿದ್ಯಾತತ್ತ್ವವನ್ನು ಸದಾಶಿವತತ್ತ್ವಾಂತವಾಗಿಯೂ, ಅಡಿಯಲ್ಲಿರುವ ಚತುರಶ್ರದಲ್ಲಿ ಬ್ರಹ್ಮನೊಡನೆ ಆತ್ಮತತ್ತ್ವವನ್ನು ಮಾಯಾತತ್ತ್ವಾಂತವಾಗಿಯೂ ನ್ಯಾಸಮಾಡಬೇಕೆಂದು ಹೇಳಿದಂತಾಯಿತು. ಇನ್ನು ಉಳಿದಿರುವ ಪ್ರಾಸಾದ-ತಟಾಕ ಈ ಎರಡರಲ್ಲಿಯೂ—ಒಳಗಿನ ಆಳವನ್ನು ಮೂರುಭಾಗಮಾಡಿ ಅವುಗಳಲ್ಲಿ ತ್ರಿಕಂಠನ್ಯಾಸವನ್ನು ಮಾಡಬೇಕೆಂದು ತಿಳಿಯಬೇಕು.

ಮತ್ತು—ಗೋಪುರದಲ್ಲಿಯೂ ದ್ವಾರದಲ್ಲಿಯೂ ತ್ರಿಖಂಡನ್ಯಾಸವು ಹೇಗೆಂದರೆ—ಶಿಖರೇ—ಗೋಪುರಾಗ್ರದಲ್ಲಿ ಶಿವತತ್ತ್ವವನ್ನೂ, ಕಂಠೇ—ಗೋಪುರದ

ಕಂಠಸ್ಥಾನದಲ್ಲಿ ವಿದ್ಯಾತತ್ತ್ವವನ್ನೂ, ಜಂಘಾಸ್ಪದೇ—ಗೋಪುರದ ಪಾದಸ್ಥಾನ ದಲ್ಲಿ ಆತ್ಮತತ್ತ್ವವನ್ನೂ, ಮತ್ತು-ಹಾಗೆಯೇ, ದ್ವಾರೋದುಂಬರಶಾಖಯೋಃ— ದ್ವಾರದ ಕೆಳಗಿನ ಸೋಪಾನದಲ್ಲಿ ಆತ್ಮತತ್ತ್ವವನ್ನೂ, ಎರಡು ಪಾರ್ಶ್ವಗಳಲ್ಲಿ ನೆಟ್ಟಿರುವ ಎರಡು ಕೊಂಬೆಗಳಲ್ಲಿ ವಿದ್ಯಾತತ್ತ್ವವನ್ನೂ, ಉಪರಿತಃ—ಮೇಲಿನ ಸೋಪಾನದಲ್ಲಿ ಶಿವತತ್ತ್ವವನ್ನೂ, ತತ್ತ್ವತ್ರಯಂ—ಹೀಗೆ ಉಕ್ತಕ್ರಮದಲ್ಲಿ ತತ್ತ್ವತ್ರಯವನ್ನು, ಸೇಶ್ವರಂ—ಬ್ರಹ್ಮನೇ ಮೊದಲಾದ ಅಧಿದೇವತೆಗಳೊಡನೆ ಕೂಡಿರುವ ಹಾಗೆ ಮಾಯಾಂತವಾಗಿಯೂ ಸದಾಶಿವಾಂತವಾಗಿಯೂ ಶಕ್ತ್ಯಂತ ವಾಗಿಯೂ, (ನ್ಯಸೇತ್) ನ್ಯಾಸಮಾಡಬೇಕು ||೧೫೮||

**ಅವತರಣಿಕೆ**— ಶಿವಲಿಂಗಸ್ಥಾಪನೆಯನ್ನು ಮಾಡಿದವನಿಗೆ ಭೋಗಮೋ ಕ್ಷಗಳೆಂಬ ಎರಡು ಫಲಗಳೂ ಸಿದ್ಧಿಸುವುವೆಂದು ನೂರೈವತ್ತೊಂಬತ್ತನೆಯ ಶ್ಲೋಕದಲ್ಲಿ ತೋರಿಸುತ್ತಾರೆ.

**ಲಿಂಗೇ ಸ್ಥಾಪನತೋ ಭವೇತ್ ಕರಮಿತೇ ಮುಕ್ತಿಃ ಪ್ರಸಂಗಾತ್ಪರಾ**
**ಭುಕ್ತಿಃ ಪೀಠವರೇಽಪಿ ಗರ್ಭವಿಷಯಾನ್ಮಾನಾಚ್ಚ ಲಿಂಗೇ ತಥಾ |**
**ಪಿಂಡೀ ಲಿಂಗಧರೇಷು ಮುಕ್ತಿರಚಲಾ ಬೇರೇಷು ಭೋಕ್ತುಃ ಫಲಂ**
**ಯಾವಂತಃ ಪರಮಾಣವಶ್ಶಿವಗೃಹೇ ಸಾಹಸ್ರಲೋಕಾನಿ ಚ ||೧೫೯||**

**ಟೀಕೆ**— ಒಂಬತ್ತುಹಸ್ತಗಳ ಪ್ರಮಾಣವುಳ್ಳ ಲಿಂಗವನ್ನು ಆರಂಭಿಸಿ ಏಕಹಸ್ತಪ್ರಮಾಣವುಳ್ಳ ಲಿಂಗದವರೆಗೆ ಆಗುವ ಉತ್ತಮೋತ್ತಮಾದಿ ಅಧಮಾ ಧಮಪರ್ಯಂತವಾದ ಒಂಬತ್ತುಬಗೆಯ ಲಿಂಗಗಳ ಪರಿಮಾಣವಿಷಯವಾಗಿ ಆಗ ಮದಲ್ಲಿ,

ಪ್ರಸಂಗಾತ್—ಪ್ರಸ್ತಾವಮಾಡಿರುವುದರಿಂದ, ಕರಮಿತೇ—ಏಕಹಸ್ತ ಮೊದಲುಗೊಂಡು ಒಂಬತ್ತುಹಸ್ತದವರೆಗೆ ಪ್ರಮಾಣವುಳ್ಳದಾಗಿ ಮಾಡಲ್ಪಟ್ಟ, ಲಿಂಗೇ—ಶಿವಲಿಂಗದಲ್ಲಿ, ಸ್ಥಾಪನತಃ—ಶಿವಪ್ರತಿಷ್ಠೆಯನ್ನು ಮಾಡುವುದರಿಂದ ಪರಾ ಮುಕ್ತಿರ್ಭವೇತ್—ಮೇಲಾದ ಮುಕ್ತಿಯುಂಟಾಗುವುದು. ಗರ್ಭವಿಷಯಾತ್ —ಗರ್ಭಗೃಹಕ್ಕೆ ಅನುಗುಣವಾದ, ಮಾನಾತ್—ಪರಿಮಾಣದಿಂದ, (ವಿಹಿತೇ) —ಮಾಡಲ್ಪಟ್ಟ ಎಂದರೆ ಗರ್ಭಗೃಹದ ಅಳತೆಯನ್ನು ಮೂರುಭಾಗಮಾಡಿ ಅದರ ಒಂದುಭಾಗದಲ್ಲಿ ಪೀಠವಿಸ್ತಾರವನ್ನು ಮಾಡಬೇಕೆಂದು ವಿಧಿಯಿರುವಕಾರಣ ಅದ ರಂತೆ ಮಾಡಲ್ಪಟ್ಟ, ಪೀಠವರೇ—ಪಿಂಡಿಕೆಯಲ್ಲಿ, ಸ್ಥಾಪನತಃ—ದೇವೀಪ್ರತಿಷ್ಠೆ ಯನ್ನು ಮಾಡುವುದರಿಂದ, ಪರಾ ಭುಕ್ತಿರ್ಭವೇತ್—ಮೇಲಾದ ಭುಕ್ತಿಯುಂಟಾ ಗುವುದು. ಲಿಂಗೇಽಪಿ—ಲಿಂಗಪ್ರಮಾಣವಿಷಯದಲ್ಲಿಯೂ, ತಥಾ—ಹಾಗೆಯೇ

ಸರಿಯಾಗಿರುವುದು. ಪಿಂಡೀಲಿಂಗಧರೇಷು—ಹೀಗೆ ವಿಧಿಪೂರ್ವಕವಾಗಿ ಮಾಡಲ್ಪಟ್ಟ ಪೀಠಲಿಂಗವುಳ್ಳ, ಬೇರೇಷು—ವ್ಯಕ್ತ-ಅವ್ಯಕ್ತ-ವ್ಯಕ್ತಾವ್ಯಕ್ತ ಎಂದು ಮೂರು ವಿಧವಾದ ಲಿಂಗಭೇದಗಳು, ಸ್ಥಾಪಿತೇಷು ಸತ್ಸು—ಸ್ಥಾಪಿಸಲ್ಪಟ್ಟವಾದರೆ, ಅಚಲಾ ಮುಕ್ತಿರ್ಭವೇತ್—ಶಾಶ್ವತವಾದ ಮುಕ್ತಿಯುಂಟಾಗುವುದು. ಸ್ಥಾಪಿಸಿದವನು ಭೋಗವನ್ನು ಬಯಸುವವನಾಗಿದ್ದರೆ ಭೋಗವುಂಟಾಗುವುದರಲ್ಲಿ ಸಂಶಯವಿಲ್ಲವಾದ ಕಾರಣ, ಭೋಕ್ತುಃ—ಭೋಗವನ್ನು ಅಪೇಕ್ಷಿಸುವವನಿಗೆ, ಫಲಂ—ಫಲವು ಏನೆಂದರೆ, ಶಿವಗೃಹೇ—ಶಿವಾಲಯದಲ್ಲಿ ಇರುವ, ಪರಮಾಣವಃ—ಸೂಕ್ಷ್ಮವಾದ ಧೂಳಿಗಳು, ಯಾವಂತಃ—ಎಷ್ಟುಸಂಖ್ಯೆಯುಳ್ಳವಾಗಿರುವುವೋ, ತಾವತ್ ಸಾಹಸ್ರಲೋಕಾನಿ ಚ—ಅಷ್ಟುಸಂಖ್ಯೆಯುಳ್ಳ ಸಹಸ್ರಕಲ್ಪಗಳವರೆಗೆ, ಕೈಲಾಸವೇ ಮೊದಲಾದ ಶುದ್ಧಭುವನಗಳು ಅವನಿಗೆ ವಾಸಸ್ಥಾನಗಳಾಗುವುವೆಂಬುದೇ ಫಲವಾಗಿರುವುದು. ಆದುದರಿಂದ ಶಿವಲಿಂಗಪ್ರತಿಷ್ಠೆಯ ಫಲವು ಎಣಿಸಲು ಶಕ್ಯವಾದುದಲ್ಲವೆಂದು ಅಭಿಪ್ರಾಯವು ||೧೪೯||

**ಅವತರಣಿಕೆ**= ಶಿವಲಿಂಗಪೂಜೆಯ ಫಲವನ್ನೂ, ಮೂರ್ತಿಪೂಜೆಯ ಫಲವನ್ನೂ, ಶಕ್ತಿಸಹಿತವಾದ ಸದಾಶಿವಾದಿಭುವನೇಶ್ವರರ ಪೂಜೆಯ ಫಲವನ್ನೂ, ಅವರ ಮೂರ್ತಿಗಳಲ್ಲಿ ಶಿವಶಕ್ತಿಗಳ ನ್ಯಾಸಕ್ರಮವನ್ನೂ ಶಾರ್ದೂಲವಿಕ್ರೀಡಿತ ವೃತ್ತರೂಪವಾದ ನೂರಐವತ್ತನೆಯ ಶ್ಲೋಕದಲ್ಲಿಯೂ, ಮತ್ತೊಂದು ಅರ್ಧ ಶ್ಲೋಕದಲ್ಲಿಯೂ ತೋರಿಸುತ್ತಾರೆ.—

**ಲಿಂಗಾರ್ಚಾ ಪರಮುಕ್ತಿದೇಹ ಕಥಿತಾ ಶುದ್ಧಾಧ್ವಜಾಸ್ಸಿದ್ಧಯಃ**
**ಶೈವಾರ್ಚಾರ್ಚನತೋ ಭವಂತಿ ಚ ತಥಾ ಲಿಂಗಾರ್ಚನಾತ್ಸಾಧಕೇ।**
**ಅಂಗಬ್ರಹ್ಮಸದಾಶಿವಶ್ಶಿವಯುತಂ ಶಕ್ತ್ಯಾತ್ಮಿಕಾ ತಚ್ಛಿವಾ**
**ಕಾಲಾಗ್ನ್ಯಾದಿಷು ಸಿದ್ಧದೇವವಪುಷಸ್ಸಾದೇಶಚಿಚ್ಛಕ್ತಿಕಾಃ** ||೧೫೦||
**ತೇಷಾಮೀಶ್ವರಲೋಕಸಂಸ್ಥಿತಿಜುಷಾಂ ಸಂಸ್ಕಾರಯುಕ್ತ್ಯಸ್ತನೌ**
**ದೇವೀನಾಮಪಿ ಶಂಭುಶಕ್ತಿವಿಷಯೋ ನ್ಯಾಸೋ ವಿಧೇಯಸ್ಸದಾ ||**

**ಟೀಕೆ** =ಇಹ—ಈ ಶೈವಾಗಮಗಳಲ್ಲಿ, ಲಿಂಗಾರ್ಚಾ—ಶಿವಲಿಂಗಪೂಜೆಯು, ಪರಮುಕ್ತಿದಾ (ಇತಿ)—ಮೇಲಾದ ಮುಕ್ತಿಯನ್ನು ಕೊಡುವುದೆಂದು, ಕಥಿತಾ—ಹೇಳಲ್ಪಟ್ಟಿರುವುದು. ಶೈವಾರ್ಚಾರ್ಚನತಃ—ಶಿವನನ್ನು ಆವಾಹಿಸಿ ಪೂಜಿಸುವುದಕ್ಕೆ ಆಧಾರಗಳಾಗಿರುವ ಸ್ಥಂಡಿಲವೇಮೊದಲಾದ ಅರ್ಚಾರೂಪಗಳಲ್ಲಿ ಶಿವಪೂಜೆ ಮಾಡುವುದರಿಂದ, ಸಾಧಕೇ—ಪೂಜಿಸುವ ಸಾಧಕನಲ್ಲಿ, ಶುದ್ಧಾಧ್ವಜಾಃ—ಶುದ್ಧಮಾರ್ಗದಲ್ಲಿ ಉಂಟಾಗುವ, ಸಿದ್ಧಯಃ—ಐಶ್ವರ್ಯಾದಿಸಮಸ್ತ

ಸಿದ್ಧಿಗಳೂ, ಭವಂತಿ—ಉಂಟಾಗುತ್ತವೆ. ಲಿಂಗಾರ್ಚನಾತ್—ಶಿವಲಿಂಗಪೂಜೆಯನ್ನು ಮಾಡುವುದರಿಂದಲೂ, ತಥಾ—ಹಾಗೆಯೇ ಶುದ್ಧಮಾರ್ಗದಲ್ಲಿಯ ಐಶ್ವರ್ಯಾದಿಸಿದ್ಧಿಗಳುಂಟಾಗುವುವು. ಅಂಗಬ್ರಹ್ಮಸದಾಶಿವಃ—ಮತ್ತು ಹೃದಯ ಮೊದಲಾದ ಅವಯವಗಳನ್ನೂ, ಈಶಾನಮೊದಲಾದ ಬ್ರಹ್ಮಾಂಗಗಳನ್ನೂ ಮೂರ್ತಿಯಾಗಿ ಸ್ವೀಕರಿಸಿರುವ ಸದಾಶಿವದೇವನೂ, ಶಿವಯುತಾ—ಶಿವನನ್ನು ಬಿಟ್ಟು ಅಗಲದೆ ಇರುವ, ಶಕ್ತ್ಯಾತ್ಮಿಕಾ—ಪರಾಶಕ್ತಿಸ್ವರೂಪಿಣಿಯಾದ, ತಚ್ಛಿವಾ—ಆ ಸದಾಶಿವನ ಭಾರ್ಯೆಯಾದ ಮನೋನ್ಮನೀಶಕ್ತಿಯೂ, ಕಾಲಾಗ್ನ್ಯಾದಿಷು—ಕಾಲಾಗ್ನಿರುದ್ರಭುವನವೇಮೊದಲಾದ ಭುವನಪಂಕ್ತಿಗಳಲ್ಲಿ, ಸಿದ್ಧದೇವವಪುಷಃ—ಸಿದ್ಧಿಯನ್ನು ಹೊಂದಿ ದೇವಶರೀರವನ್ನು ಪಡೆದಿರುವ ಭುವನೇಶ್ವರರೂ, ಸಾದೇಶಚಿಚ್ಛಕ್ತಿಕಾಃ—ಅವರ ಸಮೀಪದಲ್ಲಿರುವ ಸದಾಶಿವಸಂಬಂಧಿನಿಗಳಾದ, ಚಿಚ್ಛಕ್ತಿವಿಲಾಸರೂಪಗಳಾದ ಶಕ್ತಿಗಳೂ, ಸಂಸ್ಕಾರಯುಕ್ತೈಃ—ದೀಕ್ಷಾದಿ ಸಂಸ್ಕಾರವನ್ನು ಪಡೆದು ಭೋಗಮೋಕ್ಷಗಳನ್ನು ಅಪೇಕ್ಷಿಸುವ ಸಾಧಕರಿಂದ, ಸದಾ (ಪೂಜ್ಯಾಃ)—ಯಾವಾಗಲೂ ಪೂಜಿಸಲ್ಪಡತಕ್ಕವರು. ಈಶ್ವರಲೋಕಸಂಸ್ಥಿತಿಜುಷಾಂ—ಮತ್ತು ಈಶ್ವರನಿಂದ ಅಧಿಷ್ಠಿಸಲ್ಪಟ್ಟ ಭುವನಗಳಲ್ಲಿ, ವಾಸವನ್ನು ಪಡೆದಿರುವ, ತೇಷಾಂ—ಸದಾಶಿವನೇ ಮೊದಲಾದ ಆ ದೇವರುಗಳ, ಮತ್ತು, ದೇವೀನಾಮಪಿ—ಮನೋನ್ಮನಿಮೊದಲಾದ ಶಕ್ತಿಗಳ, ತನೌ—ಮೂರ್ತಿಗಳಲ್ಲಿ, ಶಂಭುಶಕ್ತಿವಿಷಯೋಃ ನ್ಯಾಸಃ—ಶಿವಮೂರ್ತಿನ್ಯಾಸವೂ, ಶಕ್ತಿಮೂರ್ತಿನ್ಯಾಸವೂ ವಿಧೇಯಃ—ಮಾಡಲ್ಪಡಬೇಕು ||೧೬೦||

**ಅವತರಣಿಕೆ—** ಬ್ರಹ್ಮಾದಿದೇವತೆಗಳಿಗೆ ತತ್ತ್ವವ್ಯಾಪ್ತಿಯನ್ನು ನೂರರವತ್ತೊಂದನೆಯ ಮತ್ತು ನೂರರವತ್ತೆರಡನೆಯ ಪದ್ಯಗಳಲ್ಲಿ ತೋರಿಸುತ್ತಾರೆ.—

**ಬ್ರಹ್ಮಾವ್ಯಕ್ತಗತಶ್ಚ ಮೋಹಕಗತೋ ವಿಷ್ಣುಶ್ಚ ವಿದ್ಯಾಗತೋ**
**ರುದ್ರಶ್ಚೇಶ್ವರ ಐಶಿಕೋಽಪಿ ಚ ಸದೇಶಾಂತಸ್ಸದೇಶಾತ್ಮಕಃ ||**
**ದುರ್ಗಾರ್ಕೌ ಶೈವತತ್ತ್ವೇ ವೃಷಭವರಮಹಾಶಕ್ತಿಕೇ ವಾಗಧೀಶಃ**
**ಸ್ವಾಹಾನಾಥಸ್ಸದೇಶೇ ಗಣಪತಿಕಮಲೇ ಚೈಶ್ವರೇ ವಾಕ್ತಥೈವ ||೧೬೧||**

**ವಿದ್ಯೇಶಾಶ್ಶುದ್ಧವಿದ್ಯಾಭುವಿ ಚ ಗಣವರಾ ಲೋಕಪಾ ದ್ವಾರಪಾಲಾ**
**ಧರ್ಮಾದ್ಯಾ ಮಾತೃರುದ್ರಾಃ ಶಿವಮತಸಹಿತಾಃ ಕೌಹರಾ ಮೂರ್ತಯಶ್ಚ ||**
**ಲೋಕೇಶಾಸುರಯಕ್ಷಕಿಂನರಮುನಿಕ್ಷೇತ್ರೇಶವೇತಾಳಕಾ**
**ಭೂತಾಸ್ಸರ್ಪಸರಿತ್ಸಮುದ್ರಗಣಪಾ ವಿದ್ಯಾಧರಾಶ್ಚಾಶ್ವಿನೌ ||೧೬೨||**

**ಟೀಕೆ**— ಬ್ರಹ್ಮಾ—ಚತುರ್ಮುಖಬ್ರಹ್ಮದೇವನು, ಅವ್ಯಕ್ತಗತಃ—ಪೃಥಿವೀತತ್ತ್ವವನ್ನು ಆರಂಭಿಸಿ ಪ್ರಕೃತಿತತ್ತ್ವದವರೆಗೆ ವ್ಯಾಪ್ತಿಯುಳ್ಳವನಾಗಿರುವನು. ವಿಷ್ಣುಃ—ವಿಷ್ಣುವು, ಮೋಹಕಗತಃ—ಅದರಮೇಲೆ ಮಾಯಾತತ್ತ್ವದವರೆಗೆ ವ್ಯಾಪ್ತಿಯುಳ್ಳವನಾಗಿರುವನು. ರುದ್ರಃ—ರುದ್ರನು, ವಿದ್ಯಾಗತಃ—ಅದರಮೇಲೆ ಶುದ್ಧವಿದ್ಯಾತತ್ತ್ವದವರೆಗೆ ವ್ಯಾಪ್ತಿಯುಳ್ಳವನಾಗಿರುವನು, ಈಶ್ವರಃ—ಮಹೇಶ್ವರನು, ಐಶಿಕಃ—ಈಶ್ವರತತ್ತ್ವದವರೆಗೆ ವ್ಯಾಪ್ತಿಯುಳ್ಳವನಾಗಿರುವನು. ಸದೇಶಾತ್ಮಕಃ—ಸದಾಶಿವಮೂರ್ತಿಯು, ಸದೇಶಾಂತಃ—ಅದರಮೇಲೆ ಸದಾಶಿವತತ್ತ್ವದವರೆಗೆ ವ್ಯಾಪ್ತಿಯುಳ್ಳವನಾಗಿರುವನು. ದುರ್ಗಾರ್ಕೌ—ಇನ್ನು ಶೈವಾಗಮದ ವಿಧಿಯನ್ನನುಸರಿಸಿ ಪೂಜಿಸಲ್ಪಡುವ—ಪರಾಶಕ್ತಿ-ಶಿವಸೂರ್ಯ ಇವರಿಬ್ಬರೂ, ಶೈವತತ್ತ್ವೇ—ಶಿವತತ್ತ್ವದವರೆಗೆ ವ್ಯಾಪ್ತಿಯುಳ್ಳವರಾಗಿರುವರು. ವೃಷಭವರಮಹಾಶಕ್ತಿಕೇ—ನಂದಿಕೇಶ್ವರನು ಶಕ್ತಿತತ್ತ್ವದವರೆಗೆ ವ್ಯಾಪ್ತಿಯುಳ್ಳವನಾಗಿರುವನು. ವಾಗಧೀಶಃ—ವಾಗೀಶ್ವರನೂ, ಸ್ವಾಹಾನಾಥಃ—ಶಿವಾಗ್ನಿಯೂ, ಸದೇಶೇ—ಸದಾಶಿವತತ್ತ್ವದವರೆಗೆ ವ್ಯಾಪ್ತಿಯುಳ್ಳವರಾಗಿರುವರು. ಗಣಪತಿಕಮಲೇ—ಗಣಪತಿಯೂ ಲಕ್ಷ್ಮಿಯೂ, ತಥೈವ—ಹಾಗೆಯೇ. ವಾಕ್—ವಾಗೀಶ್ವರಿಯೂ, ಐಶ್ವರೇ—ಈಶ್ವರತತ್ತ್ವದವರೆಗೆ ವ್ಯಾಪ್ತಿಯುಳ್ಳವರಾಗಿರುವರು. ವಿದ್ಯೇಶಾಃ—ಅಷ್ಟವಿದ್ಯೇಶ್ವರರು, ಶುದ್ಧವಿದ್ಯಾಭುವಿ—ಶುದ್ಧವಿದ್ಯಾತತ್ತ್ವದವರೆಗೆ ವ್ಯಾಪ್ತಿಯುಳ್ಳವರಾಗಿರುವರು. (ಕಿಂಚ)—ಮತ್ತು, ಗಣವರಾಃ—ನಂದಿಯೇಮೊದಲಾದ ಶಿವಪ್ರಮಥಗಣಗಳೂ, ಲೋಕಪಾಃ—ಇಂದ್ರಾದ್ಯಷ್ಟದಿಕ್ಪಾಲಕರೂ, ದ್ವಾರಪಾಲಾಃ—ಬಾಗಿಲುಕಾಯುವವರೂ, ಧರ್ಮಾದ್ಯಾಃ—ಧರ್ಮ-ಜ್ಞಾನ-ವೈರಾಗ್ಯ-ಐಶ್ವರ್ಯ ಎಂಬ ನಾಲ್ವರೂ, ಮಾತೃರುದ್ರಾಃ—ಸಪ್ತಮಾತೃಗಳೂ ಏಕಾದಶರುದ್ರರೂ, ಶಿವಮತಸಹಿತಾಃ—ಶೈವಮತಸ್ಥರಾಗಿರುವ, ಕೌಹರಾಃ—ಪಾತಾಳವೊದಲಾದ ರಂಧ್ರಸ್ಥಾನಗಳಲ್ಲಿ ವಾಸಮಾಡುತ್ತಿರುವ, ಮೂರ್ತಯಶ್ಚ—ಮೂರ್ತಿಗಳೂ, "ಲೋಕೇಶಾಸುರಯಕ್ಷಕಿನ್ನರಮುನಿಕ್ಷೇತ್ರೇಶವೇತಾಳಕಾಃ—ಭುವನೇಶ್ವರರೂ, ದೈತ್ಯರೂ, ಯಕ್ಷರೂ, ಕಿನ್ನರರೂ, ಋಷಿಗಳೂ, ಕ್ಷೇತ್ರಪಾಲಕರೂ, ಪಿಶಾಚಗಳೂ, ಭೂತಾಃ—ಭೂತಗಳೂ, ಸರ್ಪಸರಿತ್ಸಮುದ್ರಗಣಪಾಃ—ಸರ್ಪಗಳೂ, ನದಿಗಳೂ, ಸಮುದ್ರರಾಜನೂ, ಗಣಾಧಿಪರೂ, ವಿದ್ಯಾಧರಾಃ—ವಿದ್ಯಾಧರರೂ, ಅಶ್ವಿನೌ—ಅಶ್ವಿನೀದೇವತೆಗಳೂ, (ಏತೇ ಸರ್ವೇ)—ಈ ದೇವತೆಗಳೆಲ್ಲರೂ, ತಥೈವ—ಹಾಗೆಯೇ ಶುದ್ಧವಿದ್ಯಾತತ್ತ್ವದವರೆಗೆ ವ್ಯಾಪ್ತಿಯುಳ್ಳವರಾಗಿರುವರು. ||೧೬೧-೧೬೨||

**ಅವತರಣಿಕೆ**= ಈಗ ಗ್ರಂಥಕಾರರು ತಾವು ಮಾಡಿದ ಗ್ರಂಥವನ್ನು ಇಷ್ಟಕ್ಕೆ ಮುಗಿಸಿ, ತಮ್ಮ ಗ್ರಂಥಕ್ಕೆ ನಾಮಕರಣವನ್ನು ಮಾಡಿ ಶೈವಮತಾವಲಂಬಿಗಳಾದ ಪಂಡಿತರ ಸಂತೋಷವನ್ನೂ ಪರಶಿವನ ಪ್ರೀತಿಯನ್ನೂ ಈ ಗ್ರಂಥಕ್ಕೆ ಫಲವಾಗಿ ಅಪೇಕ್ಷಿಸಿ ತಮ್ಮ ಗ್ರಂಥಕ್ಕೆ ವಿಜಯವನ್ನು ನೂರರವತ್ತು ಮೂರನೆಯ ಶ್ಲೋಕದಲ್ಲಿ ಪ್ರಾರ್ಥಿಸುತ್ತಾರೆ.—

**ಶ್ರೀಮಚ್ಛೈವಮತಾರ್ಥಸಾರಖಚಿತಾ ಸಿದ್ಧಾಂತಸಾರಾವಳಿಃ**
**ಶೈವಜ್ಞಾನವತಾ ತ್ರಿಲೋಚನಶಿವಾಚಾರ್ಯೇಣಕ್ಲೃಪ್ತಾ ಶುಭಾ ।**
**ಶ್ರೀಮಚ್ಛೈವಮತಾನುಸಾರಿವಿದುಷಾಮಾನಂದಸಂದಾಯಿನೀ**
**ಶಂಭೋಃ ಪ್ರೀತಿಕರೀ ಸದಾ ವಿಜಯತಾಂ ಶಕ್ತ್ಯಾ ಸಮೇತಸ್ಯ ಚ ||೧೬೩||**

**ಟೀಕೆ**= ಶೈವಜ್ಞಾನವತಾ—ಶೈವಾಗಮಗಳಲ್ಲಿ ಒಳ್ಳೆಯ ಜ್ಞಾನವನ್ನು ಪಡೆದಿರುವ, ತ್ರಿಲೋಚನಶಿವಾಚಾರ್ಯೇಣ—ತ್ರಿಲೋಚನನೆಂಬ ಹೆಸರುಳ್ಳ ಆಚಾರ್ಯನಿಂದ, ಕ್ಲೃಪ್ತಾ—ರಚಿಸಲ್ಪಟ್ಟ, ಶುಭಾ—ಸಮಸ್ತಮಂಗಳಗಳನ್ನೂ ಮಾಡಬಲ್ಲುದಾದುದರಿಂದ ಮಂಗಳಸ್ವರೂಪವಾಗಿರುವ, ಶ್ರೀಮಚ್ಛೈವಮತಾರ್ಥಸಾರಖಚಿತಾ— ಶ್ಲಾಘ್ಯವಾದ ಶೈವಮತದಲ್ಲಿ ಅಂತರ್ಗತವಾಗಿರುವ ಶ್ರೇಷ್ಠವಾದ ಪದಾರ್ಥಗಳಿಂದ ತುಂಬಿರುವ, ಸಿದ್ಧಾಂತಸಾರಾವಳಿಃ—ಸಿದ್ಧಾಂತಸಾರಾವಳಿಯೆಂಬ ಹೆಸರುಳ್ಳ ಈ ಗ್ರಂಥವು, ಶ್ರೀಮಚ್ಛೈವಮತಾನುಸಾರಿವಿದುಷಾಂ—ಶ್ಲಾಘ್ಯವಾದ ಶೈವಮತವನ್ನು ಅವಲಂಬಿಸಿರುವ ಪಂಡಿತರಿಗೆ, ಆನಂದಸಂದಾಯಿನೀ—ಸಂತೋಷವನ್ನು ಕೊಡುವಂಥದಾಗಿಯೂ, ಶಕ್ತ್ಯಾ ಸಮೇತಸ್ಯ—ಪರಾಶಕ್ತಿಯೊಡನೆ ಕೂಡಿರುವ, ಶಂಭೋಃ—ಪರಶಿವನಿಗೆ, ಪ್ರೀತಿಕರೀ—ಪ್ರೀತಿಯನ್ನು ಉಂಟುಮಾಡುವಂಥದಾಗಿಯೂ, ಸದಾ—ಯಾವಾಗಲೂ, ಸರ್ವತ್ರ—ಎಲ್ಲಕಡೆಯಲ್ಲಿಯೂ, ವಿಜಯತಾಂ—ಜಯವನ್ನು ಪಡೆಯಲಿ. ||೧೬೩||

ಇತಿ ಶ್ರೀಮದ್ವಾಬಲಧನ್ವಿಕುಲಾವತಂಸಭೂತೇನ ಪೂರ್ವೋ
ತ್ತರಮೀಮಾಂಸಾಭೂಷಣೇನ ವಿದ್ಯಾನಿಧಿನಾ ದೇವ
ಶಿಖಾಮಣಿರಾಮಾನುಜಾಚಾರ್ಯೇಣ ವಿರ
ಚಿತಾಯಾಂ ಸಿದ್ಧಾಂತಸಾರಾವಳ್ಯಾಃ
ಕರ್ಣಾಟಕಭಾಷಾಮಯಸಂಕ್ಷಿಪ್ತ
ಪದವಿವೃತೌ ಚರ್ಯಾ
ಪಾದಶ್ಚತುರ್ಥಃ
ಸಮಾಪ್ತಾ ಚೇಯಂ ಪದವಿವೃತಿಃ.